




## ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150




## ಫ್ರಾನ್ಸ್‌ನಲ್ಲಿ ಅಂತರ್ಯುದ್ಧ ✦ ತತ್ತ್ವಶಾಸ್ತ್ರದ ದಾರಿದ್ರ್ಯ

## ಕೃತಿಗಳ ಲೋಕಾರ್ಪಣೆ ಮತ್ತು ವಿಚಾರ ಸಂಕಿರಣ (20–5–2018)







ಮೇ 20, 2018ರ ಭಾನುವಾರ ಬೆಂಗಳೂರಿನ ಗಾಂಧಿ ಭವನದಲ್ಲಿ ಅಭೂತಪೂರ್ವ ಸಮಾರಂಭ. ನವಕರ್ನಾಟಕ – ಕ್ರಿಯಾ ಪ್ರಕಾಶನ ಜಂಟಿ ಸಹಯೋಗದಲ್ಲಿ ಹೊರತರುವ "ಮಾರ್ಕ್ಸ್ 200–ಕ್ಯಾಪಿಟಲ್ 150 ಮಾಲಿಕೆಯ ಮೊದಲ ಕಂತಿನ ಎರಡು ಕನ್ನಡ ಕೃತಿಗಳ ಬಿಡುಗಡೆ ಮತ್ತು ವಿಚಾರ ಸಂಕಿರಣ. ಮಾರ್ಕ್ಸ್‌ನ 'ಫ್ರಾನ್ಸ್‌ನಲ್ಲಿ ಅಂತರ್ಯುದ್ಧ' ಮತ್ತು 'ತತ್ತ್ವಶಾಸ್ತ್ರದ ದಾರಿದ್ರ್ಯ' ಕೃತಿಗಳನ್ನು ಡಾ|| ಜಿ. ರಾಮಕೃಷ್ಣ ಅವರ ಅಧ್ಯಕ್ಷತೆಯಲ್ಲಿ ಡಾ|| ಕೆ. ಮರುಳಸಿದ್ದಪ್ಪ ಅವರು ಬಿಡುಗಡೆ ಮಾಡಿದರು. ಡಾ|| ಸಿದ್ದನಗೌಡ ಪಾಟೀಲರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕೃತಿಗಳ ಅನುವಾದಕರಾದ ಶ್ರೀ ವಿಶ್ವ ಕುಂದಾಪುರ ಮತ್ತು ಶ್ರೀ ಕೆ. ಪಿ. ವಾಸುದೇವನ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. 'ಫ್ರಾನ್ಸ್‌ನಲ್ಲಿ ಅಂತರ್ಯುದ್ಧ' ಕೃತಿಯನ್ನು ಡಾ|| ಬಿ. ಆರ್. ಮಂಜುನಾಥ್ ಹಾಗೂ 'ತತ್ತ್ವಶಾಸ್ತ್ರದ ದಾರಿದ್ರ್ಯ' ಕೃತಿಯನ್ನು ಪ್ರೊ|| ವಿ. ಎಸ್. ಲಕ್ಷ್ಮೀನಾರಾಯಣ್ ಪರಿಚಯ ಮಾಡಿಕೊಟ್ಟರು. ಜೊತೆಗೆ ಶ್ರೀ ಕೆ. ಎಸ್. ಪಾರ್ಥಸಾರಥಿಯವರು ಸಂಗ್ರಹಿಸಿರುವ ಕಾರ್ಲ್ ಮಾರ್ಕ್ಸ್‌ನ ಕೆಲವು ಮೌಲಿಕ ನುಡಿಗಳ ಸಂಕಲನ 'ನುಡಿಮಿಂಚು' ಎಂಬ ಕಿರುಪುಸ್ತಕವನ್ನೂ ಬಿಡುಗಡೆ ಮಾಡಲಾಯಿತು.

ಪ್ರೊ|| ವೆಂಕಟೇಶ್ ಆತ್ರೇಯ ಅವರು ' "ಜಾತಿ ದಮನ – ಅಸ್ಪೃಶ್ಯತೆಗಳ ವಿನಾಶ ಮತ್ತು ವರ್ಗ ಹೋರಾಟ – ಮಾರ್ಕ್ಸ್‌ವಾದಿ ಕಣ್ಣೋಟ" ಕುರಿತು ದಿಕ್ಸೂಚಿ ಭಾಷಣ ಮಾಡಿದರು. ವಿಚಾರ ಸಂಕಿರಣದಲ್ಲಿ ಡಾ|| ಎನ್. ಗಾಯತ್ರಿ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿದರು. ಶ್ರೀ ಶಿವಸುಂದರ್ ಮತ್ತು ಶ್ರೀ ಜಿ. ಎನ್. ನಾಗರಾಜ ಅವರು ತಮ್ಮ ವಿಚಾರಗಳನ್ನು ಮಂಡಿಸಿದರು. ನಂತರ ಸಂವಾದ ಕಾರ್ಯಕ್ರಮವಿತ್ತು. ಈ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊಫೆಸರ್ ರಾಜೇಂದ್ರ ಚೆನ್ನಿಯವರು ವಹಿಸಿದ್ದರು.





# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಉಮೇಶ ಹಿರೇಮಠ್, ಗೋಪಿ ಹಿರೇಬೆಟ್ಟು, ಸುನಿಲ್ ಮಿಶ್ರಾ, ಗೀತಾಶಾಸ್ತ್ರಿ, ಜಿ. ಎಮ್. ಬೊಮ್ನಳ್ಳಿ

**ಮುಖಪುಟ :** ರಂಗನತಿಟ್ಟು ಪಕ್ಷಿಧಾಮ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಡ್ಡ ಮೀನು ಸಣ್ಣ ಮೀನನ್ನು ನುಂಗಿತು ಎಂಬ ಮಾತಿದೆ. ಇದು ಪ್ರಕೃತಿಯಲ್ಲಿ ಸಂಭವಿಸುವ ಸಹಜ ಕ್ರಿಯೆಯಿಂದ ಚಾಲ್ತಿಗೆ ಬಂದ ಗಾದೆ ಮಾತು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇದು ಸಾಮಾನ್ಯವಾಗಿ ಸಂಭವಿಸುವ ಪ್ರಕ್ರಿಯೆ. ಗುಡಿಕೈಗಾರಿಕೆಗಳನ್ನು ಧ್ವಂಸಮಾಡಿ ಮೇಲೆದ್ದ ವ್ಯವಸ್ಥೆ ಅದು. ನೂರ ಐವತ್ತು ವರ್ಷಗಳ ಹಿಂದೆಯೇ ಕಾರ್ಲ್ ಮಾರ್ಕ್ಸ್ ಇದನ್ನು ಗುರ್ತಿಸಿದ್ದರು. ಅಮೆರಿಕದ ಬೃಹತ್ ರೀಟೇಲ್ ಸಂಸ್ಥೆ ವಾಲ್‌ಮಾರ್ಟ್ ಭಾರತೀಯ ಒಡೆತನದಲ್ಲಿದ್ದ ಫ್ಲಿಪ್‌ಕಾರ್ಟ್ ಸಂಸ್ಥೆಯ ಮೂಲಕ ಭಾರತದ ಮಾರುಕಟ್ಟೆ ಪ್ರವೇಶಿಸುತ್ತಿದೆ. ಈ ಹಿಂದೆ ವಾಲ್‌ಮಾರ್ಟ್ ಭಾರತೀಯ ಮಾರುಕಟ್ಟೆ ಪ್ರವೇಶಿಸಲು ಪ್ರಯತ್ನಿಸಿತ್ತು, ಆದರೆ ನಿರ್ಬಂಧಗಳಿದ್ದುದರಿಂದ ಅದಕ್ಕೆ ಅವಕಾಶವಾಗಿರಲಿಲ್ಲ. ಅಂಬಾನಿ ಒಡೆತನದ ಸಂಸ್ಥೆಗಳಲ್ಲಿ ಒಂದರೊಂದಿಗೆ ಒಪ್ಪಂದ ಮಾಡಿಕೊಂಡಿತ್ತು. ಈಗ ಮೋದಿ ಸರಕಾರದ ಅಡಿಯಲ್ಲಿ ನೇರವಾಗಿ ಆನ್‌ಲೈನ್ ಮಾರುಕಟ್ಟೆಗೆ ಇಳಿದಿದೆ. ಈಗಾಗಲೇ ಭಾರತದ ಮಾರುಕಟ್ಟೆಯ ಆನ್‌ಲೈನ್ ವ್ಯವಹಾರದಲ್ಲಿ ಅಮೆಜಾನ್ ಎಂಬ ಹೆಸರಿನ ಅಮೆರಿಕದ ಬೃಹತ್ ಸಂಸ್ಥೆ ಭಾರತದ ರೀಟೇಲ್ ಮಾರುಕಟ್ಟೆಯಲ್ಲಿದೆ. ಈ ಕಂಪನಿಯಲ್ಲೇ ನೌಕರಿಯಲ್ಲಿದ್ದ ಬಿನ್ನಿ ಬನ್ಸಾಲ್ ಮತ್ತು ಸಚಿನ್ ಬನ್ಸಾಲ್ ಎಂಬುವರು ಪ್ರಾರಂಭಿಸಿದ್ದ ಫ್ಲಿಪ್‌ಕಾರ್ಟ್ ಕಂಪನಿಯ ಶೇ. ೭೭ ಷೇರುಗಳನ್ನು ೧೬ ಬಿಲಿಯ ಡಾಲರುಗಳನ್ನು ನೀಡಿ ವಾಲ್‌ಮಾರ್ಟ್ ಒಡೆತನ ಪಡೆದಿದೆ. ವಾಣಿಜ್ಯ ವಲಯದಲ್ಲಿ ಇದೊಂದು ಅತಿ ದೊಡ್ಡ ‘ಕೂ’ (ಒಳಸಂಚು) ಎಂದು ಪರಿಗಣಿಸಲಾಗಿದೆ. ಸೋಪಿನಿಂದ ಸ್ಮಾರ್ಟ್ ಫೋನ್‌ವರೆಗೆ, ಪುಸ್ತಕಗಳಿಂದ ಉಡುಪುಗಳವರೆಗೆ ೮೦ ಮಿಲಿಯ ವಸ್ತುಗಳನ್ನು ನೂರಾರು ಮಿಲಿಯ ಗ್ರಾಹಕರಿಗೆ ಆನ್‌ಲೈನ್‌ನಲ್ಲಿ ಒದಗಿಸುತ್ತಿದ್ದ ಫ್ಲಿಪ್‌ಕಾರ್ಟ್ ಈಗ ವಾಲ್‌ಮಾರ್ಟ್ ವಶ. ಅಂದರೆ ಹೆಚ್ಚು ಕಡಿಮೆ ಅಮೆರಿಕದ ಅಮೆಜಾನ್ ಹಾಗೂ ವಾಲ್‌ಮಾರ್ಟ್ ಸಂಪೂರ್ಣವಾಗಿ ಭಾರತದ ಆನ್‌ಲೈನ್ ವ್ಯವಹಾರವನ್ನು ವಶಪಡಿಸಿಕೊಂಡಿವೆ ಎಂದಾಯಿತು. ಇದರಿಂದ ಸಣ್ಣ ವ್ಯಾಪಾರಿಗಳು ದಿವಾಳಿಯಾಗುವ ಸಂಭವವಿದೆ. ಈಗಾಗಲೆ ದೆಹಲಿಯ ವ್ಯಾಪಾರಸ್ಥರು ವಾಲ್‌ಮಾರ್ಟ್ ವ್ಯವಹಾರವನ್ನು ವಿರೋಧಿಸಿ ಪ್ರತಿಭಟಿಸಿದ್ದಾರೆ. ಈ ಮೊದಲು ಕಿಶೋರ್ ಬಯಾನಿಯ ‘ಬಿಗ್ ಬಜಾರ್’, ಅಂಬಾನಿಯ ‘ರಿಲಯನ್ಸ್ ಫ್ರೆಷ್’, ಕುಮಾರ್ ಬಿರ್ಲಾನ ‘ಮೋರ್’ ಮಾರುಕಟ್ಟೆ ಪ್ರವೇಶಿಸಿದಾಗಲೆ ಸಾಕಷ್ಟು ಚಿಲ್ಲರೆ ವ್ಯಾಪಾರಿಗಳು ಬೀದಿಪಾಲಾದರು. ಈಗ ವಾಲ್‌ಮಾರ್ಟ್ ಇನ್ನೂ ಯಾರು ಯಾರನ್ನು ಕಬಳಿಸುವುದೋ ನೋಡಬೇಕು.

✳ ✳ ✳

‘ಒಪ್ಪಂದಗಳನ್ನು ಮುರಿಯುವುದರಲ್ಲಿ ನಿಸ್ಸೀಮ’ ಎಂಬ ಬಿರುದು ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್‌ಗೆ ಒಪ್ಪುತ್ತದೆ. ಪ್ಯಾರಿಸ್ ಪರಿಸರ ಮಾಲಿನ್ಯ ಒಪ್ಪಂದದಿಂದ ಕಳಚಿಕೊಂಡ ಮೇಲೆ, ಯುನೆಸ್ಕೋದಿಂದ ಹೊರಬಂದು, ಇದೀಗ ಇರಾನಿನ ನ್ಯೂಕ್ಲಿಯರ್ ಒಪ್ಪಂದವನ್ನು ಮುರಿದಿದ್ದಾನೆ ಡೊನಾಲ್ಡ್ ಟ್ರಂಪ್. ಹಿಂದಿನ ಯಾವ ಅಮೆರಿಕದ ಅಧ್ಯಕ್ಷರುಗಳೂ ಈತನಷ್ಟು ಮೋಸವಾಗಿರಲಿಲ್ಲ. ಜಾರ್ಜ್ ಬುಷ್ ಯುದ್ಧದಾಹಿಯಾಗಿದ್ದರೂ ಅನಿರೀಕ್ಷಿತ ನಿರ್ಧಾರಗಳಿಗೆ ಹೆಸರಾಗಿರಲಿಲ್ಲ. ಅಧಿಕಾರ ವಹಿಸಿಕೊಂಡ ಹದಿನೈದು ಹದಿನಾರು ತಿಂಗಳಲ್ಲೇ ಹಿಂದಿನದೆಲ್ಲವನ್ನೂ ಗಾಳಿಗೆ ತೂರುವಂಥ ಕ್ರಮಗಳನ್ನು ಕೈಗೊಂಡಿರುವ ಟ್ರಂಪ್ ಮಹಾಶಯ ಅಮೆರಿಕದ ಮಿತ್ರರಾಷ್ಟ್ರಗಳಿಗೂ ತಲೆನೋವಾಗಿದ್ದಾನೆ. ಒಂದು ರೀತಿಯ ಮೊಂಡುತನ, ಒಣಪ್ರತಿಷ್ಠೆಗೆ ಹೆಸರುವಾಸಿ ಈತ.

ಇರಾನಿನೊಂದಿಗೆ ಅಮೆರಿಕದ ಸೆಣಸಾಟ, ಹಗೆತನ ಅರ್ಧ ಶತಮಾನಕ್ಕೂ ಹಳೆಯದು. ಇರಾನಿನಲ್ಲಿ ಷಾ ಆಡಳಿತ ಅಂತ್ಯಗೊಂಡು ಖೊಮೇನಿ ಬೆಂಬಲಿಗರು ಅಧಿಕಾರಕ್ಕೆ ಬಂದಾಗಿನಿಂದ ಇದ್ದದ್ದೆ. ಅದು ತಾರಕಕ್ಕೇರಿದ್ದು ಜಾರ್ಜ್ ಬುಷ್ ಅಧಿಕಾರಾವಧಿಯಲ್ಲಿ. ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎಂಬ ನಿರಾಧಾರವಾದ ಆರೋಪದಿಂದ.

(೭ನೇ ಪುಟಕ್ಕೆ )






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೯ ಸಂಚಿಕೆ–೧೧ ಜೂನ್ ೨೦೧೮





■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೧, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೪

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೧೬೯೧೧, ೨೨೧೬೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


# ಸಂಪಾದಕೀಯ

## ನೀರಿದ್ದಾಗ ಹಂಚಿಕೆಗೆ ಅಭ್ಯಂತರವಿಲ್ಲ

**ಕ**ರ್ನಾಟಕದ ಮುಖ್ಯಮಂತ್ರಿ ಸ್ಥಾನಕ್ಕೆ ಆಯ್ಕೆಯಾಗಿರುವ ಶ್ರೀ ಎಚ್. ಡಿ. ಕುಮಾರಸ್ವಾಮಿಯವರು ರಂಗನಾಥನ ದರ್ಶನಕ್ಕೆಂದು ಶ್ರೀರಂಗಕ್ಕೆ ಹೋದರೋ ಅಥವಾ ಕಾವೇರಿ ನೀರಿನ ಹಂಚಿಕೆಯ ಬಗ್ಗೆ ತಮಿಳುನಾಡು ಸರ್ಕಾರವು ತೀರಾ ಮೊಂಡುತನದಿಂದ ವರ್ತಿಸುತ್ತಿರುವುದನ್ನು ಅವ್ಯಾವಹಾರಿಕ ನಡತೆಯೆಂದು ನೇರವಾಗಿ ತಿಳಿಸಲು ಹೋದರೋ ತಿಳಿಯದು, ಆದರೆ ಅವರು ದೇವಸ್ಥಾನದೆದುರೇ ಹರಿಯುತ್ತಿರುವ ಕಾವೇರಿಯ ಬಳಿ ಪತ್ರಕರ್ತರ ಒಂದು ಪ್ರಶ್ನೆಗೆ ಸರಿಯಾದುತ್ತರ ನೀಡಿದ್ದಾರೆ: "ನೀರಿದ್ದಾಗ ಕಾನೂನುರೀತ್ಯಾ ವಿಧಿಸಲಾಗಿರುವ ಪ್ರಮಾಣದ ನೀರನ್ನು ಹರಿಸಲು ನಾವು ಬದ್ಧರಾಗಿದ್ದೇವೆ. ಆದರೆ ನೀರೇ ಇಲ್ಲದಿದ್ದಾಗ ಹರಿಸಬೇಕೆಂದರೆ ಅದು ತಿಳಿವಳಿಕೆಯಿಲ್ಲದ ಮಾತಾಗುತ್ತದೆ. ಮಾನ್ಯ ರಜನಿಕಾಂತ್ ಅವರು ಕರ್ನಾಟಕದ ಅಣೆಕಟ್ಟುಗಳಿಗೆ ಭೇಟಿ ನೀಡಬೇಕೆಂದು ಅವರನ್ನು ಆಹ್ವಾನಿಸುತ್ತೇನೆ."

ಕರ್ನಾಟಕದಲ್ಲಿ ಮೇ ೧೫ರಿಂದ ಮೂರು ನಾಲ್ಕು ದಿನ ಸರ್ಕಾರವೆಂಬುದು ಹೆಚ್ಚು ಕಡಿಮೆ ಸ್ಥಗಿತಗೊಂಡಿದ್ದಾಗ ಸರ್ವೋಚ್ಚ ನ್ಯಾಯಾಲಯವು ಕಾವೇರಿ ನೀರಿನ ಹಂಚಿಕೆಯನ್ನು ನಿಯಂತ್ರಿಸುವ ಅಥವಾ ಮೇಲುಸ್ತುವಾರಿ ಜವಾಬ್ದಾರಿಯನ್ನು ಹೊರುವ "ಕಾವೇರಿ ನೀರು ಯೋಜನೆಯ ಕಾರ್ಯನಿರ್ವಾಹಕ ಮಂಡಲಿ"ಯ ಬಗೆಗಿನ ಕೇಂದ್ರ ಸರ್ಕಾರದ ನಿಯಮಾವಳಿಯನ್ನು ಅಂಗೀಕರಿಸಿ, ಅದರಂತೆ ಎಲ್ಲವನ್ನೂ ಅನುಷ್ಠಾನಕ್ಕೆ ತರಬೇಕೆಂದು ಸೂಚಿಸಿದೆ. ಮುಂಗಾರು ಮಳೆಯ ಆರಂಭಕ್ಕೆ ಮುನ್ನವೇ ಅದರ ಅನುಷ್ಠಾನ ಪ್ರಕ್ರಿಯೆಯು ಆರಂಭವಾಗಬೇಕೆಂದು ಸಹ ಸೂಚಿಸಿದೆ. ಕರ್ನಾಟಕದಲ್ಲಿ ಹೊಸ ಸರ್ಕಾರದ ರಚನೆಯಾಗುವ ತನಕ ಆಜ್ಞೆ ಹೊರಡಿಸಬಾರದೆಂಬ ಕರ್ನಾಟಕದ ಮನವಿಯನ್ನು ನ್ಯಾಯಾಲಯವು ತಿರಸ್ಕರಿಸಿದ್ದು, "ಎಂಥದೋ ಒಂದು ಸರ್ಕಾರ ಇದ್ದೇ ಇದೆಯಲ್ಲವೇ?" ಎಂಬ ಪ್ರಶ್ನೆಯನ್ನು ಹಾಕಿ ನ್ಯಾಯಾಲಯವು ತನ್ನ ಕ್ರಮವನ್ನು ಸಮರ್ಥಿಸಿಕೊಂಡಿದೆ.

ಮಾನ್ಯ ಯಡಿಯೂರಪ್ಪನವರ ಮೂರು ದಿನಗಳ ರಾಜ್ಯಭಾರ ಕೊನೆಗೊಂಡಿದ್ದು ಕಾವೇರಿ ನೀರಿನ ಸಮಸ್ಯೆಯ ಹಿನ್ನೆಲೆಯಲ್ಲಿ ನೋಡಿದರೆ ಒಂದು ರೀತಿ ಸ್ವಾಗತಾರ್ಹವೆನಿಸುತ್ತದೆ; ಏಕೆಂದರೆ ಯಾವ ಭಾಜಪ ಸರ್ಕಾರವೂ ಕೇಂದ್ರದ ನಡೆಗಳನ್ನು ಟೀಕಿಸಿದ್ದಾಗಲಿ, ಪ್ರಶ್ನಿಸಿದ್ದಾಗಲಿ ಇಲ್ಲ. ಚಕಾರವೆತ್ತದೆ ಕೇಂದ್ರದ ಸಲಹೆಯನ್ನು ಯಡಿಯೂರಪ್ಪನವರು ಒಪ್ಪಿಕೊಳ್ಳಬೇಕಾಗುತ್ತಿತ್ತು. ಆಯಾ ತಿಂಗಳುಗಳಲ್ಲಿ ನೀರಿನ ಪ್ರಮಾಣಕ್ಕೆ ಅನುಗುಣವಾಗಿಯೇ ನೀರು ಹರಿಸಬಹುದಾದ ಪ್ರಮಾಣವನ್ನು ನಿಗದಿಗೊಳಿಸಬೇಕೆಂದು ಒತ್ತಾಯಿಸಲು ಕರ್ನಾಟಕದ ಸರ್ಕಾರಕ್ಕೆ ಹಕ್ಕು ಇದ್ದೇ ತೀರಬೇಕು. "ಈ ಬಾರಿ ಚೆನ್ನಾಗಿ ಮಳೆ ಬೀಳಲೆಂದು ರಂಗನಾಥನನ್ನು ಬೇಡಿಕೊಂಡಿದ್ದೇನೆ" ಎಂದು ತಿರುಚ್ಚಿಯಲ್ಲಿ ಕುಮಾರಸ್ವಾಮಿ ಹೇಳಿರುವುದು ಔಚಿತ್ಯಪೂರ್ಣವಾಗಿದೆ.

ಕೇಂದ್ರವು ಮಂಡಿಸಿದ್ದ ಕರಡು ಯೋಜನೆಯನ್ನು ನ್ಯಾಯಾಲಯ ಮತ್ತು ತಮಿಳುನಾಡು ಸರ್ಕಾರ ಭಾಗಶಃ ವಿರೋಧಿಸಿದ್ದರಿಂದ ಅದನ್ನು ಸ್ವಲ್ಪ ಮಾರ್ಪಡಿಸಿ ಅಂತಿಮಗೊಳಿಸಲಾಗಿದೆ. ಒಂದು ಸ್ವಾಗತಾರ್ಹ ಬದಲಾವಣೆಯೆಂದರೆ ಮಂಡಲಿಯ ಕಚೇರಿಯನ್ನು ಬೆಂಗಳೂರಿನಲ್ಲಿ ಸ್ಥಾಪಿಸುವ ಬದಲು ಅದನ್ನು ನವದೆಹಲಿಯಲ್ಲೇ ಉಳಿಸಿಕೊಳ್ಳಲಾಗಿದೆ. "ಕಾವೇರಿ ನೀರು ನಿರ್ವಹಣಾ ಪ್ರಾಧಿಕಾರ"ವೆಂದು ಮಂಡಲಿಯ ಹೆಸರನ್ನು ಸಹ ಮಾರ್ಪಡಿಸಲಾಗಿದೆ. ರಾಜ್ಯಗಳು "ಸಹಕರಿಸದಿದ್ದ ಪಕ್ಷದಲ್ಲಿ" ಪ್ರಾಧಿಕಾರವು ಕೇಂದ್ರದ ನೆರವನ್ನು ಬಯಸಬಹುದು. ಆದರೆ ಕೇಂದ್ರದ ಅಭಿಪ್ರಾಯವು ಅಂತಿಮ ನಿರ್ಧಾರವಲ್ಲ; ಬದಲಾಗಿ, ಪ್ರಾಧಿಕಾರವು ನಿರ್ಧಾರವನ್ನು ಕೈಗೊಳ್ಳುತ್ತದೆ. ನೀರಿನ ಶೇಖರಣೆ, ಹಂಚಿಕೆಯಾಗಬೇಕಾದ ನೀರಿನ ಪ್ರಮಾಣ, ನೀರಿನ ನಿಯಂತ್ರಣ, ಇವೆಲ್ಲಾ ಪ್ರಾಧಿಕಾರದ ಪರಿಧಿಗೆ ಸೇರುತ್ತವೆ. ಕೇಂದ್ರದ ಶಿಫಾರಸ್ಸುಗಳನ್ನು ಕರ್ನಾಟಕ ಸರ್ಕಾರವು ಪೂರ್ಣವಾಗಿ ಒಪ್ಪದೆ ಕೆಲವು ಆಕ್ಷೇಪಗಳನ್ನೆತ್ತಿತ್ತು, ಏಕೆಂದರೆ ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಹೊರತಾದ ಕೆಲವು ಅಂಶಗಳನ್ನು ಕೇಂದ್ರವು ಸೇರಿಸಿದ್ದಿತು. "ನಮ್ಮ ನೀರು ಮೂಲಭೂತವಾಗಿ ನಮ್ಮ ಹಕ್ಕು" ಎಂಬ ಸೂತ್ರವನ್ನು ಕಡೆಗಣಿಸಕೂಡದೆಂಬುದು ಕರ್ನಾಟಕದ ನಿಲುವು. ಅಣೆಕಟ್ಟುಗಳನ್ನು ಪ್ರಾಧಿಕಾರದ ಹತೋಟಿಗೆ ನೀಡಬೇಕೆಂದು ತಮಿಳುನಾಡು ಮತ್ತು ಕೇಂದ್ರ ಸರ್ಕಾರ ಹೇಳಿದ್ದುದುಂಟು. ಅದು ಸರ್ವಾಧಿಕಾರಿ ಧೋರಣೆಯಾಗಿರುತ್ತಿತ್ತು. ಈಗ ಭಾಗಶಃ ಅದನ್ನು ಕೈಬಿಟ್ಟಿರುವುದು ಉಸಿರಾಡಲು ಕರ್ನಾಟಕಕ್ಕೆ ಚೈತನ್ಯ ನೀಡಿದಂತಾಗಿದೆ. ಸರ್ವೋಚ್ಚ ನ್ಯಾಯಾಲಯವು ವಿಧಿಸಿರುವ ನೀರಿನ ಪ್ರಮಾಣವನ್ನು ಮೀರಿ ನೀರು ಹರಿಸಲು ಪ್ರಾಧಿಕಾರವೇನಾದರೂ ಮುಂದಾದರೆ ಅದನ್ನು ಸರ್ವಥಾ ನಿಗ್ರಹಿಸಬೇಕಾದ್ದು ಕರ್ನಾಟಕದ ಹಕ್ಕು ಮತ್ತು ಜವಾಬ್ದಾರಿ. ಹೆಚ್ಚಿನ ನೀರು ಹರಿಸಬಾರದೆಂದಲ್ಲ, ಆದರೆ ಸಾಧ್ಯವಿದ್ದರೆ ಮಾತ್ರ ಹರಿಸಬಹುದು ಎಂಬುದು ರಾಜ್ಯದ ನಿಲುವು. ತೊಡಕಿನ ವಿಷಯವೆಂದರೆ ಪ್ರಾಧಿಕಾರದ ತೀರ್ಮಾನಗಳು ಬಹುಮತದಿಂದೇನಾದರೂ ನಿರ್ಧಾರವಾಗುವ ಸಂದರ್ಭ ಬಂದರೆ ಕರ್ನಾಟಕದ ಹಿತಕ್ಕೆ

ವ್ಯತಿರಿಕ್ತವಾದ ತೀರ್ಮಾನ ಪ್ರಕಟವಾಗುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ; ಆಗ ಮತ್ತೆ ಕೇಂದ್ರ ಮತ್ತು ಸರ್ವೋಚ್ಚ ನ್ಯಾಯಾಲಯಗಳ ಮರ್ಜಿಗೆ ಸಿಲುಕಿಕೊಳ್ಳಬೇಕಾಗುತ್ತದೆ. ಎರಡನೆಯದಾಗಿ, ಕಾವೇರಿ ಅಚ್ಚುಕಟ್ಟು ಪ್ರದೇಶದಲ್ಲಿ ನೀರಿನ ಹೆಚ್ಚಿನ ಅವಶ್ಯಕತೆಯು ಉಂಟಾಗಬಹುದಾದ ಯೋಜನೆಗಳನ್ನೇನಾದರೂ ರಾಜ್ಯವು ಹಮ್ಮಿಕೊಳ್ಳಬೇಕೆಂದಿದ್ದರೆ ಅದಕ್ಕೆ ಪ್ರಾಧಿಕಾರದ ಪೂರ್ವಸಮ್ಮತಿಯು ಅವಶ್ಯಕ. ಅಂದರೆ, ಹೆಚ್ಚಿನ ಪ್ರದೇಶಕ್ಕೆ ನೀರಾವರಿ ಸೌಲಭ್ಯ, ಮೇಕೆದಾಟು ಅಣೆಕಟ್ಟು ಹಾಗೂ ವಿದ್ಯುತ್ ಯೋಜನೆ, ಮುಂತಾದುವಕ್ಕೆ ಮೊದಲೇ ಅಂಗೀಕಾರ ಪಡೆಯಬೇಕು.

ಸಂವಿಧಾನದ ಏಳನೆಯ ಶೆಡ್ಯೂಲ್‌ನಲ್ಲಿ ನೀರಿನ ಶೇಖರಣೆ ಮತ್ತು ಬಳಕೆಯ ವಿಷಯವನ್ನು ಆಯಾ ರಾಜ್ಯಗಳ ಅಧಿಕಾರ ವಲಯಕ್ಕೆ ಸೇರಿಸಲಾಗಿದೆ. ಈಗ ಪ್ರಾಧಿಕಾರಕ್ಕೆ ನೀಡಲಾಗಿರುವ ಅಧಿಕಾರವು ರಾಜ್ಯಗಳ ಹಕ್ಕುಗಳನ್ನು ಮೊಟಕುಗೊಳಿಸುತ್ತದೆಂಬ ಆಕ್ಷೇಪವನ್ನು ಕೇರಳ ಮತ್ತು ಕರ್ನಾಟಕ ರಾಜ್ಯಗಳು ಸರ್ವೋಚ್ಚ ನ್ಯಾಯಾಲಯದೆದುರು ತರ್ಕಬದ್ಧವಾಗಿ ಮಂಡಿಸಿದ್ದವು. ಎಂಥದೋ ಸಬೂಬು ಹೇಳಿ ನ್ಯಾಯಾಲಯವು ಆಕ್ಷೇಪವನ್ನು ತಳ್ಳಿಹಾಕಿದೆ. ಇದರಿಂದ ಮುಂದೆ ಎಂತಹ ಮುಗ್ಗಟ್ಟು ಎದುರಾಗಬಹುದೆಂಬುದನ್ನು ಊಹಿಸಿಕೊಳ್ಳಬಹುದು; ಅದನ್ನು ಹೇಗೆ ಪರಿಹರಿಸಿಕೊಳ್ಳುತ್ತೇವೆಂಬುದನ್ನು ನಮ್ಮ ರಾಜ್ಯ ಸರ್ಕಾರವು ಈಗಿನಿಂದಲೇ ಆಲೋಚನೆ ಮಾಡಿ ಸೂಕ್ತ ಹಾದಿಯನ್ನು ಕಂಡುಕೊಳ್ಳಬೇಕು. ಮಳೆಯ ಕೊರತೆ ಇಲ್ಲದಿದ್ದರೆ, ಎಲ್ಲಾ ಸುಸೂತ್ರವೇ; ಆದರೆ ಮಳೆ ಬೀಳದಿದ್ದಾಗ ನೀರಿನ ಶೇಖರಣೆ ಕಡಿಮೆ ಇರುತ್ತದೆ. ಆಗ ತಮಿಳುನಾಡಿನ ಸರ್ಕಾರವನ್ನು ಮಣಿಸುವುದು ಹೇಗೆ? ಪ್ರಾಧಿಕಾರದ ಒಲವು ವಸ್ತುನಿಷ್ಠವಾಗಿರುವುದೇ? ನಮ್ಮ ರಾಜ್ಯದ ಯೋಜನೆಗಳಿಗೆ ತಡೆಯೊಡ್ಡಲಾದರೆ ಅದನ್ನು ಹೇಗೆ ನಿಭಾಯಿಸುತ್ತೇವೆ? ಈ ಮೂರು ಪ್ರಶ್ನೆಗಳಿಗೆ ನಮ್ಮ ರಾಜ್ಯದ ಉತ್ತರವನ್ನು ಈಗಲೇ ಕ್ರಮಬದ್ಧವಾಗಿ ಸಿದ್ಧಗೊಳಿಸಿಕೊಳ್ಳಬೇಕಾದ ಅಗತ್ಯವಿದೆ. ಸಂತೆಗೆ ಮೂರು ದಿನ ಮುಂಚೆ ನೇಯ್ಗೆ ಕೆಲಸ ಆರಂಭಿಸುತ್ತೇವೆಂಬ ಧಾನಸ ಪ್ರವೃತ್ತಿ ಸಲ್ಲದು. ಆಗ ಮೂರು ಮೊಳದ ಬಟ್ಟೆಯೂ ಇಲ್ಲದೆ ಸಂತೆಗೆ ಹೋಗಿ ಕೈ ಅಲ್ಲಾಡಿಸಿಕೊಂಡು ಹಿಂದಿರುಗಬೇಕಾಗಿ ಬಂದೀತು, ಎಚ್ಚರವಿರಲಿ.

## ಚುನಾವಣೆಯ ಹಿಂದೆ ಮುಂದೆ

**ಕ**ರ್ನಾಟಕದ ರಾಜ್ಯಪಾಲ ವಜೂಭಾಯಿ ವಾಲ ರಾಜಿನಾಮೆ ನೀಡಿ ರಾಜಭವನವನ್ನು ಇನ್ನೂ ಖಾಲಿ ಮಾಡಿಲ್ಲ, ಮಾಡುವ ಸೂಚನೆಯೂ ಇಲ್ಲ. ಸ್ವಯಂ-ಗೌರವ ಎಂಬುದೇನಾದರೂ ಇದ್ದರೆ ಈಗಲೂ ರಾಜಿನಾಮೆ ನೀಡಲು ಅವಕಾಶವಿದೆ. ರಾಜ್ಯಪಾಲರನ್ನು ಟೀಕಿಸುವುದು ಪತ್ರಿಕಾಧರ್ಮವಲ್ಲ, ಸನ್ನಡತೆಯಲ್ಲ, ಎಂಬ ಮಾತೊಂದಿದೆ. ವಿನಾಕಾರಣ ಟೀಕಿಸುವುದು ಇಲ್ಲವೇ ವೈಯ್ಯಕ್ತಿಕವಾಗಿ ಮಾನಹಾನಿ ಮಾಡುವುದು ಸಲ್ಲದೆಂಬುದಷ್ಟೇ ಅದರ ಅರ್ಥ. ರಾಜ್ಯಪಾಲರು ಚುನಾವಣಾ ಫಲಿತಾಂಶದ ಪ್ರಕಟಣೆಯ ನಂತರ ಕೈಗೊಂಡ ತೀರ್ಮಾನಗಳು ಭಾರತದ ಸಂವಿಧಾನದ ಆಶಯಕ್ಕೆ ಚ್ಯುತಿ ತರಬಹುದಂಥವಾಗಿದ್ದುವು. ನಿಶ್ಚಿತವಾಗಿ ಬಹುಮತವಿದ್ದ ಎರಡು ಪಕ್ಷಗಳ ಸಮ್ಮಿಶ್ರ ಸರ್ಕಾರಕ್ಕೆ ಅಧಿಕಾರ ನೀಡುವ ಬದಲು ಶಾಸಕರ ವ್ಯಾಪಾರಗಳಿಂದ ಮಾತ್ರವೇ ಬಹುಮತ ಪಡೆಯುವ ಸಿದ್ಧತೆಯಲ್ಲಿದ್ದ ಪಕ್ಷಕ್ಕೆ ಚಿನ್ನದ ತಟ್ಟೆಯಲ್ಲಿ ಅಧಿಕಾರವನ್ನಿಟ್ಟು ಉಡುಗೊರೆ ನೀಡಿದ್ದ ರಾಜ್ಯಪಾಲರ ಮೊದಲ ಕ್ರಮವು ಆಕ್ಷೇಪಾರ್ಹ ಮಾತ್ರವಲ್ಲ, ಅದು ಖಂಡನೀಯ. ಎರಡನೆಯದಾಗಿ, ಬಹಳ ಧಾರಾಳತನದಿಂದ ವ್ಯಾಪಾರಕ್ಕೆ ಸೂಕ್ತ ಮಾರುಕಟ್ಟೆ ರಚಿಸಿಕೊಡುವ ಅಪ್ರಕಟಿತ ಉದ್ದೇಶದಿಂದ ಬಹುಮತ ಸಾಧಿಸಲು ಭಾರತೀಯ ಜನತಾ ಪಕ್ಷಕ್ಕೆ ಅವರು ಹದಿನೈದು ದಿನಗಳ ಗಡುವನ್ನು ಕೊಟ್ಟರು. ಸದ್ಯ, ಎರಡು ತಿಂಗಳ ಗಡುವನ್ನು ವಿಧಿಸಲಿಲ್ಲ ಎಂಬುದು ಸ್ವಾಗತಾರ್ಹ. ಅವರ ಎರಡೂ ಕ್ರಮಗಳು ಅರ್ಥರಹಿತವಾದವು, ಅಸಾಧುವಾದವು, ಎಂದು ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಮಾನವು ರಾಜ್ಯಪಾಲರಿಗೆ ಗೌರವ ತರುವುದಿಲ್ಲ. ಈಗಾಗಲೆ ಇಂತಹ ಪ್ರಕರಣಗಳನ್ನು ದೇಶದ ನಾನಾ ರಾಜ್ಯಗಳಲ್ಲಿ ಹೇಗೆ ನಿಭಾಯಿಸಲಾಗಿತ್ತು, ಅಂತಹ ತೀರ್ಮಾನಗಳಿಗೆ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳು ಏನಿದ್ದುವು, ಎಂಬುದು ರಾಜ್ಯಪಾಲರಿಗೆ ತಿಳಿದಿತ್ತು ಇಲ್ಲವೇ ತಿಳಿದಿರಬೇಕಾಗಿತ್ತು. ಭಾರತೀಯ ಜನತಾ ಪಕ್ಷದ ಪರವಾದ ಅವರ ವ್ಯಾಮೋಹವು ಅವರ ತಿಳಿವನ್ನು ಮಸುಕಾಗಿಸಿತು ಮತ್ತು ಸರ್ವೋಚ್ಚ ನ್ಯಾಯಾಲಯವು ಪ್ರಕರಣಕ್ಕೆ ಎರಡು ದಿನಗಳಲ್ಲಿ ಪರಿಹಾರ ನೀಡಲು ಸಮರ್ಥವಾಯಿತು. ಅಷ್ಟಾಗಿಯೂ ಶ್ರೀ. ಕುಮಾರಸ್ವಾಮಿಯವರ ಸರ್ಕಾರವು ಎರಡು ವಾರಗಳಲ್ಲಿ ತನ್ನ ಬಹುಮತ ಸಾಬೀತು ಮಾಡಲು ಅಸಮರ್ಥವಾದರೆ ಯಾರೂ ಗೋಳಿಡುವುದಿಲ್ಲ, ಗೋಳಿಡಬೇಕಾಗಿಲ್ಲ. ಆದರೆ, ಇಂತಹ ವಿಷಯಗಳ ಬಗ್ಗೆ ಈಗಾಗಲೆ ನ್ಯಾಯಾಲಯ ಮತ್ತು ಸಂವಿಧಾನದ ನಿರ್ದೇಶನಗಳು ಮುಕ್ತವಾಗಿ ಲಭ್ಯವಿರುವಾಗ ಪದೇಪದೇ ರಾಜ್ಯಗಳು ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲು ಹತ್ತಬೇಕಾಗಿ ಬರುವುದಾದರೆ, ರಾಜ್ಯಪಾಲರು ಏಕಿರಬೇಕು? ರಾಜ್ಯಪಾಲರು ಅವರ ಪಕ್ಷದ ಅಧ್ಯಕ್ಷರ ಮತ್ತು ಕೇಂದ್ರ ಗೃಹಮಂತ್ರಿಗಳ ಆಣತಿಯಂತೆ ನಡೆಯುವುದಾದರೆ ಅವರು ರಾಜಭವನದ ಹೊರಗೆಲ್ಲಾದರೂ ಬಾಡಿಗೆ ಮನೆ ಪಡೆದು ಅಲ್ಲಿ ವಾಸವಾಗಿರಬೇಕು, ನೇರವಾಗಿ ರಾಜಕೀಯ ವ್ಯಾಪಾರದಲ್ಲಿ ತೊಡಗಬೇಕು.



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಈ ಬಾರಿಯ ಚುನಾವಣಾ ಫಲಿತಾಂಶಗಳು ವಿವಿಧ ಆತಂಕಗಳನ್ನು ಸೃಷ್ಟಿಸಿವೆ. ಜಾತಿ ಆಧಾರಿತ ಮತದಾನವು ದೊಡ್ಡ ಪ್ರಮಾಣದಲ್ಲಿ ಬೆಳೆದಿದೆ. ಇದು ನೈಜ ಗಣರಾಜ್ಯದ ಲಕ್ಷಣವಾಗಿರಕೂಡದು. ಈ ಪ್ರವೃತ್ತಿಯು ಮುಂದುವರಿದರೆ ಮುಂದೊಂದು ದಿನ ಯಾವ ಸಾರ್ವತ್ರಿಕ ಚುನಾವಣೆಯೂ ಇಲ್ಲದೆ ಜನಸಂಖ್ಯೆಯಲ್ಲಿ ಜಾತಿಗಳ ಪ್ರಮಾಣವನ್ನು ನಿಖರವಾಗಿ ಗುರುತಿಸಿ ಅದಕ್ಕೆ ಅನುಗುಣವಾಗಿ ಶಾಸನಸಭೆಯ ಸ್ಥಾನಗಳನ್ನು ತುಂಬಬೇಕಾದೀತು. ಆಯಾಜಾತಿಯವರ ಪ್ರತಿನಿಧಿಗಳನ್ನು ಆಯಾಜಾತಿಯವರು ಮಾತ್ರ ಆಯ್ಕೆ ಮಾಡಿದರೆ ಮುಗಿಯಿತು! ಮಾಜಿ ಮುಖ್ಯಮಂತ್ರಿ ಶ್ರೀ. ಸಿದ್ದರಾಮಯ್ಯ ಬಾಗಲಕೋಟೆ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿದ್ದುದರ ಸೂಕ್ಷ್ಮವು ಅಲ್ಲಿಯ ಜಾತಿವಾರು ಜನಸಂಖ್ಯೆಯ ಲೆಕ್ಕಾಚಾರ ಪ್ರಕಟವಾದಾಗ ತಿಳಿದುಬಂತು. ಹಾಸನ ಮತ್ತು ಮಂಡ್ಯ ಜಿಲ್ಲೆಗಳ ಫಲಿತಾಂಶಗಳೂ ಇದಕ್ಕೆ ಪೂರಕವಾಗಿವೆ. ಮಾತನಾಡುವಾಗ ಪರಾರ್ಥ ಚಿಂತನೆಯ ಸೋಗು, ಕಣಕ್ಕಿಳಿಯುವಾಗ ರಕ್ತದ ಜಾತಿ ತಪಾಸಣೆ; ಇಪ್ಪತ್ತೊಂದನೆಯ ಶತಮಾನದಲ್ಲಿದ್ದೇವೆಂಬ ನಂಬಿಕೆ ಹುಟ್ಟಿಸಲಾರದ ಸಂಗತಿಗಳಿವು. ಎರಡನೆಯ ಅಂಶವು ಚುನಾವಣೆಯಲ್ಲಿ ಕಮ್ಯುನಿಸ್ಟ್ ಪಕ್ಷಗಳ ಸಾರ್ವತ್ರಿಕ ಸೋಲು. ಬಾಗೇಪಲ್ಲಿಯೊಂದನ್ನುಳಿದು ಬೇರೆಲ್ಲೂ ಕಮ್ಯುನಿಸ್ಟ್ ಪಕ್ಷಗಳು ಸ್ಪರ್ಧಿಸಬೇಕಾಗಿಯೇ ಇರಲಿಲ್ಲವೆಂದು ತೋರುವಂತಹ ಫಲಿತಾಂಶಗಳು ಬಂದಿವೆ. ಎಲ್ಲಾ ಒಂದು ಸಾವಿರದ ಆಸುಪಾಸಿನಲ್ಲಿರುವ ಮತಗಳೇ. ಕಮ್ಯುನಿಸ್ಟರಿಗೆ ಸಮಾಜ ಸೇವಾ ಧುರಂಧರರೆಂಬ ಪ್ರಶಸ್ತಿ ನೀಡಿಯಾರು, ಆದರೆ ಅವರಿಗೆ ಮತಗಳನ್ನು ಚಲಾಯಿಸುವುದಿಲ್ಲ. ಅವರು ಹೇಗೂ ಅಧಿಕಾರಕ್ಕೆ ಬರುವ ಪಕ್ಷದವರಲ್ಲ ವೆಂಬುದು ಒಂದು ಕಾರಣ, ಹೇಗೂ ಅವರು "ಸೇವೆಗೆ" ವಿಮುಖರಾಗು ವುದಿಲ್ಲವೆಂಬುದು ಇನ್ನೊಂದು ಕಾರಣ. ಶೇಕಡಾವಾರು ಕಡಿಮೆ ಮತಗಳನ್ನು ಪಡೆದ ಪಕ್ಷಕ್ಕೆ ೧೧೮ ಸ್ಥಾನಗಳು, ಆ ಪಕ್ಷಕ್ಕಿಂತಲೂ ಸುಮಾರು ಶೇಕಡಾ ಮೂರರಷ್ಟು ಹೆಚ್ಚು ಮತಗಳನ್ನು ಪಡೆದ ಪಕ್ಷಕ್ಕೆ ೭೮ ಸ್ಥಾನಗಳು ಲಭಿಸಿವೆ. ಚುನಾವಣೆಯ ಘೋರ ವಿಪರ್ಯಾಸ ಇದು. ಇಡೀ ರಾಜ್ಯದಲ್ಲಿ (ಮತ್ತು ದೇಶದಲ್ಲಿ) ಯಾವ ಪಕ್ಷವು ಎಷ್ಟು ಮತಗಳನ್ನು ಪಡೆಯುತ್ತದೋ ಅದರ ಅನುಪಾತಕ್ಕನುಗುಣವಾಗಿಯೇ ಚುನಾಯಿತ ಸ್ಥಾನಗಳು ನಿರ್ಧಾರ ವಾಗಬೇಕು. ಅದನ್ನು "ಅನುಪಾತ ಪ್ರಮಾಣದ ಪ್ರಾತಿನಿಧ್ಯ" ಎನ್ನುತ್ತಾರೆ. ವಿಶ್ವದ ಅನೇಕ ದೇಶಗಳಲ್ಲಿ, ವಿಶೇಷವಾಗಿ ಯೂರೋಪಿನಲ್ಲಿ, ಇದು ಜಾರಿಯಲ್ಲಿದೆ. ಆಯಾ ಪಕ್ಷಗಳ ಅಭ್ಯರ್ಥಿಗಳಿಲ್ಲದಿದ್ದರೂ ಎಲ್ಲ ಕ್ಷೇತ್ರಗಳಲ್ಲೂ ಮತದಾರರು ತಮ್ಮ ಆಯ್ಕೆಯ ಪಕ್ಷಕ್ಕೆ ಮತ ನೀಡುವಂತಿರಬೇಕು. ಆಗ ಯಾರ ಮತವೂ ವ್ಯರ್ಥವಾಗುವುದಿಲ್ಲ; ಅಂದರೆ, ಎಲ್ಲ ಮತಗಳಿಗೂ ಪ್ರಾತಿನಿಧ್ಯ ಮತ್ತು ಪ್ರಾಮುಖ್ಯತೆ ದೊರೆಯುತ್ತವೆ. ಆಗ ಕೇವಲ ಒಂದು ಸಾವಿರ ಮತಗಳನ್ನು ಪಡೆದ ಕಮ್ಯುನಿಸ್ಟ್ ಅಭ್ಯರ್ಥಿಗಳ ಕ್ಷೇತ್ರಗಳಲ್ಲಿ ಗಣನೀಯ ಪ್ರಮಾಣದ ಮತದಾರರು ಕಮ್ಯುನಿಸ್ಟ್ ಪಕ್ಷಗಳಿಗೆ ಮತ ನೀಡುತ್ತಾರೆ. ಜಾತಿವಾರು ಮತದಾನಕ್ಕೂ ಇದು ಒಂದು ಮಟ್ಟದಲ್ಲಿ ಪ್ರತಿಬಂಧಕವಾಗಬಲ್ಲದು, ಏಕೆಂದರೆ ಮತದಾರರು ಪಕ್ಷಗಳಿಗೆ ಮತ ನೀಡುತ್ತಾರೆಯೇ ವಿನಾ ವ್ಯಕ್ತಿಗಳಿಗೆ ಮತ ನೀಡುತ್ತಿರುವುದಿಲ್ಲ. ನಿಜಕ್ಕೂ ಪ್ರಜಾಪ್ರಭುತ್ವವಾದಿ ಪ್ರಾತಿನಿಧ್ಯವು "ಅನುಪಾತ ಪ್ರಮಾಣದ ಪ್ರಾತಿನಿಧ್ಯ"ದಿಂದ ಮಾತ್ರವೇ ದೊರೆಯಬಲ್ಲದು. ಭಾರತವು ಆ ವ್ಯವಸ್ಥೆಯನ್ನು ಕೂಡಲೆ ಅಳವಡಿಸಿಕೊಳ್ಳಬೇಕು. ಇನ್ನು ಮೂರನೆಯ ಅಂಶ : ಅವೈಚಾರಿಕತೆ, ಹಿಂದುತ್ವದ ಹೆಸರಿನಲ್ಲಿ ರಾಜಕಾರಣ, ಮತ್ತು ಮತೀಯ ಗಲಭೆಗಳಿಂದ ತನ್ನ "ವರ್ಚಸ್ಸನ್ನು" ಹೆಚ್ಚಿಸಿಕೊಳ್ಳುವ ಭಾರತೀಯ ಜನತಾ ಪಕ್ಷವು ತಾನು ಪಡೆದುಕೊಳ್ಳುವ ಒಟ್ಟು ಮತಗಳ ಪ್ರಮಾಣವನ್ನು ಹಿಂದಿಗಿಂತಲೂ ಹೆಚ್ಚು ಮಾಡಿಕೊಂಡಿದೆ. ಇಂದಿನ ಒಟ್ಟು ಮತಗಳಲ್ಲಿ ಅದರ ಪಾಲು ಶೇ.೩೬.೨ ಮಾತ್ರವೇ ಆದರೂ ಅದು ಹಿಂದಿನ ಶೇಕಡಾವಾರು ಪ್ರಮಾಣಕ್ಕಿಂತಲೂ ಹೆಚ್ಚಾಗಿದೆಯೆಂದು ಹೇಳಲಾಗಿದೆ. ಇದರಿಂದ ಎರಡು ಸೂಚನೆಗಳು ದೊರಕುತ್ತವೆ: (ಅ) ಅನ್ಯಾಕ್ರಮಣಶೀಲತೆಯ ಸಾಧನದಿಂದ ಫ್ಯಾಸಿಸ್ಟ್ ಶಕ್ತಿಗಳು ವೃದ್ಧಿ ಹೊಂದುತ್ತವೆ ಮತ್ತು ಅದು ನಮ್ಮ ರಾಜ್ಯದಲ್ಲಿ ಕ್ರಮೇಣ ಹೆಚ್ಚುತ್ತಿದೆ; (ಆ) ರಾಜಕೀಯ–ಆರ್ಥಿಕ–ಸಾಮಾಜಿಕ ಕ್ಷೇತ್ರಗಳ ಸಾಧನೆಗಳಿಗಿಂತಲೂ ತಥಾಕಥಿತ ಸಾಂಸ್ಕೃತಿಕ ಕ್ಷೇತ್ರದ ಪೊಳ್ಳುತನಕ್ಕೆ ನಮ್ಮ ಜನ ಮಾರುಹೋಗು ತ್ತಿದ್ದಾರೆ. ಸಂಸ್ಕೃತಿಯನ್ನು ತೀವ್ರವಾಗಿ ಕುಬ್ಜಗೊಳಿಸಲಾಗುತ್ತಿರುವುದರ ಸೂಚನೆ ಇದು. ಇದು ಸಂಸ್ಕೃತಿಗೆ ಮಾರಕವಾದ್ದು, ಬಹುತ್ವಕ್ಕೆ ಧಕ್ಕೆ ಉಂಟು ಮಾಡುವಂಥದು ಮತ್ತು ಮಾನವತ್ವವೆಂಬ ಅಮೂಲ್ಯ ಕಲ್ಪನೆಯನ್ನು ಧಿಕ್ಕರಿಸುವಂಥದು. ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರಕೃತಿಯ ವಿಕಾಸದ ಪ್ರಕ್ರಿಯೆಯನ್ನು ವಿವರಿಸುವಾಗ ಆದಿಯಲ್ಲಿ "ಪ್ರಕೃತಿಯು ಬಹುವಾಗಲು ಇಚ್ಛಿಸಿತು" (ತದೈಕ್ಷತ ಬಹು ಸ್ಯಾಂ ಪ್ರಜಾಯೇಯ) ಎಂಬ ಮಾತನ್ನು ಹೇಳಲಾಗಿದೆ. ಏಕವು ಅನೇಕವಾಗುತ್ತದೆ, ಆದರೆ ಆ ಅನೇಕಗಳೆಲ್ಲಾ ಒಂದೇ ಏಕದ ಅವಿರೋಧಿ ಅಂಗಗಳಾಗಿರುತ್ತವೆ. ಇನ್ನೊಂದು ಉಪನಿಷತ್ತು ಹೇಳುತ್ತದೆ, "ಭೂಮಾ ವೈ ಸುಖಂ" (ಬಹುತ್ವ ಅಥವಾ ವೈವಿಧ್ಯತೆಯು ಅಪೇಕ್ಷಣೀಯ) ಎಂದು. ಇವೆಲ್ಲಾ ನೈಜ ಮಾನವ ಸಂಸ್ಕೃತಿಯ ಅವಿಚ್ಛಿನ್ನ ಲಕ್ಷಣಗಳು. ವಿವೇಕಾನಂದರು "ಭೂಮಾ ವೈ ಸುಖಂ" ಎಂಬುದನ್ನು ಸಾವಿರ ಬಾರಿ ಉದ್ಧರಿಸಿದ್ದಾರೆ, ಅದನ್ನು ಪ್ರಾಯೋಗಿಕವಾಗಿ ಅನುಕರಣೀಯ ಎಂದು ಸಾರಿದ್ದಾರೆ. ಮತಧರ್ಮಗಳ ಹೆಸರಿನಲ್ಲಿ ಕಚ್ಚಾಟ ಮತ್ತು ದೊಂಬಿ ಸಂಸ್ಕೃತಿಯ ಲಕ್ಷಣವಲ್ಲವೆಂಬುದು ಸಾಮಾನ್ಯವಾಗಿ ಎಲ್ಲೆಡೆ ಮಾನ್ಯತೆಯನ್ನು ಗಳಿಸಿದೆ. ಅದರ ವಿರುದ್ಧದ ಅಪಸಂಸ್ಕೃತಿಯನ್ನು ಪಸರಿಸುವ ಪಕ್ಷಕ್ಕೆ ಒಟ್ಟು ಮತದಾರರ ಸಂಖ್ಯೆಯು ಸಾಪೇಕ್ಷವಾಗಿ ಹೆಚ್ಚುತ್ತಿದೆಯೆಂಬುದು ನಮ್ಮನ್ನು ಚಿಂತೆಗೆ ಈಡುಮಾಡಬೇಕು. ಮತಧರ್ಮಗಳಾಚೆ ನಿಂತು ನಮ್ಮ ಸಂವಿಧಾನದತ್ತವಾದ ಒಕ್ಕೂಟದ ಅಥವಾ "ಫೆಡರಲ್" ಮಾದರಿಯ ರಾಜ್ಯಪ್ರಭುತ್ವಕ್ಕೆ ಸಂಬಂಧಿಸಿ ನೋಡಿದರೆ ಭಾರತೀಯ ಜನತಾ ಪಕ್ಷಕ್ಕೆ ನೀಡಲಾದ ಮತಗಳ ಹೆಚ್ಚಳವು ನಮ್ಮ ಸಾರ್ವಭೌಮ ದೇಶದ ಮೂಲಭೂತ ತತ್ತ್ವವಾದ "ಒಕ್ಕೂಟ" ಅಥವಾ "ಫೆಡರಲಿಸಂ"ಗೆ ವಿರುದ್ಧವಾಗಿ ನಿಲ್ಲುವವರ ಸಂಖ್ಯೆಯ ಹೆಚ್ಚಳವನ್ನು ತೋರಿಸುತ್ತದೆ. ಕಾವೇರಿ ನೀರಿನ ಪ್ರಶ್ನೆ, ಹಿಂದಿ ಹೇರಿಕೆಯ ವ್ಯಾಧಿ, ರಾಜ್ಯಗಳ ಸ್ವಾಯತ್ತತೆ, ಶೈಕ್ಷಣಿಕ ವಿಧಾನ ಮತ್ತು ಅವಕಾಶಗಳ ಕೇಂದ್ರೀಕರಣ, ಏಕವ್ಯಕ್ತಿಕೇಂದ್ರಿತ ರಾಜಕೀಯ, ಇವೆಲ್ಲಾ ಅದರ ಗೋಚರ ಪರಿಣಾಮಗಳು.

ಮುಂದಿನ ದಿನಗಳಲ್ಲಿ ಕಾಂಗ್ರೆಸ್ – ಜೆಡಿ(ಎಸ್) ಸಮ್ಮಿಶ್ರ ಸರ್ಕಾರವು ಆಯಾ ಪಕ್ಷಗಳ ಸದಸ್ಯರ ಸಂಪತ್ತಿನ ವೃದ್ಧಿಗೆ ಆಸರೆ ನೀಡದೆ ಅತ್ಯಂತ ಜರೂರಾದ ಗಣರಾಜ್ಯದ ಮೌಲ್ಯಗಳ ಸಂರಕ್ಷಣೆಯನ್ನು ತನ್ನ ಪ್ರಮುಖ ಕಾರ್ಯಸೂಚಿಯನ್ನಾಗಿಸಿಕೊಳ್ಳಬೇಕು ಮತ್ತು ಮುಂದಿನ ಸಾರ್ವತ್ರಿಕ ಚುನಾವಣೆಯ ವೇಳೆಗೆ ಇನ್ನೂ ವಿಸ್ತೃತವಾದ ಸಮ್ಮಿಶ್ರಣವನ್ನು ಸಿದ್ಧಿಸಿಕೊಂಡು ಮಾನವತ್ವ ಹಾಗೂ ಪ್ರಜಾಪ್ರಭುತ್ವಗಳಿಗೆ ಸ್ಥಿರತೆ ದೊರಕಿಸಿಕೊಡಬೇಕು. ನಮ್ಮ ದೇಶವು ಪ್ರಾಗೈತಿಹಾಸಿಕ ಹಂತವನ್ನು ದಾಟಿ ಇತಿಹಾಸದ ಪುಟಗಳಿಗೆ ಪ್ರವೇಶ ಪಡೆಯಲು ಇದು ಮೊದಲ ಶುಭ ಹೆಜ್ಜೆ ಎಂಬುದಂತೂ ವಿವಾದರಹಿತವಾದ್ದು.

ಈಚಿನ ದಿನಗಳಲ್ಲಿ, ೨೦೧೯ರ ಚುನಾವಣೆಯ ವೇಳೆಗೆ ಪ್ರಬಲವಾದ ಐಕ್ಯ ವಿರೋಧವನ್ನು ಸಂಘಟಿಸಿ ಶ್ರೀ. ಮೋದಿಯವರ ಪಕ್ಷವನ್ನು ಸಮರ್ಥವಾಗಿ ಎದುರಿಸಬೇಕೆಂಬ ಆಶಯವು ವ್ಯಕ್ತವಾಗುತ್ತಿದೆ. ಅದು ಎಷ್ಟರಮಟ್ಟಿಗೆ ಕಾರ್ಯಸಾಧುವಾಗುತ್ತದೋ ಕಾದು ನೋಡಬೇಕು. ತೆಲಂಗಾಣದ ಚಂದ್ರಶೇಖರ ರಾವ್ ಮತ್ತು ಪಶ್ಚಿಮ ಬಂಗಾಲದ ಮಮತಾ ಬ್ಯಾನರ್ಜಿ ತಾನೇ ಐಕ್ಯರಂಗದ ನಾಯಕರೆಂದು ಬಿಂಬಿಸಿ ಕೊಳ್ಳುತ್ತಿದ್ದಾರೆ. ಪ್ರಜಾಪ್ರಭುತ್ವದ ಬಗೆಗಿನ ಅವರಿಬ್ಬರ ಧೋರಣೆಗೆ ಸೂಚಕಗಳಾಗಿ ಹಲವು ಕಪ್ಪುಚುಕ್ಕೆಗಳು ಅಂಟಿಕೊಂಡಿವೆ. ಅಂಥವರ ಸಾರಥ್ಯದಲ್ಲಿ ಐಕ್ಯ ಪ್ರಚಾರಂಗವು ಸಫಲವಾಗುವುದಿಲ್ಲವೆಂಬುದನ್ನು ಗುರುತಿಸಿ ಹೆಜ್ಜೆ ಹಾಕುವ ಅನಿವಾರ್ಯತೆಯೂ ಇದೆ. ಐಕ್ಯರಂಗಕ್ಕೆ ಐಕ್ಯ ನಾಯಕತ್ವವು ಬೇಕಾಗುತ್ತದೆ.

*(ಈ ತಿಂಗಳು ೩ನೇ ಪುಟದಿಂದ)*

ಆಗಿನಿಂದ ಅಮೇರಿಕ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ಹೇರಿತ್ತು. ಪಶ್ಚಿಮ ಏಶಿಯದಲ್ಲಿ ಅಮೇರಿಕದ ಅಧಿನಾಯಕತ್ವಕ್ಕೆ ಅಡ್ಡಿಯಾಗಿರುವುದು ಇರಾನ್ ಮತ್ತು ಸಿರಿಯ ಮಾತ್ರ. ಅಂತರರಾಷ್ಟ್ರೀಯ ಪರಮಾಣು ಶಕ್ತಿ ನಿಯಂತ್ರಣ ಸಂಸ್ಥೆ (ಐಎಇಎ), ಇದು ವಿಶ್ವಸಂಸ್ಥೆಯ ಅಂಗಸಂಸ್ಥೆ ಗಳಲ್ಲಿ ಒಂದು. ಯಾವುದೇ ಸಾಕ್ಷ್ಯವನ್ನು ಇರಾನಿನಲ್ಲಿ ಕಾಣದೇ ಇದ್ದರೂ ಅಮೇರಿಕ ಮಾತ್ರ ಅದನ್ನು ನಂಬಲಿಲ್ಲ, ವರ್ಷಗಳ ಕಾಲ ಜುಗ್ಗಾಟ ನಡೆದು ಕಡೆಗೆ ಅಧ್ಯಕ್ಷ ಬರಾಕ್ ಒಬಾಮಾ ಅಧಿಕಾರ ತ್ಯಜಿಸುವುದಕ್ಕೆ ಮುನ್ನ ಒಂದು ಒಪ್ಪಂದಕ್ಕೆ ಸಹಿ ಹಾಕಿದರು ಇರಾನಿನೊಂದಿಗೆ. ಈ ಒಪ್ಪಂದವನ್ನು ನ್ಯೂಕ್ಲಿಯರ್ ಅಸ್ತ್ರ ಹೊಂದಿರುವ ರಾಷ್ಟ್ರಗಳು, ಅಮೇರಿಕದ ಮಿತ್ರ ರಾಷ್ಟ್ರಗಳು ಬೆಂಬಲಿಸಿವೆ. ಒಪ್ಪಂದವನ್ನು ಮುರಿಯಲು ಟ್ರಂಪ್ ನಿರ್ಧಾರ ಅಂತರರಾಷ್ಟ್ರೀಯ ಒಪ್ಪಂದಗಳಿಗೆ ಭಾರಿ ಪೆಟ್ಟು ನೀಡಿದೆ. ವಿಶ್ವಸಂಸ್ಥೆಯ ಭದ್ರತಾ ಮಂಡಲಿ, ಜರ್ಮನಿ ಹಾಗೂ ಯೂರೋಪಿಯನ್ ಯೂನಿಯನ್‌ಗಳೂ ಈ ಒಪ್ಪಂದದಲ್ಲಿ ಸಹಭಾಗಿ. ಇವು ಈಗಾಗಲೇ ಟ್ರಂಪ್ ನಿರ್ಧಾರವನ್ನು ತಿರಸ್ಕರಿಸಿವೆ. ಟ್ರಂಪ್ ವಿಧಿಸಿರುವ ಆರ್ಥಿಕ ದಿಗ್ಬಂಧನವನ್ನು ಬೆಂಬಲಿಸಲು ನಿರಾಕರಿಸಿವೆ. ಹಾಗಾಗಿ ಅಮೇರಿಕ ಈ ವಿಷಯದಲ್ಲಿ ಏಕಾಂಗಿ. ಟ್ರಂಪ್ ತನ್ನ ಅಧಿಕಾರಾವಧಿಯಲ್ಲಿ ಇನ್ನೇನೇನು ಅವಾಂತರ ಮಾಡುತ್ತಾನೋ ನೋಡಬೇಕಿದೆ. ನಮ್ಮ ಪ್ರಧಾನಿ ನರೇಂದ್ರ ಮೋದಿ ಮಾತ್ರ ಈತನನ್ನೇ ನಂಬಿಕೊಂಡು ಬಲೆಗೆ ಬಿದ್ದಿದ್ದಾರೆ. ಇಬ್ಬರಿಗೂ ಜೋಡಿ ಸರಿಹೊಂದುತ್ತದೆ ಎಂದು ಕಾಣುತ್ತದೆ.

* * *

ಕಥುವಾ ಮತ್ತು ಉನ್ನಾವ್ ಅತ್ಯಾಚಾರ ಪ್ರಕರಣಗಳು ಇಡೀ ದೇಶವನ್ನೇ ದಿಗ್ಭ್ರಮೆಗೊಳಿಸಿದವು. ಇವು ಅಪ್ರಾಪ್ತ ಬಾಲಕಿಯರ ಮೇಲೆ ನಡೆದ ಸಾಮೂಹಿಕ ದೌರ್ಜನ್ಯ. ಕೆಲ ವರ್ಷಗಳ ಹಿಂದೆ ನಡೆದ ನಿರ್ಭಯ ಪ್ರಕರಣದಷ್ಟೇ ಘೋರವಾದ್ದು ಇವು. ಕಥುವಾ ಮತ್ತು ಉನ್ನಾವ್ ಆರೋಪಿಗಳು ಆಡಳಿತಾರೂಢ ಭಾಜಪ ನಾಯಕರುಗಳಾದ್ದರಿಂದ ಮುಚ್ಚಿಹಾಕುವ ಪ್ರಯತ್ನವೂ ನಡೆಯಿತು. ಸಾರ್ವಜನಿಕ ಒತ್ತಡಕ್ಕೆ ಮಣಿದು ಕೊನೆಗೂ ಸರಕಾರ ಆರೋಪಿ ಗಳನ್ನು ಬಂಧಿಸಿತು. ಮೋದಿ ಸರಕಾರ ಮಾನ ಮುಚ್ಚಿಕೊಳ್ಳಲು ಆತುರಾತುರವಾಗಿ ಪೋಕ್ಸೋ ಕಾಯಿದೆಗೆ ತಿದ್ದುಪಡಿ ತಂದು ಸುಗ್ರೀವಾಜ್ಞೆ ಹೊರಡಿಸಿ ಅಪರಾಧಿಗಳಿಗೆ ಮರಣದಂಡನೆ ಶಿಕ್ಷೆ ವಿಧಿಸಲು ಅವಕಾಶ ಮಾಡಿಕೊಟ್ಟಿತು. ನಿರ್ಭಯ ಪ್ರಕರಣದಲ್ಲಿ ಅಪ್ರಾಪ್ತರ ವಯಸ್ಸನ್ನು ೧೬ ವರ್ಷಗಳಿಗೆ ಇಳಿಸಿ ಮರಣದಂಡನೆಗೆ ಸರಕಾರ ತಿದ್ದುಪಡಿ ತಂದಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಮರಣದಂಡನೆ ವಿಧಿಸುವ ಕುರಿತೇ ಸಾಕಷ್ಟು ವಿವಾದಗಳಿವೆ ಜಗತ್ತಿನಲ್ಲಿ. ಅದು ಇಂಥ ಅತ್ಯಾಚಾರಗಳಿಗೆ ಮದ್ದೇ ಎನ್ನುವುದು ಕೂಡ ಅನುಮಾನ. ಇದುವರೆಗೆ ವರದಿಯಾಗಿರುವ ಇಂಥ ಪ್ರಕರಣಗಳಲ್ಲಿ ಆರೋಪಿಗಳಿಗೆ ಶಿಕ್ಷೆ ಯಾಗಿರುವುದೇ ಕಡಿಮೆ. ತನಿಖೆ ನಡೆಸುವಾಗಲೇ ಎಲ್ಲ ಎಡವಟ್ಟುಗಳೂ ನಡೆದುಹೋಗುತ್ತವೆ. ಅದರಲ್ಲೂ ಪ್ರಭಾವಿ ವ್ಯಕ್ತಿಗಳಿದ್ದರೆ ಅಂಥ ಸಂಭವ ಇನ್ನೂ ಹೊಸ ಕೇವಲ ಕಾನೂನು ಮಾಡುವುದರಿಂದ ಸರಕಾರ ಪ್ರಯೋಜನವೇನಾಗದು. ಇರುವ ಕಾನೂನಿನಡಿಯಲ್ಲೇ ಅಪರಾಧಗಳನ್ನು ತಡೆಯಲು ಸಾಕಷ್ಟು ಅವಕಾಶ ಗಳಿವೆ. ತನಿಖೆಯಲ್ಲಿ ರಾಜಕೀಯ ಪ್ರವೇಶಿಸದಂತೆ ಮಾಡುವುದೀಗ ಮುಖ್ಯ. ಏಕೆಂದರೆ ಎಲ್ಲ ಇರುವುದು ತನಿಖೆಯ ಮೇಲೆ.

ಅಂಕಿಅಂಶಗಳೇ ಅದನ್ನು ಸಾಬೀತುಗೊಳಿಸುತ್ತದೆ. ನ್ಯಾಷನಲ್ ಕ್ರೈಮ್ ರಿಕಾರ್ಡ್ಸ್ ಬ್ಯೂರೋ ಪ್ರಕಟಿಸಿರುವ ಅಂಕಿ ಅಂಶಗಳನ್ನು ಗಮನಿಸಿದರೆ ಶಿಕ್ಷೆಗೆ ಒಳಗಾಗಿರುವವರ ಸಂಖ್ಯೆ ಅತ್ಯಂತ ಕಡಿಮೆ ಇರುವುದರಿಂದ ತನಿಖೆ ಎಷ್ಟು ಟೊಳ್ಳು ಎನ್ನುವುದು ತಿಳಿಯುತ್ತದೆ. ೨೦೧೬ರಲ್ಲಿ ಮಕ್ಕಳ ಮೇಲಿನ ಅತ್ಯಾಚಾರಗಳು ೧,೦೬,೯೫೮ ಆಗಿತ್ತು. ೨೦೧೫ರ ಈ ಸಂಖ್ಯೆ ೯೪,೧೭೨ ಮತ್ತು ೨೦೧೪ರಲ್ಲಿ ೮೯,೪೨೩ ಇತ್ತು. ಭಾಜಪ ಆಡಳಿತದಲ್ಲಿರುವ ಉತ್ತರಪ್ರದೇಶ, ಮಧ್ಯಪ್ರದೇಶ, ಮಹಾರಾಷ್ಟ್ರಗಳಲ್ಲೇ ಲೈಂಗಿಕ ದೌರ್ಜನ್ಯಗಳು, ಅದರಲ್ಲೂ ಮಕ್ಕಳ ಮೇಲೆ ಅತ್ಯಾಚಾರ ಎಸಗಿ ಕೊಲೆ ನಡೆದಿರುವುದು ಅಧಿಕ. ೨೦೧೬ರಲ್ಲಿ ವರದಿಯಾದ ಮಕ್ಕಳ ಮೇಲಿನ ಲೈಂಗಿಕ ಅತ್ಯಾಚಾರ ಪ್ರಕರಣಗಳು ೧೯,೭೬೫, ೨೦೧೫ರಲ್ಲಿ ಈ ಸಂಖ್ಯೆ ೧೦,೮೫೪ ಆಗಿತ್ತು. ಇನ್ನು ಗಮನಕ್ಕೆ ಬಾರದಿರುವ ಪ್ರಕರಣಗಳೆಷ್ಟೋ? ಅಲ್ಲದೆ, ಶಿಕ್ಷೆಗೆ ಗುರಿಯಾಗಿರುವವರ ಸಂಖ್ಯೆ ಹಾಗೂ ದಾಖಲಾದ ಸಂಖ್ಯೆ ಸಾಕಷ್ಟು ಕಡಿಮೆ. ೨೦೧೬ರಲ್ಲಿ ಮಕ್ಕಳ ಮೇಲೆ ಲೈಂಗಿಕ ಆಕ್ರಮಣಗಳಲ್ಲಿ ಬಂಧಿತರಾದವರು ೪೨,೧೯೬, ಆದರೆ ಶಿಕ್ಷೆಗೆ ಒಳಗಾದವರು ೩,೮೯೫ ಮಂದಿ ಮಾತ್ರ. ಇದಕ್ಕೇನೆನ್ನೋಣ!

* * *

ದೇಶದಲ್ಲಿ ಎಡಪಕ್ಷಗಳು ಮುಂಚೂಣಿಯಲ್ಲಿರುವ ಎರಡೂ ಕಮ್ಯುನಿಸ್ಟ್ ಪಕ್ಷಗಳ ಮಹಾಧಿವೇಶನ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಜರುಗಿದವು. ಪಶ್ಚಿಮಬಂಗಾಳ ಮತ್ತು ತ್ರಿಪುರಾಗಳಲ್ಲಿ ಅಧಿಕಾರ ಕಳೆದುಕೊಂಡು ಪಾರ್ಲಿಮೆಂಟಿನಲ್ಲೂ ಬಲ ತೀರಾ ಕುಗ್ಗಿರುವ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಅಂಗೀಕರಿಸಿರುವ ರಾಜಕೀಯ ನಿರ್ಣಯ ತೇಪೆ ಹಾಕಿರುವ ಗೊಂದಲದ ಗೂಡಾಗಿದೆ. ಕೇಂದ್ರ ಸಮಿತಿಯಲ್ಲಿ ಬಹುಮತದಿಂದ ಅಂಗೀಕಾರವಾದ ರಾಜಕೀಯ ವರದಿ ಮಹಾಧಿವೇಶನದಲ್ಲಿ ತಿದ್ದುಪಡಿ ಯಾಗಿದ್ದು ಇನ್ನಷ್ಟು ವಿವಾದಗಳಿಗೆ ಎಡೆಕೊಟ್ಟಿದೆ. ಯಾರು ಹೇಗೆ ಬೇಕಾದರೂ ಅರ್ಥೈಸಿಕೊಳ್ಳಬಹುದು. ಮುಖ್ಯವಾದ ಶತ್ರು ಭಾಜಪ ಎಂದು ಸರಿಯಾಗೇ ಗುರ್ತಿಸುವ ನಿರ್ಣಯ ಇತರ ಪಕ್ಷಗಳ, ಅದರಲ್ಲೂ ಕಾಂಗ್ರೆಸ್ಸಿನೊಂದಿಗೆ ಹೊಂದಾಣಿಕೆ ವಿಚಾರದಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಮಾಡಿದೆ. ಭಿನ್ನಮತ ವ್ಯಕ್ತ ಗೊಳಿಸಿದ ನಾಯಕ ಸೀತಾರಾಮ ಯೆಚೂರಿ ಮತ್ತೆ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದರೂ ಒಂದು ರೀತಿಯಲ್ಲಿ ಅತಂತ್ರರು. ಮುಂಬರುವ ದಿನಗಳಲ್ಲಿ, ಮುಖ್ಯವಾಗಿ ೨೦೧೯ರ ಚುನಾವಣೆಯು ಹೇಗೆ ಹೊರಳುವುದೋ ನೋಡಬೇಕು.

ಇನ್ನು ಭಾರತ ಕಮ್ಯುನಿಸ್ಟ್ ಪಕ್ಷದ ಮಹಾಧಿವೇಶನ ಕೇರಳದಲ್ಲಿ ನಡೆದು ಭಾಜಪ ಪ್ರಭಾವ ಎದುರಾಳಿ ಎಂಬುದನ್ನು ಗಮನಿಸಿ, ಕಾಂಗ್ರೆಸ್ಸಿನೊಂದಿಗೂ ಹೊಂದಾಣಿಕೆಯ ವಿಚಾರದಲ್ಲಿ ಗೊಂದಲವಿಲ್ಲದ ಸ್ಪಷ್ಟವಾದ ನಿಲುವನ್ನು ತೆಗೆದುಕೊಂಡಿದೆ. ಸುಧಾಕರ ರೆಡ್ಡಿಯವರು ಮೂರನೇ ಬಾರಿಗೆ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದಾರೆ. ಪಾರ್ಟಿ ಸಕ್ರಿಯವಾಗಿದ್ದರೂ ಪ್ರಭಾವ ಕಡಿಮೆ. ಸದಸ್ಯರ ಸಂಖ್ಯೆ ವೃದ್ಧಿಯಾಗಿದ್ದರೂ ಕ್ರಿಯಾಶೀಲತೆಯಲ್ಲಿ ಹಿಂದೆ. ಎರಡೂ ಪಕ್ಷಗಳು ಒಂದಾದರೆ ನಿಜವಾಗಿಯೂ ಎಡಪಂಥೀಯ ಚಳುವಳಿಗೆ ಜೀವ ಬರುತ್ತದೆ, ಪ್ರಾಬಲ್ಯ ಬರುತ್ತದೆ. ಆ ದಿನ ಯಾವಾಗ ಬಂದೀತೋ ಎನ್ನುವುದೇ ಪ್ರಗತಿಪರರ ಆಶಯ. ಸದ್ಯಕ್ಕಂತೂ ಆ ಸಾಧ್ಯತೆ ಕಡಿಮೆಯೇ.

* * *

ನಮ್ಮ ದೇಶದ ಪ್ರಧಾನಿಯವರಿಗೆ ಒಂದು ಮಣ ಹುಣಿಸೆಹಣ್ಣಿನ ದಾನದ ಅವಶ್ಯಕತೆ ಇದೆ. ಅದರಿಂದ ಅವರು ನಾಲಿಗೆ ಶುದ್ಧಪಡಿಸಿಕೊಳ್ಳುವುದು ದೇಶದ ಆರೋಗ್ಯಕ್ಕೆ ಒಳ್ಳೆಯದು. ಮುಧೋಳದ ನಾಯಿಗಳ ಬಗ್ಗೆ ಅವರಿಗೆ ಮಮತೆ ಉಕ್ಕಿ ಬಂದು ನಮ್ಮ ರಾಜ್ಯದ ಜನರು ಆ ನಾಯಿಗಳಂತಿರಬೇಕೆಂಬ ಅಪ್ರಕಟಿತ ಆಶಯವನ್ನು ಡೊಂಕುಡೊಂಕಾಗಿ ಸೂಚಿಸಿದರು. ಈಗ ಅವರಿಗೆ ನಾಯಿಗಳು ದೊರೆತುವೇನೋ ತಿಳಿಯದು. ಆದರೆ ಕೇವಲ ಶೇ. ೩೬.೨ ಮತಗಳನ್ನು ಗಳಿಸಿರುವ ಪ್ರಧಾನಿ ಅದು "ಅಸಾಮಾನ್ಯ ಮತ್ತು

## ಅಭಿನಂದನೆಗಳು...

ಕರ್ನಾಟಕ ಸರ್ಕಾರದ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ನೀಡುವ ೨೦೧೭–೧೮ನೇ ಸಾಲಿನ ಗೌರವ ಪ್ರಶಸ್ತಿಯು ಪ್ರೊ॥ ಸಿ. ಎನ್. ರಾಮಚಂದ್ರನ್, ಡಾ॥ ಎಚ್. ಎಸ್. ಶ್ರೀಮತಿ, ಪ್ರೊ॥ ಓ. ಎಲ್. ನಾಗಭೂಷಣಸ್ವಾಮಿ, ಡಾ॥ ಧರಣೇಂದ್ರ ಕುರಕುರಿ ಹಾಗೂ ಶ್ರೀ ಕೆ. ಕೆ. ಗಂಗಾಧರನ್ ಅವರುಗಳಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಅಭೂತಪೂರ್ವ ಗೆಲುವು" ಎಂದು ಸಂಭ್ರಮಿಸಿದ್ದಾರೆ. ಈಚಿನ ವರ್ಷಗಳಲ್ಲಿ ನಮ್ಮ ಮಕ್ಕಳು ಪರೀಕ್ಷೆಗಳಲ್ಲಿ ಶೇ. ೮೫ ಅಂಕ ಗಳಿಸಿದರೆ ಅದು ಸಾಲದೆಂದು ದುಃಖಿತ ರಾಗುತ್ತಾರೆ. ಇಲ್ಲಿ ೩೬.೨ ಅದ್ಭುತವೆಂದು ಮೋದಿ ಹಲ್ವಾ ತಿನ್ನ ಹೊರಟಿದ್ದಾರೆ. ಅದು ತೃತೀಯ ದರ್ಜೆಯಲ್ಲಿ ಪಾಸಾಗಲು ಅಗತ್ಯವಾಗಿರುವ ಕನಿಷ್ಠ ಅಂಕಗಳಿಗಿಂತ ಕೇವಲ ಶೇ. ೧.೨ ಮಾತ್ರ ಹೆಚ್ಚು. ಮತಾಂತರವನ್ನು ತೀವ್ರವಾಗಿ ವಿರೋಧಿಸುವ ಮೋದಿ ಪಕ್ಷವು ಪಕ್ಷಾಂತರಿಗಳನ್ನು ಗಾಳಕ್ಕೆ ಸೆಳೆದುಕೊಳ್ಳಲು ಸಾಹಸ ಪ್ರದರ್ಶಿಸಿತು. ಸಂವಿಧಾನಕ್ಕೇನೂ ಮೌಲ್ಯವಿಲ್ಲವೆಂದು ನಂಬುವ ಬಿಜೆಪಿ ಬೇರೆ ಪಕ್ಷಗಳಿಂದ ಶಾಸಕರನ್ನು ಕೊಂಡು ಇಲ್ಲವೇ ಬೆದರಿಸಿ ಇಲ್ಲವೇ ಇಲ್ಲಸಲ್ಲದ ಆಸೆಗಳನ್ನೊಡ್ಡಿ ಪಡೆಯಹೊರಟಿತ್ತು. ಆಮೇಲೆ "ನೋಡಿದಿರಾ ನಮ್ಮ ಕರಾಮತ್ತು" ಎಂದು ಅಮಿತ್ ಶಾ ಎರಡೂ ಕೈಯೆತ್ತಿ ತಮ್ಮ ಖಾಸಗಿ ಕಿರುನಗೆಯನ್ನು ಪ್ರಪಂಚಕ್ಕೆ ಹಂಚುವ ತಯಾರಿ ನಡೆಸಿದ್ದರು. ೩೬.೨ ಎಂಬುದು ೩೮ + ೧೮.೩ ಕ್ಕಿಂತಲೂ ಜಾಸ್ತಿಯೆಂದು ಗೊತ್ತಿದ್ದರೂ ಮೋದಿ ಯವರು "ಬಿಜೆಪಿ ಸುಲಭವಾಗಿ ಕೈ ಚೆಲ್ಲುವುದಿಲ್ಲ, ನಮ್ಮ ವಿರೋಧಿಗಳಿಗೆ ಸರ್ಕಾರ ರಚಿಸಲು ಅವಕಾಶ ಕೊಡುವುದಿಲ್ಲ" ಎಂದು ಗರ್ಜಿಸಿದ್ದಾರೆ. ಒಬ್ಬ ಪ್ರಧಾನಿ ಆಡುವ ಮಾತೇ ಇದು? ಅವಕಾಶ ಕೊಡದಿರಲು ಅವರಿಗಿದ್ದ ಮಾರ್ಗಗಳು ಎರಡು: ಬೆದರಿಸಿ ಶಾಸಕರನ್ನು ಸೆಳೆಯುವುದು ಇಲ್ಲವೇ ಗೋಣಿಚೀಲ ಗಳಲ್ಲಿ ಹಣವನ್ನು ನೀಡಿ ಸರಕು ವ್ಯಾಪಾರ ನಡೆಸುವುದು. ಎರಡೂ ಅಪಾಮಾರ್ಗಗಳೇ. ಪ್ರಧಾನಿಯವರು ನಮ್ಮ ದೇಶದ ಪ್ರಜಾಪ್ರಭುತ್ವಕ್ಕೆ ತೋರಿಸುವ ಗೌರವ ಈ ರೀತಿಯದು. ತಮ್ಮ ಪಕ್ಷದ್ದೇ ಸರ್ಕಾರವು ನಮ್ಮ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬರಬೇಕಾದರೆ ರಾಜ್ಯಪಾಲರನ್ನು ಸಹ ಪ್ರಧಾನಿಯವರು ಸ್ವೇಚ್ಛೆಯಿಂದ ಬಳಸಿಕೊಳ್ಳಬೇಕಾದೀತೆಂದು ಅವರು ತಿಳಿದೇ ಇದ್ದರು. ಚುನಾವಣಾ ಪ್ರಚಾರಕ್ಕೆಂದು ದೇಶದ ಪ್ರಧಾನಿ ವಾರಗಟ್ಟಲೆ ನಮ್ಮ ರಾಜ್ಯದಲ್ಲಿ ಊರು ಸುತ್ತಿದ್ದೇ ಒಂದು ಕಳಂಕ; ಅಷ್ಟಾದ ಮೇಲೆ ಶೇ. ೩೬.೨ ಗಳಿಸಿ ತನ್ನ ಶೌರ್ಯವನ್ನು ಮೆಚ್ಚಿಕೊಳ್ಳುತ್ತಿರುವುದು ಇನ್ನೊಂದು ಕಪ್ಪುಚುಕ್ಕೆ. ರಾಜ್ಯದ ಮುಂದಿನ ಸರ್ಕಾರದ ರಚನೆ ಯಾವ ದಿಕ್ಕಿನಲ್ಲಿ ಸಾಗುತ್ತದೆಂಬುದು ಖಚಿತ ವಾಗಿರಲಿಲ್ಲ. ಮೋದಿಯವರ ಪಕ್ಷದ ಸರ್ಕಾರ ಕೂಡದೆಂದು ರಾಜ್ಯದ ಜನತೆ ಕೂಗಿ ಹೇಳಿದ್ದರೂ ತಾನೇ ಮುಖ್ಯಮಂತ್ರಿಯಾಗುವ ಭರವಸೆ ಹೊಂದಿದ್ದ ಮಾನ್ಯ ಯಡಿಯೂರಪ್ಪನವರು ಕಾಂಗ್ರೆಸ್ ಬೆಂಬಲಿತ ಜೆಡಿ(ಎಸ್) ಸರ್ಕಾರದ ರಚನೆಯು "ಹೊಲಸು ರಾಜಕೀಯ" ಎಂದಿದ್ದರು. ಗೋವಾ, ಅಸ್ಸಾಂ, ಮಣಿಪುರ, ನಾಗಾಲ್ಯಾಂಡ್‌ಗಳಲ್ಲಿ ತಮ್ಮ ಪಕ್ಷ ನಡೆಸಿದ ಚಮತ್ಕಾರವನ್ನು ಅವರು ಹಾಗೆ ಬಣ್ಣಿಸಿದ್ದರೆ ಚೆನ್ನಾಗಿರುತ್ತಿತ್ತು. ತಾವು ಶೇ. ೩೬.೨ ಮತ ಪಡೆದು ಶೇ. ೩೮ ಮತ ಪಡೆದಿರುವ ಕಾಂಗ್ರೆಸ್ಸನ್ನು "ಜನ ಸಂಪೂರ್ಣವಾಗಿ ತಿರಸ್ಕರಿಸಿದ್ದಾರೆ" ಎಂದ ಶ್ರೀಯುತರ ಹುಂಬುತನವು ನಿಜಕ್ಕೂ ಮೂರ್ಖತನದ ಮುಖ ಹೊಂದಿದೆ. ಕಾಂಗ್ರೆಸ್ ಮತ್ತು ಜೆಡಿ(ಎಸ್) ಪರಸ್ಪರ ವಿರುದ್ಧವಾಗಿ ಸೆಣಸಿದ್ದವರು, ನಿಜ; ಆದರೆ ಬಿಜೆಪಿ ವಿರುದ್ಧ ಅವೆರಡು ಪಕ್ಷಗಳೂ ಒಂದಾಗಬಾರದೆಂದೇನೂ ಇಲ್ಲ. ಬೇರೆ ಶಾಸಕರನ್ನು ಹೇಗೋ ಲಪಟಾಯಿಸಿ ಕೊಂಡರೆ ಬಿಜೆಪಿ ಸಹ ತಮ್ಮ ವಿರೋಧಿಗಳ ಬಣದ ಕಪ್ಪು ಕುರಿಗಳಿಂದ ಸಹಕಾರ ಪಡೆದಂತೆಯೇ ಆಗುತ್ತಿತ್ತೆಂದು ಶ್ರೀ. ಯಡಿಯೂರಪ್ಪ ನವರಿಗೆ ತಿಳಿದಿರಲಿಲ್ಲವೇ? ಒಟ್ಟಿನಲ್ಲಿ, ಹೊಲಸು ರಾಜಕೀಯದ ಪರ್ವವನ್ನು ಬೇರುಬಿಡುವಂತೆ ಮಾಡುತ್ತಿರುವ ನಮ್ಮ ದೇಶದ ಪ್ರಧಾನಿಯವರು ಯೋಗ್ಯವಾದ ಹಾದಿಯಲ್ಲಿ ಹೋಗುತ್ತಿಲ್ಲವೆಂಬುದು ಖಚಿತ. ಬೆದರಿಕೆ ಮತ್ತು ಆಮಿಷ ಒಡ್ಡುವುದು ಪ್ರಧಾನಿಗೆ ಶೋಭೆ ತರುವಂಥದಲ್ಲ. ತಲೆಹಿಡುಕುತನವು ಶ್ರೇಯಸ್ಕರವಲ್ಲ.

* * *

ದೇಶಕ್ಕೆಲ್ಲಾ ಒಂದೇ ಪರೀಕ್ಷೆ ಎಂಬ ಹೇಸಿಗೆಯ ಸೂತ್ರದಡಿ ವೈದ್ಯಕೀಯ ಶಿಕ್ಷಣ ಪಡೆಯಲಿಚ್ಛಿಸುವ ಅಭ್ಯರ್ಥಿಗಳಿಗೆ 'ನೀಟ್' ಪರೀಕ್ಷೆ ನಡೆಯಿತು. ಅದು ಖಂಡಿತ ನೀಟಾಗಿ ನಡೆಯಲಿಲ್ಲ, ನ್ಯಾಸ್ಟಿಯಾಗಿ ನಡೆಯಿತು. ಕಿರುಕುಳಗಳ ಮಹಾಪೂರವನ್ನು ಮತ್ತೊಮ್ಮೆ ನಮ್ಮ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಅನುಭವಿಸಿದರು. ಬಟ್ಟೆಗಳ ಗುಂಡಿಗಳನ್ನು ಕಿತ್ತುಹಾಕುವುದಿರಲಿ, ಕೆಲವರು ಒಳಉಡುಪುಗಳನ್ನೇ ತೆಗೆಸಿಹಾಕಿದರು. ಇದು ಯುವಪೀಳಿಗೆಗೆ ನಾವು ತೋರುತ್ತಿರುವ ಗೌರವ! ನಾಳೆ ಅವರೆಲ್ಲಾ ಸಭ್ಯರಾಗಿರಬೇಕೆಂದು ಉಪದೇಶ ನೀಡುವವರು ಈ ಅನಿಷ್ಟ 'ನೀಟ್'ನ ಅಧ್ವರ್ಯುಗಳು! ದೇಶಕ್ಕೆಲ್ಲಾ ಒಂದೇ ಪರೀಕ್ಷೆ ಎಂಬುದು ರಾಜ್ಯಗಳಿಗೆ ವಿಷ ಉಣಿಸುವ ಹುನ್ನಾರವನ್ನು ಹೊಂದಿದೆ. ಖಾಸಗಿ ವೈದ್ಯಕೀಯ ಕಾಲೇಜುಗಳನ್ನು ಬಿಡಿ, ಅವುಗಳ ಆಕಾಂಕ್ಷೆಯು ವಿದ್ಯಾರ್ಥಿಗಳ, ಪೋಷಕರ ಮತ್ತು ರಾಜ್ಯದ ಜನತೆಯ ಆಕಾಂಕ್ಷೆಗಳಲ್ಲ. ನಮ್ಮ ರಾಜ್ಯದ ಬಗ್ಗೆ ಹೇಳುವುದಾದರೆ, ರಾಜ್ಯದ ಬೊಕ್ಕಸದಿಂದ ಹಣ ವೆಚ್ಚ ಮಾಡಿ ನಾವು ಅನೇಕ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಿಕೊಂಡಿದ್ದೇವೆ. ಅದನ್ನು ಮಾಡಿದ್ದು ನಮ್ಮ ರಾಜ್ಯದ ವಿದ್ಯಾರ್ಥಿಗಳ ಅವಕಾಶಗಳು ಹೆಚ್ಚಲೆಂದು ಮತ್ತು ನಮ್ಮ ಆರೋಗ್ಯ ವ್ಯವಸ್ಥೆಗೆ ವೈದ್ಯರು ಲಭ್ಯವಾಗಲಿ ಎಂದು. ಬೇರೆ ರಾಜ್ಯಗಳಲ್ಲೆಲ್ಲೂ ನಮ್ಮಲ್ಲಿರುವಷ್ಟು ಸರ್ಕಾರಿ ವೈದ್ಯಕೀಯ ಕಾಲೇಜುಗಳು ಇರಲಾರವು. ಈಗ ಕೇಂದ್ರ ಸರ್ಕಾರದ ಅಪಾಯಕಾರಿ ನೀತಿಯಂತೆ ನಮ್ಮ ಸರ್ಕಾರಿ ಕಾಲೇಜುಗಳಲ್ಲಿ ಬೇರೆ ರಾಜ್ಯದ ವಿದ್ಯಾರ್ಥಿಗಳು ತುಂಬಿಕೊಂಡುಬಿಡಲು ಸಾಧ್ಯ. ನಮ್ಮ ಮಕ್ಕಳು, ವಿಶೇಷವಾಗಿ ಹೆಣ್ಣುಮಕ್ಕಳು, ಹೊರ ರಾಜ್ಯಗಳಲ್ಲಿ ಅವಕಾಶ ದೊರೆತರೆ ಅಲ್ಲಿಗೆ ಹೋಗಿ ಕಲಿಯಬೇಕು! ಇದು ಎಷ್ಟರಮಟ್ಟಿಗೆ ಸಾಧುವಾದ್ದು? ಕೂಡ್ಲಿಗಿಯ ಒಬ್ಬ ಹೆಣ್ಣುಮಗಳು ಷಿಲಾಂಗ್‌ಗೆ ಹೋಗಿ ವೈದ್ಯಕೀಯ ಶಿಕ್ಷಣ ಪಡೆಯಬೇಕೆನ್ನುವುದು ಶುದ್ಧ ಅಯೋಗ್ಯತನ, ಹಿಂಸೆ. ಕನಿಷ್ಠ ಶೇ. ೫೦ ಸ್ಥಾನಗಳನ್ನು ನಮ್ಮ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಹೊರರಾಜ್ಯಗಳವರಿಗೆ ಮೀಸಲಿಡಬೇಕೆಂದು ಕೇಂದ್ರ ಸರ್ಕಾರ ಹೇಳಿದೆ ಮತ್ತು ಸರ್ವೋಚ್ಚ ನ್ಯಾಯಾಲಯವು ಅದನ್ನು ಎತ್ತಿಹಿಡಿದಿದೆ. ಅಂದರೆ, ರಾಜ್ಯದ ಜನತೆಯ ಹಣದಿಂದ ನಿರ್ಮಿಸಲಾದ ಸೌಲಭ್ಯವನ್ನು ಹೊರರಾಜ್ಯಗಳವರು ಭೋಗಿಸುತ್ತಾರೆ. ಆ ರಾಜ್ಯಗಳಲ್ಲಿ ಅಷ್ಟೇ ಸಂಖ್ಯೆಯ ವೈದ್ಯಕೀಯ ಕಾಲೇಜುಗಳು ಇಲ್ಲದಿರುವುದರಿಂದ ನಮ್ಮ ಮಕ್ಕಳು ಸೌಲಭ್ಯವಂಚಿತರಾಗುತ್ತಾರೆ. ಬೇಜವಾಬ್ದಾರಿ ರಾಜ್ಯ ಸರ್ಕಾರಗಳನ್ನು ಪೋಷಿಸುವ ಕೆಲಸ ನಮ್ಮ ಸರ್ಕಾರದ ಪಾಲಿಗೆ ಬಂದಿದೆ! ಇದು ರಾಷ್ಟ್ರೀಯತೆಯ ಒಂದು ಕೆಟ್ಟ ಮಾದರಿ. ಇದೇ ಮಹಾನ್ ರಾಷ್ಟ್ರೀಯತೆಯ ಇನ್ನೊಂದು ತುಣುಕನ್ನು ಇತ್ತೀಚೆಗಷ್ಟೆ ನಮ್ಮ ಮುಖದ ಮೇಲೆ ಎಸೆಯಲಾಗಿತ್ತು. ಕೇಂದ್ರ ಸರ್ಕಾರವು ರಾಜ್ಯಗಳಿಗೆ ಕೊಡಬೇಕಾದ ತೆರಿಗೆ ಪಾಲಿಗೆ ಸಂಬಂಧಿಸಿದ ವಿಷಯ ಅದು. ನೀಡಬೇಕಾದ ಪಾಲನ್ನು ಜನಸಂಖ್ಯೆಯ ಆಧಾರದ ಮೇಲೆ ವಿತರಿಸುವುದಾಗಿ ಕೇಂದ್ರವು ಹೇಳಿದೆ. ಅಂದರೆ, ಕುಟುಂಬ ಯೋಜನೆಯನ್ನು ಅನುಷ್ಠಾನಕ್ಕೆ ತಂದ ರಾಜ್ಯಗಳಿಗೆ ಪ್ರತಿಫಲವೇನೆಂದರೆ ಅವುಗಳ ತೆರಿಗೆ ಪಾಲಿನ ಕಡಿತ. ಅಯೋಗ್ಯ ಸರ್ಕಾರಗಳು ಮಾತ್ರವೇ ಇಂತಹ ತತ್ವರಹಿತ ತೀರ್ಮಾನಗಳನ್ನು ಕೈಗೊಳ್ಳಲು ಸಾಧ್ಯ. ನಮ್ಮ ರಾಜ್ಯದ ಸರ್ಕಾರಿ ವೈದ್ಯಕೀಯ ಶಿಕ್ಷಣ ಸಂಸ್ಥೆಗಳು ಅಸಹ್ಯ ನೀಟ್‌ನಡಿ ಬರಕೂಡದೆಂದು ನಮ್ಮ ರಾಜ್ಯ ಸರ್ಕಾರವು ನಿಷ್ಠೆಯಿಂದ ಆಗ್ರಹಿಸ ಬೇಕಾಗಿದೆ. ಮಾನ್ಯ ಯಡಿಯೂರಪ್ಪನವರು ಮುಖ್ಯಮಂತ್ರಿಯಾಗಿದ್ದರೂ ಅವರು ಅದನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಬೇಕೆಂದು ಆಗ್ರಹಿಸ ಲಾಗುತ್ತಿತ್ತು. ಆದರೆ ಅವರು ಅದನ್ನು ಮಾಡುತ್ತಿರಲಿಲ್ಲ. ಜೆ.ಡಿ.(ಎಸ್.)–ಕಾಂಗ್ರೆಸ್ ಸಮ್ಮಿಶ್ರ ಸರ್ಕಾರವು ಅದನ್ನು ನಿಷ್ಠೆಯಿಂದ ಕೈಗೆತ್ತಿಕೊಳ್ಳಬೇಕು.

○






ಶ್ರಮಿಕ ವರ್ಗದ ನೇತಾರ ಕಾರ್ಲ್ ಮಾರ್ಕ್ಸ್‌ರವರ ಸುಂದರ ಮುಖಪುಟ ಹೊತ್ತು ಬಂದ 'ಮೇ' ತಿಂಗಳ ಹೊಸತು ಬಹಳ ಚೆನ್ನಾಗಿ ಮೂಡಿಬಂದಿದೆ. ಶ್ರಮಿಕ ವರ್ಗದ ಸಂಕೋಲೆಗಳ ಬಗ್ಗೆ ಸಂಪಾದಕೀಯದಲ್ಲಿನ ವಿಷಯ ಅದ್ಭುತ! ನೀತಿ ಸಂಹಿತೆ ಎಂಬ ಪ್ರಹಸನ ನಿಜಕ್ಕೂ ಅರ್ಥಪೂರ್ಣ. ನೋವು ಸುಖಿಸುವ ಹೊತ್ತು (ಜಯಂತಿ ಕೆ. ವೈ.) ಚೆನ್ನಾಗಿತ್ತು. ಗರ್ತ ಕಥೆಯ ಯುವಕರಿಗೆ ಚಾಟಿ ಬೀಸಿದಂತಿತ್ತು. ಟ್ರೈಯರ್‌ನಲ್ಲಿರುವ ಕಾರ್ಲ್ ಮಾರ್ಕ್ಸ್ ವಿಚಾರ ಓದಿದಾಗ ಅಲ್ಲಿಗೆ ಹೋಗಿ ಬಂದಂತೆ ಭಾಸವಾಯಿತು. ಎ. ರಾಮಕೃಷ್ಣಪ್ಪರವರು ರಚಿಸಿದ ಪ್ರಕೃತಿಯ ರಮ್ಯತಾಣಗಳ ಚಿತ್ರಗಳು ಮನಸ್ಸಿಗೆ ಮುದ ನೀಡಿದವು. ಹೀಗೆ ಇರಲಿ ನಮ್ಮ ಹೊಸತು.

*ಮಂಡ್ಯ ಜಿಲ್ಲೆ* **ಅ. ಮೃತ್ಯುಂಜಯ**

ಹೊಸತು – ಮೇ ತಿಂಗಳ ಸಂಚಿಕೆ ತುಂಬ ಸೊಗಸಾಗಿ ಹಲವು ವಿಚಾರಪೂರ್ಣ ಲೇಖನಗಳೊಂದಿಗೆ (ಎಂದಿನಂತೆ) ಹೊರಬಂದಿದೆ. ಕಾರ್ಲ್ ಮಾರ್ಕ್ಸ್–೨೦೦ ಎಂಬ ಡಾ॥ ಜಿ. ರಾಮಕೃಷ್ಣ ಅವರ ಲೇಖನ ಅತ್ಯಂತ ಸಮಯೋಚಿತವಾಗಿದೆ. ಮಾರ್ಕ್ಸ್ ಇಂದಿಗೆ ಅಪ್ರಸ್ತುತ ಎಂದು ನಿರಂತರವಾಗಿ ವಾದಿಸುವ ಹಲವು ಜನರು ಇಂದಿನ ಸಂದರ್ಭವನ್ನು ವ್ಯಾಖ್ಯಾನಿಸಲು ಡಾ॥ ಜಿ. ರಾಮಕೃಷ್ಣ ಅವರು ತಾರ್ಕಿಕವಾಗಿ ಮತ್ತು ತಾತ್ವಿಕವಾಗಿ ಬಳಸಿದ ಕ್ರಮವನ್ನು ಗಮನಿಸಿದರೆ ಮಾರ್ಕ್ಸ್ ಹೇಗೆ ಪ್ರಸ್ತುತ ಎಂಬುದು ಅರಿವಾದೀತು. ಲಿಯೋ ಹ್ಯೂಬರ್‌ಮನ್‌ನನ್ನು ನನ್ನಂತಹ ಹಲವರಿಗೆ ಈ ಮೊದಲೇ ಪರಿಚಯಿಸಿದವರು ಡಾ॥ ಜಿ. ಆರ್. ಆದರೆ ಆ ವಿಚಾರದ ತಿರುಳನ್ನು ಜಿ. ಆರ್. ಅವರು ಅತ್ಯಂತ ಸುಲಭವಾಗಿ ತಿಳಿಯುವಂತೆ ಇನ್ನೊಮ್ಮೆ ಹೇಳಿದ್ದಾರೆ. ಈ ಲೇಖನ ಓದುತ್ತಿರುವಾಗ ಟೆರ್ರಿ ಈಗಲ್‌ಟನ್‌ನು ಮಾರ್ಕ್ಸ್ ಯಾಕೆ ಇಂದಿಗೂ ಪ್ರಸ್ತುತ ಎಂದು ವಿವರಿಸಿದ್ದೂ ನೆನಪಾಗುತ್ತಿತ್ತು. ಈಗಲ್‌ಟನ್‌ನ ಎರಡು ಅನುವಾದಗಳು ಈಗ ಕನ್ನಡದಲ್ಲಿ ಓದಲು ಲಭ್ಯ. ಕಾರ್ಲ್ ಮಾರ್ಕ್ಸ್ ಮ್ಯೂಸಿಯಂ ಬಗ್ಗೆ ಡಾ॥ ಎನ್. ಗಾಯತ್ರಿ, ದಿ ಯಂಗ್ ಕಾರ್ಲ್ ಮಾರ್ಕ್ಸ್ ಸಿನಿಮಾ ಬಗ್ಗೆ ಮ. ಶ್ರೀ. ಮುರಳಿಕೃಷ್ಣ ಹಾಗೂ ಎಚ್. ಎಸ್. ಮುಂಜುನಾಥ, ಎಸ್. ಸಿ. ರಂಗನಾಥ್ ಅವರ ಕವನ ಎಲ್ಲ ಮಾರ್ಕ್ಸ್–೨೦೦ ಜನ್ಮದಿನದ ನೆನಪಿಗೆ ಕನ್ನಡದಲ್ಲಿ ಬಂದ ಉಪಯುಕ್ತ ಲೇಖನಗಳು. "ಕ್ರಾಂತಿ ಎಂದರೆ ಸ್ಪಷ್ಟವಾಗಿ ಅನ್ಯಾಯದ ಬುನಾದಿ ಮೇಲೆ ರಚಿತವಾಗಿರುವ ಇಂದಿನ ವ್ಯವಸ್ಥೆ ಬದಲಾಗಬೇಕು ಎಂದರ್ಥ" ಎಂಬ ಜಿ. ಆರ್. ಲೇಖನದ ಮಾತುಗಳು ಮನನಯೋಗ್ಯ.

*ಬೆಂಗಳೂರು* **ಎಸ್. ಆರ್. ವಿಜಯಶಂಕರ**

ಹೊಸತು ಪತ್ರಿಕಾ ಸಿಬ್ಬಂದಿಯವರಿಗೆ ನಮಸ್ಕಾರಗಳು,

ತಮ್ಮ ಪತ್ರಿಕೆಯ ನಿರಂತರ ಓದುಗನಾಗಿದ್ದು ಏಪ್ರಿಲ್ ತಿಂಗಳ ಪತ್ರಿಕೆಯಲ್ಲಿ ಪ್ರಮುಖವಾಗಿ ಭಾರತ ಮತ್ತು ಕರ್ನಾಟಕ ಆರ್ಥಿಕತೆಗೆ ಸಂಬಂಧಿಸಿದ ಬಜೆಟ್ ಬಗ್ಗೆ ಉತ್ತಮ ಲೇಖನವನ್ನು ನೀಡಿದ್ದೀರಿ. ರೈತರ ಬಗ್ಗೆ ಸರಕಾರಗಳು ನೀಡಿದ ಬಜೆಟ್ಟಿನ ಮೊತ್ತವು ರೈತರ ಖಾತೆಗೆ ನೇರವಾಗಿ ಸಂದಾಯವಾದರೆ ಮಾತ್ರ




ಉಪಕಾರವಾದಂತೆ. ಮುಂದೆ ಗವಿಸಿದ್ದ ಹೊಸಮನಿಯವರ ತಿಂಗಳ ಕಥೆಯಾಗಿ "ಎಕ್ಕಾಗಾಡಿ" ತುಂಬ ಚೆನ್ನಾಗಿ ಮೂಡಿಬಂದಿದೆ. ಪ್ರಾದೇಶಿಕ ಭಾಷೆಯನ್ನು ಅಷ್ಟೇ ಸುಲಲಿತವಾಗಿ ನಿರೂಪಿಸಿದ್ದಾರೆ. ಅದರಲ್ಲಿ ಬರುವ ಗಂಗಮ್ಮ ಮತ್ತು ಎತ್ತು ಲಚುಮ ಅವರ ಸಂಬಂಧ ಅನನ್ಯ.

ಸಂವಿಧಾನ ಶಿಲ್ಪಿ ಡಾ॥ ಬಿ. ಆರ್. ಅಂಬೇಡ್ಕರ್ ಲಿಂಗರಾಜಕಾರಣದ ಲೇಖನ ಇಂದಿಗೂ ಪ್ರಸ್ತುತವಾಗಿದೆ. ಅಂದು ಅಂಬೇಡ್ಕರ್ ಮಹಿಳೆಯರ ಮೇಲಿನ ಕಾಳಜಿಯ ಸಲುವಾಗಿ ಭಾರತದ ಸಂವಿಧಾನದಲ್ಲಿ ಮಹಿಳೆಯರಿಗೆ ಮತದಾನದ ಹಕ್ಕು, ಶೈಕ್ಷಣಿಕ ಹಕ್ಕು ಇನ್ನೂ ಮುಂತಾದ ಪ್ರಮುಖ ಹಕ್ಕುಗಳನ್ನು ನೀಡಿ ಅವರನ್ನು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಎಲ್ಲ ರಂಗದಲ್ಲೂ ಮುಕ್ತವಾಗಿ ಭಾಗವಹಿಸಲು ನೆರವಾದರು. ಅಂಬೇಡ್ಕರರ ನೆರವಿನ ಫಲವಾಗಿ ಇಂದು ಹೆಣ್ಣು ಮಕ್ಕಳಿಲ್ಲದ ರಂಗಗಳೇ ಇಲ್ಲದಂತಾಗಿದೆ. ಆದರೂ ಕೂಡ ಕರ್ನಾಟಕದಂತಹ ದೊಡ್ಡ ರಾಜ್ಯದಲ್ಲಿ ಸ್ವಾತಂತ್ರ್ಯ ದೊರೆತ ೭೦ ವರ್ಷಗಳ ಮೇಲೆ ಆದರೂ ಸಹ ಒಬ್ಬ ಮಹಿಳೆಗೂ ಕೂಡ ಮುಖ್ಯಮಂತ್ರಿ ಪಟ್ಟ ದೊರೆಯದಿರುವುದು ಆತಂಕಕಾರಿ ವಿಷಯ.

*ವಿದ್ಯಾರಣ್ಯ* **ದೇವೇಂದ್ರಪ್ಪ**

ಮಹಿಳೆಯರ ಲೇಖನಗಳಿಂದಲೇ ತುಂಬಿ ತುಳುಕುವ ಹಾಗೆ ತೋರಿಬಂದ ಹೊಸತಿನ ಮೇ ಸಂಚಿಕೆಯೇ ಹೇಳಿದ ಹಾಗೆ ನಾಳೆಯ ನೆಮ್ಮದಿ ನಮ್ಮದು ಎಂಬುದನ್ನು ಪುಷ್ಟೀಕರಿಸಿಬಿಟ್ಟಿದೆ. ಮೇ ದಿನಾಚರಣೆಯ ಅಂಗವಾಗಿ ಮೂಡಿಬಂದ ಎಸ್. ಸಿ. ರಂಗನಾಥ್ ಅವರ ಕಾವ್ಯ ಗುಚ್ಛ ಪ್ರತಿಯೊಬ್ಬರೂ ಓದಲೇಬೇಕು ಎನ್ನುವ ಹಾಗೆ ಮೂಡಿಬಂದಿದೆ. ಅವರು ಹೇಳ್ತಾರೆ:

ಜಗತ್ತಿನ ಕಾರ್ಮಿಕರೇ ಒಂದಾಗಿ ಎಂದು ಕರೆ ಕೊಟ್ಟವರು ಕಾರ್ಲ್ ಮಾರ್ಕ್ಸ್. ಅಂತಹ ಪುಣ್ಯಾತ್ಮನ ಮುಖಚಿತ್ರವನ್ನು ನೋಡಿದಾಗಲೇ ಮಾರ್ಕ್ಸ್ ಕುರಿತಾಗಿ ಜಿ. ರಾಮಕೃಷ್ಣರು ಬಣ್ಣಿಸಿದ ರೀತಿ ವಿಶಿಷ್ಟ.

ಆಟಿಗೆ ಎಂಬ ಡಾ॥ ನಾ. ಡಿಸೋಜ ಅವರ ತಿಂಗಳ ಕಥೆ ಚೆನ್ನಾಗಿದೆ. ಸಂಗೀತ ಲೋಕದ ಮಹಾನ್ ಗಾಯಕಿ ಪಟ್ಟಮ್ಮಾಳ್, ಹಾಗೂ ಅಮರ್‌ಜಿತ್ ಕೌರ್ ಅವರೊಂದಿಗೆ ಸಂದರ್ಶನ ಮತ್ತು ಅಜರಾಮರ ಪುಟ್ಟಣ್ಣಯ್ಯ ಎಂಬುವರ ಕುರಿತಾಗಿ ಡಾ॥ ಬೋರೇಗೌಡ ಚಿಕ್ಕಮರಳಿ ಅವರು ಬರೆದಿರುವ ಕವನ ಮೆಚ್ಚುವಂಥದ್ದು.

*ಪಂಜಿಕಲ್ಲು* **ವನಮಾಲಾ ಕೇಶವ ಭಟ್ಟ**

**ಬಿಸಿಲಿನ ವೈಭವದ ಆನಂದಿಸುವಿಕೆ**

ಬೇಸಿಗೆಯಲ್ಲಿ ವ್ಯವಸ್ಥೆಯಲ್ಲಿರುವ ಅವ್ಯವಸ್ಥೆಗಳಿಂದ ಮನ ನೋಯುತ್ತದೆ. ನೀರಿನ ಸಮಸ್ಯೆ. ವಿದ್ಯುತ್ ಸಮಸ್ಯೆಗಳೂ ಸೇರಿದಂತೆ ಹೋರಾಟದ ಮನೋಭಾವವನ್ನು ಪ್ರಚೋದಿಸುವುದು ಸಹಜ. ಒಂದು ಅಂದಾಜಿನ ಪ್ರಕಾರ ಹೊಸ ಹೋರಾಟಗಳು, ಚಳವಳಿಗಳು ಹೆಚ್ಚಾಗಿ ಬೇಸಿಗೆ ಕಾಲದಿಂದಲೇ ಆರಂಭವಾಗುತ್ತವೆಂದು ಎಲ್ಲೋ ಓದಿದ್ದ ನೆನಪು. ಹೀಗಾಗಿ ಬೇಸಿಗೆ ಎಂದರೆ ಬದಲಾವಣೆಯ ಮಹಾಪರ್ವ ಎನ್ನುತ್ತೇನೆ. ಒಡೆದುಹೋದ ಮನಸ್ಸುಗಳನ್ನು ಬೆಸೆಯಿಸುವ ಮದುವೆಗಳು, ಜಾತ್ರೆಗಳು, ಸಾಲು ಸಾಲು ಹಬ್ಬಗಳಾರಂಭ, ಹಲವಾರು ಸಾಧಕರ ಜಯಂತಿಗಳಿಂದ ಜ್ಞಾನವನ್ನು ಹಿಗ್ಗಿಸಿಕೊಳ್ಳಲು ಸಕಾಲ. ನಮ್ಮ ರೈತರಿಗೆ ಬೇಸಿಗೆಕಾಲವೆಂದರೆ ಎಲ್ಲಿಲ್ಲದ ಹರ್ಷ, ಅತೀ ಹೆಚ್ಚು ಬಿಸಿಲನ್ನು ಆತ ಬಯಸುತ್ತಾನೆ. ಹೆಚ್ಚಿನ ಬಿಸಿಲು ಭೂಮಿ ತಾಯಿಯನ್ನು ಸ್ಪರ್ಶಿಸಿ, ಆಕೆಯ ಮೈ ದಡವಿ ಕಾಯಿಸಿದಲ್ಲಿ ಮುಂಬರುವ ಮಳೆಗಾಲದಲ್ಲಿ ಆ ಮಳೆಯ ನೀರನ್ನು ಭೂ ತಾಯಿ ಹೆಚ್ಚಾಗಿ ಹಿಡಿದಿಟ್ಟುಕೊಳ್ಳಲು ಮತ್ತು ಫಲವತ್ತತೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವೆಂದು ರೈತನ ಭಾವನೆ. ಹಾಗಾಗಿ ಬೇಸಿಗೆಯಲ್ಲಿ ರೈತ ಹೆಚ್ಚು ಖುಷಿಯಿಂದ, ಸಂಭ್ರಮದಿಂದ ತನ್ನ ಭೂತಾಯಿಯ ಮೈದಡವಿ ಸ್ವಚ್ಛಗೊಳಿಸಿ ಮಳೆರಾಯ ನಾಗ ಮನಕ್ಕೆ ಕಾಯುವಂತೆ ಸಿದ್ಧಗೊಳಿಸುತ್ತಾನೆ.

*ಗುಲ್ಬರ್ಗಾ* **ವೆಂಕಟೇಶ ಕೆ. ಜನಾದ್ರಿ**

# ಭಾವಗಳು ಬದಲಾಗಬಲ್ಲವೇ?



**ಅ**ಮ್ಮ ಹೇಳುತ್ತಾಳೆ...
ನಮ್ಮಂತಲ್ಲ ಬಿಡಿ ನಿಮಗೆ
ನೀವುಗಳೆಲ್ಲಾ ಸಾವಿರ ಪಾಲು
ನಮ್ಮಿಂದ ಮೇಲು.

ಹೌದೇ...? ಉತ್ತರಕ್ಕಾಗಿ ತಡಕಾಡುವಾಗ
ಅರೇ...! ಅವಳಮ್ಮ ಇದೇ ಮಾತಿಂದ
ಅವಳ ಕಿವಿಯ ತೂತು ಕೊರೆದಿರಬಹುದೇ?

ಇರಲಿ. ಕೆದಕುತ್ತಾ ಹೋದರೆ ಇರುವ
ಅರ್ಧ ಸುಖವೂ ಅರ್ಥ ಹುಡುಕುವುದರಲ್ಲೇ
ಸವೆದುಹೋದೀತು.

ಎಲ್ಲವೂ ಬದಲಾಗಿದೆ ಈಗ
ಮೊದಲಿನಂತೆ ಅಲ್ಲವೇ ಅಲ್ಲ ಅಂತ
ಸಂದರ್ಭ ಸಿಕ್ಕಾಗಲೆಲ್ಲಾ ಬಡಾಯಿಕೊಚ್ಚಿಕೊಳ್ಳುವುದು
ಮುಂದಿನ ತಲೆಮಾರಿಗೆ ಅದನ್ನು
ಬರಿದೇ ರವಾನಿಸುವುದು. ಎಲ್ಲವೂ ಬರೀ
ಬೊಗಳೆ ಅಂತ ಯಾರಿಗೂ ತಿಳಿಯದೇನಲ್ಲ.

ಸುಖಾ ಸುಮ್ಮಗಿನ ಈ ಹಳಹಳಿಕೆ
ವೃಥಾ ನಿಂತು ಹರಿದು ಬಂದ ದಂತಕತೆಗೆ
ಅಪಚಾರವಾಗಬಾರದಲ್ಲ?

ಅದುಮಿಟ್ಟ ಕಣ್ಣೀರ ಕಟ್ಟೆ
ಈರುಳ್ಳಿ ಸಿಪ್ಪೆ ಬಿಡಿಸಿದ್ದೇ ತಡ
ಮೇರೆ ಮೀರಿ ಹರಿಯುವುದು
ಮೆಣಸಿನ ಘಾಟಿಗೆ ಇನ್ನಿಲ್ಲದಂತೆ ಅಕ್ಷಿ ಹೊರಟು
ಒಳಗಿನ ಖಾರವನ್ನೆಲ್ಲಾ ದಬ್ಬಿ ಹೊರಹಾಕುವುದು
ಏದುಸಿರು ಬಿಡುತ್ತಾ ಒಗ್ಗರಣೆಯ ಬೇವಿಗೆ
ಹಿತ್ತಲಿಗೆ ಓಡಿ ಕಣ್ಣು ಮೂಗೊರೆಸಿಕೊಳ್ಳುವುದು.

..ಹೀಗೇ ಮತ್ತೊಂದು ಪ್ರಸಂಗಕ್ಕೆ
ಅಣಿಯಾಗುವ ನಿತ್ಯ ನಿರಂತರ ಗಾಥೆ
ಕಾಲ ಕಾಲಕ್ಕೂ ಹಿಂದೆಯೇ ಒಲಿದು
ಬರುವ ಗೀತೆ ಹಳತಾದರೂ
ಹಳಸಲಾಗಲಿಲ್ಲ.

ಹೆಣ್ಣೆಂಬ ಗಾದಿ ಸಿಕ್ಕಾಗ ಅದಕ್ಕೆ
ಆತುಕೊಂಡು ನಾದಿಕೊಂಡೇ
ಬರುವ ಬೇಗುದಿ
ಒಳಗೆ ಹಬೆಯಾಡುತ್ತಲೇ ತಣ್ಣಗೆ ಸುಡುವ ಒಳಕುದಿ
ಇದು ಯಾರಿಗೂ ಕಾಣಬಾರದು. ಕಾಣಗೊಡಲೂ ಬಾರದು.

ಸೀತೆ ದ್ರೌಪದಿ ಮಂಡೋದರಿಯಾಗಿ
ನಮ್ಮ ಕರುಳ ಬಳ್ಳಿಯ ತಂತುಗಳೆಲ್ಲಾ
ಉಂಡ ವ್ಯಥೆ
ಕತೆಯಾಗಿ ತೇಲುವಾಗ ಮನಸ್ಸುಗಳು ಆರ್ದ್ರಗೊಳ್ಳುತ್ತಿವೆ.

ಇಲ್ಲಿ ಅದೇ ಸುಡುವ ನೋವುಗಳು
ಪದ ಸಾಲಿನೊಳಗೆ ಮುದುಡಿಕೊಂಡು
ಬಿಕ್ಕಳಿಸುವಾಗ ಸುಲಭದಲ್ಲಿ ಅರ್ಥಕ್ಕೆ
ದಕ್ಕುವುದಿಲ್ಲ ಕವಿತೆ.

ಕಾಲ ಬದಲಾಗಿದೆ. ಭಾವಗಳು ಬದಲಾಗಬಲ್ಲವೇ...?

**ಸ್ಮಿತಾ ಅಮೃತರಾಜ್. ಸಂಪಾಜೆ**
"ಹಸಿರು", ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು
ಕೊಡಗು – ೫೭೪ ೨೩೪



# ರಾಜಕೀಯದ ಸೃಜನಶೀಲತೆಯ ನೆಲೆಗಳು

ಕವಿಗಳು, ಕಾದಂಬರಿಕಾರರು, ನಾಟಕಕಾರರು, ಸಂಗೀತಗಾರರು, ಚಿತ್ರಕಲಾವಿದರು, ತತ್ವಶಾಸ್ತ್ರಜ್ಞರು ಹೀಗೆ ಯಾವ ಸೃಜನಶೀಲ ಕ್ಷೇತ್ರಗಳನ್ನು ನೋಡಿದರೂ ರಾಜಕೀಯದ ನಂಟನ್ನು ಇರಿಸಿಕೊಂಡಿರದ ಕ್ರಿಯಾವಂತ ಚೇತನಗಳು ದುರ್ಲಭ. ಕವನವನ್ನು ಬರೆಯುವವನು ಕತ್ತಲೆ ಕೋಣೆಯಲ್ಲೆಲ್ಲೋ ಕೂತು ಕವಿತ್ವಕ್ಕೆ ಕೈಹಾಕುವುದಿಲ್ಲ. ಜೀವಂತ ಸಮಾಜದ ಅವಿಭಾಜ್ಯ ಅಂಗವಾಗಿ ಅವಳು ಮತ್ತು ಅವನು ಸುತ್ತಣ ಜೀವನವನ್ನು ಅರಗಿಸಿಕೊಂಡೇ ಕಾವ್ಯಮತಿಯನ್ನು ಬೆಳೆಸಿಕೊಳ್ಳುವುದು. ತಮ್ಮ ಕಪ್ಪೆಚಿಪ್ಪುಗಳಲ್ಲಿ ಅಡಗಿಕೊಂಡಿದ್ದು ಕಾವ್ಯ ರಚಿಸುವವರು ಬೆಳಕಿಗೆ ಬಂದಿರುವುದು ಅತಿವಿರಳ. ನೀಲ್ಸ್ ಬೋರ್ ಎಂಬ ಖ್ಯಾತ ಭೌತಶಾಸ್ತ್ರಜ್ಞನಿದ್ದ. ಅವನು ನೊಬೆಲ್ ಪಾರಿತೋಷಕ ಪಡೆದಿದ್ದ ವಿಜ್ಞಾನಿ. ಐನ್‌ಸ್ಟೈನ್‌ನಂತಹವರ ಒಡನಾಟವಿದ್ದವನು ಕೂಡ. ಕೋಪನ್‌ಹೇಗನ್‌ನಲ್ಲಿ ಅವನ ಮನೆಯನ್ನು ಹುಡುಕಿಕೊಂಡು ಯಾರೋ ವಿಜ್ಞಾನಿ ಹೋಗಿದ್ದನಂತೆ. ಬೀದಿಬೀದಿ ಸುತ್ತಿ ಸುಸ್ತಾಗಿ ಕಡೆಗೆ ಒಬ್ಬ ಹುಡುಗನನ್ನು ಕೇಳಿದನಂತೆ: "ಏ ಮರಿ, ನೀಲ್ಸ್ ಬೋರ್ ಎಂಬ ವಿಜ್ಞಾನಿಯ ಮನೆ ಎಲ್ಲಿದೆಯೆಂದು ತೋರಿಸ ಬಲ್ಲೆಯಾ?" ಅದಕ್ಕೆ ಹುಡುಗ ಹೇಳಿದ. "ನನಗೆ ವಿಜ್ಞಾನಿಯೆಂದರೇನೆಂದು ತಿಳಿಯದು, ನನಗೆ ನೀಲ್ಸ್ ಎಂಬುವವರಾರೂ ಗೊತ್ತಿಲ್ಲ. ಆದರೆ ಪಕ್ಕದ ಬೀದಿಯ ತುದಿಯಲ್ಲಿ ಒಬ್ಬ ಸಾಕರ್ (ಫುಟ್‌ಬಾಲ್) ಆಟಗಾರ ಬೋರ್ ಇದ್ದಾನೆ, ಬೇಕಾದರೆ ಅಲ್ಲಿ ವಿಚಾರಿಸಿ ನೋಡಿ." ನೊಬೆಲ್ ಪಾರಿತೋಷಕ ಪಡೆದಿದ್ದ ವಿಜ್ಞಾನಿಯು ತನ್ನ ದೇಶದ ಫುಟ್‌ಬಾಲ್ ತಂಡದಲ್ಲಿ ಆಟಗಾರನೂ ಆಗಿದ್ದ. ಅಷ್ಟೇ ಅಲ್ಲ, ಅವನ ಸಹೋದರನೂ ಅದೇ ತಂಡಕ್ಕೆ ಆಯ್ಕೆಯಾಗಿದ್ದ. ಸಾಕರ್ ಆಟದಲ್ಲಿ ಈ ನೀಲ್ಸ್ ಬೋರ್ ಒಬ್ಬನನ್ನು ಬಿಟ್ಟು ನೊಬೆಲ್ ಪ್ರಶಸ್ತಿ ಪಡೆದಿದ್ದ ಬೇರೆ ಯಾರೂ ರಾಷ್ಟ್ರಮಟ್ಟದಲ್ಲಿ ಆಡಿರುವುದು ಇಲ್ಲವೇ ಇಲ್ಲ. ವಿಜ್ಞಾನ ಮತ್ತು ಫುಟ್‌ಬಾಲ್ ಇದ್ದಂತೆ ಸಮಕಾಲೀನ ರಾಜಕೀಯ ವಿಚಾರಗಳು, ಸಿದ್ಧಾಂತಗಳು ಮತ್ತು ಘಟನೆಗಳು ಸಹ ಅವನ ಆಸಕ್ತಿಯ ಕ್ಷೇತ್ರಗಳಾಗಿದ್ದವು. ಹಿಟ್ಲರನ ಉಪಟಳದ ವಿರುದ್ಧ ಸೆಣಸುವುದರಲ್ಲಿ ಅವನು ಗಮನಾರ್ಹ ಕೆಲಸ ಮಾಡಿದ್ದಾನೆ. ವಿಜ್ಞಾನದ ಕ್ಷೇತ್ರದಲ್ಲಿ ಔನ್ನತ್ಯ ಸಾಧಿಸಿದವರಿಗೆ ಜೀವನದಲ್ಲಿ ಬೇರಾವುದರ ಹಂಗೂ ಇರುವುದಿಲ್ಲ ಅಥವಾ ಇರಬಾರದು ಎಂಬ ಪ್ರತಿಪಾದನೆ ಮಾಡಹೊರಟರೆ ಅದು ಮೂರ್ಖತನವಾಗುತ್ತದೆ. ವಿಜ್ಞಾನವು ಸೃಜನಶೀಲತೆಗೆ ಹೆಸರಾದ ಒಂದು ಕ್ಷೇತ್ರ. ಅದರಲ್ಲಿ ಮಗ್ನರಾದವರು ಏಕಾಗ್ರತೆಯನ್ನು ಸಿದ್ಧಿಸಿ ಕೊಂಡಿರುವವರು. ಆದರೆ ಅವರು ಸ್ಫಟಿಕವನ್ನು ಪ್ರಯೋಗಶಾಲೆಯಲ್ಲಿ ಬಹುವಿಧಗಳಲ್ಲಿ ಅಧ್ಯಯನ ಮಾಡುವಂತೆ ಸುತ್ತಣ ಪರಿಸರ ಮತ್ತು ಮಾನವ ಸಮಾಜವನ್ನು ಸಹ ವಿಶ್ಲೇಷಿಸಿ ನೋಡುತ್ತಿರುತ್ತಾರೆ. ನಮ್ಮ ದೇಶದಲ್ಲಿ ಮೇಘನಾದ ಸಹಾ ಎಂಬ ಅಂತರರಾಷ್ಟ್ರೀಯ ಖ್ಯಾತಿಯ ಒಬ್ಬ ವಿಜ್ಞಾನಿ ಪಾರ್ಲಿಮೆಂಟ್ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಲೋಕಸಭೆಯ ಸದಸ್ಯರಾಗಿದ್ದರು. ಜವಹರ್‌ಲಾಲ್ ನೆಹರು ಯಾವಾಗಲೂ ಸಹ ಅವರ ಮಾತುಗಳಿಗೆ ವಿಶೇಷ ಮನ್ನಣೆ ನೀಡುತ್ತಿದ್ದರು.

**ಡಾ॥ ಜಿ. ರಾಮಕೃಷ್ಣ**

ಐನ್‌ಸ್ಟೈನ್ ವಿಜ್ಞಾನದ ಕ್ಷೇತ್ರದಲ್ಲಿ ಕ್ರಾಂತಿ ಉಂಟುಮಾಡಿದ, ಲೆನಿನ್ ರಾಜಕೀಯ – ಆರ್ಥಿಕ – ಸಾಮಾಜಿಕ – ಸಾಂಸ್ಕೃತಿಕ ವ್ಯವಸ್ಥೆ ಮತ್ತು ಸಂಬಂಧಗಳಲ್ಲಿ ಕ್ರಾಂತಿ ಉಂಟುಮಾಡಿದ. ಒಳ್ಳೆಯ ಕ್ರಿಕೆಟ್ ಆಡುವುದಾದರೆ ವಿಶಿಷ್ಟವಾದ ಬ್ರಾಡ್‌ಮನ್ ಶೈಲಿಯಲ್ಲಿ ಆಡಬೇಕು, ಗುಣಾತ್ಮಕವಾಗಿ ಅದು ಸಾಟಿಯಿಲ್ಲದ್ದು. ಹಾರ್ಡಿಯ ಇಂಗಿತ ಹಾಗಿದ್ದಿತು. ನೀರನ್ನು ಕಾಯಿಸುತ್ತಾ ಹೋದರೆ ಅದರ ಉಷ್ಣತೆಯ ಪರಿಮಾಣ ಹೆಚ್ಚುತ್ತಾ ಸಾಗುತ್ತದೆ. ಅದು ೬೦ ಡಿಗ್ರಿ, ೭೦ ಡಿಗ್ರಿ, ೭೫ ಡಿಗ್ರಿ ಉಷ್ಣತೆಯನ್ನು ಪಡೆದಾಗಲೂ ನೀರಿನ ಲಕ್ಷಣದಲ್ಲಿ ಬದಲಾವಣೆ ಇಲ್ಲ. ಏಕೆಂದರೆ ಅದಿನ್ನೂ ನೀರೇ; ಬೇಕಾದರೆ ಬಿಸಿ ನೀರು, ಸುಡುವ ನೀರು, ಮುಟ್ಟಲಾಗದ ನೀರು ಎಂದೆಲ್ಲಾ ಅದನ್ನು ಭಿನ್ನೈಸಬಹುದು. ಉಷ್ಣತೆಯು ೧೦೦ ಡಿಗ್ರಿಯನ್ನು ದಾಟಿದಾಗ ನೀರು ನೀರಾಗಿರುವುದಿಲ್ಲ, ಅದು ಆವಿಯ ರೂಪ ಪಡೆಯುತ್ತದೆ. ಇದೇ ಪರಿಮಾಣಾತ್ಮಕ ಮತ್ತು ಗುಣಾತ್ಮಕ ಬದಲಾವಣೆಗಳ ನಡುವಿನ ವ್ಯತ್ಯಾಸ. ಯಾವ ರಾಜಕೀಯ ಪ್ರಕ್ರಿಯೆಯು ಗುಣಾತ್ಮಕ ಬದಲಾವಣೆಯತ್ತ ನಮ್ಮನ್ನು ಒಯ್ಯುತ್ತದೋ ಅದು ರಾಜಕೀಯದಲ್ಲಿ ಸೃಜನಶೀಲವಾದ್ದು ಎನಿಸಿಕೊಳ್ಳುತ್ತದೆ.



ನೀಲ್ಸ್ ಬೋರ್



ಜೆ. ಡಿ. ಬರ್ನಾಲ್

ಬ್ರಿಟನ್ನಿನಲ್ಲಿ ಜೆ. ಡಿ. ಬರ್ನಾಲ್ ಎಂಬ ಉಚ್ಚಮಟ್ಟದ ವಿಜ್ಞಾನಿ ಇದ್ದ. ಅವನ ಮಾರ್ಗದರ್ಶನದಲ್ಲಿ ವಿಜ್ಞಾನಿಗಳಾಗಿ ಬೆಳೆದ ಮೂವರು ನೊಬೆಲ್ ಪ್ರಶಸ್ತಿ ಪಡೆದರು, ಆದರೆ ಸ್ವತಃ ಬರ್ನಾಲ್ ಅದನ್ನು ಪಡೆಯಲಿಲ್ಲ. ಅವನು ಜನಸಾಮಾನ್ಯರಿಗಾಗಿಯೇ ಸ್ಥಾಪಿಸಲಾಗಿದ್ದ ಬರ್ಕ್‌ಬೆಕ್ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದ, ಲಂಡನ್ನಿನ ದುಡಿಯುವ ಜನರ ವಾಸಸ್ಥಾನಗಳಿದ್ದ ಮೊಹಲ್ಲಾಗಳಿಗೆ ಹೋಗಿ ಕಾರ್ಖಾನೆಗಳ ಕಾರ್ಮಿಕರಿಗೆ ವಿಜ್ಞಾನದ ಪಾಠ ಹೇಳುತ್ತಿದ್ದ. ಅದೇ ಸಮಯದಲ್ಲಿ ಅವರ ರಾಜಕೀಯ ಪ್ರಜ್ಞೆಯ ವಿಕಾಸಕ್ಕಾಗಿ ಸತತವಾಗಿ ಶ್ರಮಿಸುತ್ತಲೂ ಇದ್ದ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಬ್ರಿಟನ್ನಿನ ಪ್ರಧಾನಿಯಾಗಿದ್ದ ವಿನ್‌ಸ್ಟನ್ ಚರ್ಚಿಲ್ ಈ ವಿಜ್ಞಾನಿಯ ಬಗ್ಗೆ ಕೇಳಿದ್ದ, ಆದರೆ ಅವನ ರಾಜಕೀಯವನ್ನು ಖಂಡಿಸುತ್ತಿದ್ದ. ಯುದ್ಧದ ಸಂದರ್ಭದಲ್ಲಿ ರಕ್ಷಣಾ ಮಂತ್ರಾಲಯದಲ್ಲಿ ವೈಜ್ಞಾನಿಕ ಸಲಹೆಗಾರರನ್ನು ನೇಮಕ ಮಾಡಿಕೊಳ್ಳ ಬೇಕಾಗಿ ಬಂದಾಗ ಬರ್ನಾಲ್‌ಗೆ ಹೇಳಿಕಳಿಸಿದ. ಚರ್ಚಿಲ್ ಎಂದರೆ ಬರ್ನಾಲ್‌ಗೆ ಅಸಹ್ಯ ಉಂಟಾಗುತ್ತಿತ್ತು. ಏಕೆಂದರೆ ಅವನ ರಾಜಕೀಯ ಇವನಿಗೆ ಸರ್ವಥಾ ಹಿಡಿಸದು. ಆದರೆ ಯುದ್ಧವು ದೇಶದ ಪ್ರಶ್ನೆಯಾಗಿ ತ್ತಾದ್ದರಿಂದ ಬರ್ನಾಲ್ ಚರ್ಚಿಲ್‌ನನ್ನು ಸಂಧಿಸಿದ. ಸಲಹೆಗಾರರ ತಂಡದ ನಾಯಕನಾಗಿ ಕೆಲಸ ಮಾಡಲು ಅವನದು ಒಂದು ಷರತ್ತಿತ್ತು: ನಾನು ಯಾವೆಲ್ಲ ವಿಜ್ಞಾನಿಗಳನ್ನು ತಂಡಕ್ಕೆ ಸೇರಿಸ ಬಯಸುತ್ತೇನೋ ಅವರನ್ನೆಲ್ಲಾ ತಕರಾರಿಲ್ಲದೆ ಸೇರಿಸಬೇಕು, ಎಂದು. ಅದಕ್ಕೆ ಚರ್ಚಿಲ್ ಒಪ್ಪಿದ, ಮತ್ತು ಬರ್ನಾಲ್ ಸಲಹೆಗಾರರ ತಂಡದ ಮುಖ್ಯಸ್ಥನಾದ. ತಂಡಕ್ಕೆ ಬೇಕಾಗುವ ವಿಜ್ಞಾನಿಗಳ ಒಂದು ಪಟ್ಟಿಯನ್ನು ಚರ್ಚಿಲ್‌ಗೆ ನೀಡಿದ ನಂತರ ಒಂದು ವಾರ ಕಳೆದರೂ ಅವನು ಕೇಳಿದ್ದವರಲ್ಲಿ ಸಿ. ಪಿ. ಸ್ನೋ ಎಂಬುವನ ನೇಮಕ ಆಗಲಿಲ್ಲ. ಆ ಬಗ್ಗೆ ಚರ್ಚಿಲ್‌ಗೆ ಮಾಹಿತಿ ಕಳಿಸಿಕೊಟ್ಟ. ತನ್ನ ಇಲಾಖೆಯ ಛಾನಸತನದಿಂದ ಬೇಸತ್ತ ಚರ್ಚಿಲ್ ಗೃಹಮಂತ್ರಿಯನ್ನು ಸಂಪರ್ಕಿಸಿ ವಿಚಾರಿಸಿದ. ಅವನಿಗೆ ದೊರೆತ ಉತ್ತರ ಇದು: "ಆ ವ್ಯಕ್ತಿ ಬಹುಕಾಲ ಒಬ್ಬ ಕಮ್ಯುನಿಸ್ಟನ ಒಡನಾಟದಲ್ಲಿದ್ದವನು, ಆದ್ದರಿಂದ ಅವನ ಪೂರ್ವಾಪರಗಳ ತನಿಖೆ ನಡೆಯುತ್ತಿದೆ." ಚರ್ಚಿಲ್‌ಗೆ ಆ ಉತ್ತರ ಹಿಡಿಸಲಿಲ್ಲ. ಯಾರು ಆ ಕಮ್ಯುನಿಸ್ಟ್ ವಿಜ್ಞಾನಿ ಎಂದು ಕೇಳಿದಾಗ ಗೃಹಖಾತೆ ಹೇಳಿತು, ಜೆ. ಡಿ. ಬರ್ನಾಲ್ ಎಂದು. "ಅಯ್ಯಾ, ಅವನೇ ನನ್ನ ಸಲಹೆಗಾರರ ತಂಡದ ಅಧ್ಯಕ್ಷ. ನಿಮ್ಮ ತನಿಖೆ ಸಾಕು, ಕೂಡಲೆ ಅವನು ಹೆಸರಿಸಿರುವವರನ್ನೆಲ್ಲಾ ತಂಡಕ್ಕೆ ನೇಮಿಸಿ" ಎಂದು ಆಜ್ಞೆ ನೀಡಿದ.

ಈ ಪ್ರಕರಣವು ರಾಜಕೀಯ ಸೃಜನಶೀಲತೆಗೆ ಪಕ್ವವಾದ ನಿದರ್ಶನವಾಗಿದೆ. ಬೋರ್, ಸಹಾ ಮತ್ತು ಬರ್ನಾಲ್‌ರಂತಹ ವಿಜ್ಞಾನಿಗಳು ಸೃಜನಶೀಲರಾಗಿರಲಿಲ್ಲ ವೆನ್ನಲಾಗದು. ಅವರು ರಾಜಕೀಯಕ್ಕೆ ವಿಮುಖ ರಾಗಿರಲಿಲ್ಲ. ಆದರೆ ಮಾಮೂಲು ಅರ್ಥದ ರಾಜಕೀಯದಲ್ಲಿಯೂ ತೊಡಗಿರಲಿಲ್ಲ. ಜನ ಸಮುದಾಯದ ಸರ್ವತೋಮುಖವಾದ ಏಳಿಗೆಯು ಅವರ ಕಾಳಜಿಯಾಗಿತ್ತು. ಹಿಟ್ಲರನ ನಾಜಿ ಪಡೆಗೆ ಬಲಿಯಾಗದಿರಲು ರಾತ್ರೋರಾತ್ರಿ ದೋಣಿಯಲ್ಲಿ ಪರಾರಿಯಾಗಿದ್ದವನು ಬೋರ್. ಕಡುಬಡತನದ ಹಿನ್ನೆಲೆಯಲ್ಲಿ ಈಗಿನ ಬಾಂಗ್ಲಾದೇಶದಲ್ಲಿ ಜನಿಸಿದ್ದ ಸಹಾ ಹರಸಾಹಸ ಮಾಡಿ ವಿದ್ಯೆ ಕಲಿತವರು ಮತ್ತು ತುಳಿತಕ್ಕೆ ಸಿಕ್ಕಿದ್ದ ಜನಗಳ ಬಗೆಗೆ ಸದಾ ಚಿಂತಿಸುತ್ತಿದ್ದವರು. ಬರ್ನಾಲ್ ಬದುಕಿನುದ್ದಕ್ಕೂ ಬಂಡವಾಳಶಾಹಿ ಮತ್ತು ವಸಾಹತುಶಾಹಿಯ ವಿರುದ್ಧ ಕಮ್ಯುನಿಸ್ಟ್ ಆಗಿ ಸೆಣೆಸಿದ ಕಾರ್ಯಕರ್ತ. ಈ ಮೂವರ ವರ್ಗಕ್ಕೆ ಸೇರುವ ಸಾಹಿತಿಗಳು ಮತ್ತು ಕಲಾವಿದರು, ಇತಿಹಾಸಕಾರರು ಮತ್ತು ಸಮಾಜಶಾಸ್ತ್ರಜ್ಞರು, ವಿಶ್ವದೆಲ್ಲೆಡೆ ಶೋಭಿಸಿದ್ದಾರೆ. ಪ್ರೇಮ್‌ಚಂದ್ ಮತ್ತು ಶರಚ್ಚಂದ್ರ ಆ ಸಾಲಿಗೆ ಸೇರುವ ನಮ್ಮ ದೇಶದ ಇಬ್ಬರು ಸಾಹಿತಿಗಳು. ಶರಚ್ಚಂದ್ರ ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಭಾಗಿಯಾಗಿದ್ದವರು, ಹಲವು ವರ್ಷಗಳ ಕಾಲ ಕಲ್ಕತ್ತಾದಲ್ಲಿ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿ ಯಾಗಿದ್ದವರು. ಬೇರೆ ದೇಶಗಳಲ್ಲಿ ಇವರಂತೆ ರಾಜಕೀಯದಲ್ಲಿ ಪಾಲ್ಗೊಂಡವರ ಪಟ್ಟಿ ಮಾಡುವುದು ಅನಗತ್ಯ. ರಸೆಲ್, ನೆರುಡಾ, ಸಾರ್ತ್ರ, ಮಾರ್ಕ್ವೆಜ್, ಕಾಡ್‌ವೆಲ್, ನೀಡ್ಹ್ಯಾಮ್, ಡನ್‌ಹ್ಯಾಮ್, ಸ್ವೀಜಿ, ಜಾಕ್ ಲಂಡನ್, ಲೋರ್ಕಾ, ಮಯಕೋವ್‌ಸ್ಕಿ, ಗೋರ್ಕಿ, ಪಿಕಾಸೋ, ಅಗಸ್ಟಿನೋ ನೇಟೋ, ರೇಮಂಡ್ ವಿಲಿಯಮ್ಸ್, ಗಾರ್ಡನ್ ಚೈಲ್ಡ್, ವಿಷ್ಣು ಡೇ, ಮಹಾಶ್ವೇತಾದೇವಿ, ಏಂಜೆಲಾ ಡೇವಿಸ್, ಕಲ್ಪನಾ ದತ್ – ಹೀಗೆ ಸಾವಿರಾರು ಮಂದಿಯನ್ನು ಸ್ಮರಿಸ ಬಹುದು. ಪ್ರತಿಯೊಬ್ಬರೂ ಅನನ್ಯ ರೀತಿಯಲ್ಲಿ ಸೃಜನಶೀಲರು ಮತ್ತು ರಾಜಕೀಯದಲ್ಲಿ ಮೌಲಿಕವಾಗಿ ಪಾಲ್ಗೊಂಡವರು. ಒಂದೇ ಮಾತಿನಲ್ಲಿ ಹೇಳುವುದಾದರೆ, ಸೃಜನಶೀಲತೆಯು ಮಾನವ ಸಮುದಾಯದ ಪುರೋಭಿವೃದ್ಧಿಗೆ ಅಗತ್ಯವಾದ ಸಾಧನ ಮತ್ತು ರಾಜಕೀಯವು ಆ ಸಾಧನವನ್ನು ಬಳಸಿಕೊಳ್ಳುವ ಅಥವಾ ಬಳಸಿಕೊಳ್ಳಬೇಕಾದ ವಿಧಾನದ ಸೂಚಕ.

ವಿಜ್ಞಾನ, ಸಾಹಿತ್ಯ ಮುಂತಾದ ವಿಭಾಗಗಳಲ್ಲಿ ಸೃಜನಶೀಲತೆಯು ಅಭಿವ್ಯಕ್ತವಾಗುವ ಕ್ರಮ ಬಹಳ ಪರಿಚಿತವಾದ್ದು. ಆ ಕ್ರಮಗಳಲ್ಲಿ ಸಾರಾಸಗಟಾಗಿ ಅವೆಲ್ಲಾ ಜನಪರವಾದುವೆಂದು ಹೇಳುವುದು ಕಷ್ಟ. ಜನಪರ ವಾಗಿಲ್ಲದಿರುವಂಥವು ಇಲ್ಲವೇ ಇಲ್ಲವೆಂದು ಇದರರ್ಥವಲ್ಲ. ಭೌತಶಾಸ್ತ್ರವನ್ನು ಆರ್ಯ – ಭೌತಶಾಸ್ತ್ರ ಮತ್ತು ಯಹೂದಿ–ಭೌತಶಾಸ್ತ್ರ ಎಂದು ಭಿನ್ನೈಸಿದ ಫಿಲಿಪ್ ಲೆನಾರ್ಡ್ ಸ್ವತಃ ಉತ್ತಮ ಭೌತಶಾಸ್ತ್ರಜ್ಞನಾಗಿದ್ದ ಮತ್ತು ಹಿಟ್ಲರನ ಆಪ್ತವಲಯಕ್ಕೆ ಸೇರಿದ್ದ. ಐನ್‌ಸ್ಟೈನ್‌ರನ್ನು ಹೀನಾಯವಾಗಿ ದೂಷಿಸುತ್ತಿದ್ದ ಮತ್ತು ಅವರಿಗೆ ಹತ್ತಾರು ವಿಧದ ಕಿರುಕುಳಗಳನ್ನು ನೀಡುತ್ತಿದ್ದ ದುರುಳ ಸೃಜನಶೀಲ ವ್ಯಕ್ತಿ ಅವನು. ನ್ಯೂಟ್ರಾನ್ ಬಾಂಬಿನ ಆವಿಷ್ಕಾರ ಮಾಡಿದ ವಿಜ್ಞಾನಿ

## ವಿಶ್ವದೆಲ್ಲೆಡೆ ಒಂದೆ ಆಚಾರ

ಮೇಲು ಕೀಳೆಂಬ ಭೇದವಿಲ್ಲ, ಹಿರಿಯರು ಕಿರಿಯರೆಂಬ ತಾರತಮ್ಯವಿಲ್ಲ
ರಾಷ್ಟ್ರರಾಷ್ಟ್ರಗಳು ಭಿನ್ನವೆಂಬ ಕಲ್ಪನೆಯ ಸಾರಲವಲೇಶವಿಲ್ಲ
ಅಕ್ಷರಸ್ಥರು, ಅನಕ್ಷರಸ್ಥರೆಂದು ತೂಗಿ ನೋಡುವ ಅಗತ್ಯವೂ ಇಲ್ಲ
ಸ್ವಂತ ತಂದೆ, ಚಿಕ್ಕಪ್ಪ, ಮಾವ, ತಾತನೆಂಬ ಸಂಬಂಧಗಳ ಬಂಧವಿಲ್ಲ
ವಿಶ್ವದೆಲ್ಲೆಡೆ ಮಾನವೀಯತೆ, ಆತ್ಮಸಾಕ್ಷಿ, ಧರ್ಮಮೀರಿದ ಆಚಾರ
ಗುಟ್ಟು ಹೇಳಲಾಗದ ಇಕ್ಕಟ್ಟಿನ ವ್ಯವಹಾರ ವಿಶ್ವವ್ಯಾಪಿ ಅತ್ಯಾಚಾರ!

ಶ್ರೀನಿವಾಸ ಕುಂಡಂತಾಯ
ಬೆಂಗಳೂರು – ೫೬೦ ೦೯೪

ಸ್ಯಾಮ್ಯುಯೆಲ್ ಕೊಹೆನ್ ಅದನ್ನು ಬಳಸುವುದು ಅಮಾನವೀಯವೆಂದು ಎಂದೂ ಹೇಳಲಿಲ್ಲ. ಅವನಂಥವರ ಗುಂಪು ಸಹ ದೊಡ್ಡದೇ, ಆದರೆ ಇತಿಹಾಸವು ಅಂಥವರನ್ನು ಅಷ್ಟಾಗಿ ಸ್ಮರಿಸುವುದಿಲ್ಲ. ಜಾಗತೀಕರಣದ ಪಿಡುಗನ್ನು ವೈಭವೀಕರಿಸುವ ಅರ್ಥಶಾಸ್ತ್ರಜ್ಞರು ಈ ಬಳಗದಲ್ಲಿ ಇಂದು ಪ್ರಮುಖರು ಎನ್ನಬಹುದು.

ಇದೆಲ್ಲದರ ಹಿನ್ನೆಲೆಯಲ್ಲಿ ಮಾತ್ರವೇ ನಾವು ರಾಜಕೀಯ ಎಂಬುದರ ನಿರ್ವಚನ ಮಾಡಿಕೊಳ್ಳಬೇಕು. ಒಂದು ಪಕ್ಷವನ್ನು ಕಟ್ಟಿ ಬೆಳೆಸುವುದು, ನಾಲ್ಕಾರು ಬಾರಿ ಚುನಾವಣೆಗಳಲ್ಲಿ ವಿಜಯಿಗಳಾಗುವುದು, ಒಂದೆರಡು ಯುದ್ಧಗಳಲ್ಲಿ ಜಯ ಗಳಿಸುವುದು, ಅಮೆರಿಕಾದ ಅಧ್ಯಕ್ಷರುಗಳಂತೆ ವಿಶ್ವದೆಲ್ಲೆಡೆ ನೂರಾರು ಪಾತಕಗಳನ್ನೆಸಗುವುದು, ಇವೆಲ್ಲಾ ರಾಜಕೀಯ ಎಂಬುದರ ಪರಿಧಿಗೆ ಖಂಡಿತ ಸೇರಿವೆ; ಆದರೆ ಅವನ್ನು ಸೃಜನಶೀಲ ಎನ್ನಲಾಗುವುದಿಲ್ಲ. ಹಾಗಿದ್ದರೆ ಯಾವುದು ಸೃಜನಶೀಲವಾದ್ದು ಎಂಬ ಜಿಜ್ಞಾಸೆಯನ್ನು ಮಾತು, ವಾದ, ಸಿದ್ಧಾಂತ ಮುಂತಾದ ಪರಿಕರಗಳಿಂದ ಶೋಧಿಸಲಾಗುವುದಿಲ್ಲ. ನಮ್ಮ ದೇಶದ ಅಗಾಧ ಮೇಧಾವಿ ಶ್ರೀನಿವಾಸ ರಾಮಾನುಜನ್ ಯಾರಿಗೆ ಗೊತ್ತಿಲ್ಲ! ತನ್ನ ಗಣಿತಶಾಸ್ತ್ರ ಪ್ರಮೇಯಗಳನ್ನು ಬರೆದು ಅನೇಕ ಶಾಸ್ತ್ರಕೋವಿದರಿಗೆ ಆತ ಕಳಿಸಿದ್ದ. ಅವರು ಯಾರೂ ಉತ್ತರ ಬರೆಯುವ ಸೌಜನ್ಯ ತೋರಲಿಲ್ಲ. ನಾಮಕ್ಕಲ್, ಕುಂಭಕೋಣ ಮತ್ತು ಮದ್ರಾಸ್‌ಗಳನ್ನು ಮಾತ್ರವೇ ತಿಳಿದಿದ್ದ ಈತ ಕಡೆಗೆ ಕೇಂಬ್ರಿಜ್‌ನಲ್ಲಿದ್ದ ಪ್ರಸಿದ್ಧ ಗಣಿತಶಾಸ್ತ್ರಜ್ಞ ಜಿ. ಎಚ್. ಹಾರ್ಡಿಗೆ ಅದನ್ನು ಕಳಿಸಿದ. ಅದನ್ನು ಸ್ವೀಕರಿಸಿ ಕಣ್ಣಾಡಿಸಿದ ಹಾರ್ಡಿ ಆ ದಿನವೇ ಆಕ್ಸ್‌ಫರ್ಡ್‌ನಲ್ಲಿದ್ದ ಅವನ ಸ್ನೇಹಿತ ಲಿಟ್ಲ್‌ವುಡ್‌ಗೆ ಸಂದೇಶ ಕಳಿಸಿ ಮಾರನೆಯ ದಿನ ಅವನನ್ನು ಬರಮಾಡಿಕೊಂಡ. ಮುಂದಿನ ಘಟನೆಗಳು ಇತಿಹಾಸ ಪ್ರಸಿದ್ಧವಾಗಿವೆ. ಹಾರ್ಡಿಗೆ ಗಣಿತಶಾಸ್ತ್ರ ಬಿಟ್ಟರೆ ಇನ್ನೊಂದು ಹುಚ್ಚು ಕ್ರಿಕೆಟ್. ಯಾವುದನ್ನೇ ಆಗಲಿ ಅವನು ಕ್ರಿಕೆಟ್ಟಿನ ಪರಿಭಾಷೆಯಲ್ಲಿ ಮಾಪನ ಮಾಡುತ್ತಿದ್ದ. ಆದ್ದರಿಂದ ಶ್ರೇಣೀಕರಣದಲ್ಲಿ ಅತ್ಯುತ್ತಮವೆಂದು ಅವನಿಗೆ ತೋರಿದ್ದನ್ನು ಬ್ರಾಡ್‌ಮನ್ ಕ್ಲಾಸ್ ಎಂದು ಕರೆಯುತ್ತಿದ್ದ. ಅಂದರೆ, ಅದು ಸೊಗಸಾದ್ದು, ಅನನ್ಯವಾದ್ದು, ಅನುಕರಣೆಗೆ ಅರ್ಹವಾದ್ದು ಮತ್ತು ಸರ್ವರ ಮಾನ್ಯತೆಗೆ ಯೋಗ್ಯವಾದ್ದು ಎಂದರ್ಥ. ವಿಜ್ಞಾನದಲ್ಲಿ ಐನ್‌ಸ್ಟೈನ್ ಮತ್ತು ರಾಜಕೀಯದದಲ್ಲಿ ಲೆನಿನ್ "ಬ್ರಾಡ್‌ಮನ್ ಕ್ಲಾಸ್"ನವರೆಂದು ಅವನು ತೀರ್ಮಾನ ನೀಡಿದ್ದ. ಅವನ ದೃಷ್ಟಿಯಲ್ಲಿ ಯಾವುದೇ ಕ್ಷೇತ್ರದಲ್ಲಿ ಗುಣಾತ್ಮಕವಾಗಿ ಭಿನ್ನವಾದ್ದು, ಶ್ರೇಷ್ಠವಾದ್ದು ಮತ್ತು ಸುಂದರವಾದ್ದು ಬ್ರಾಡ್‌ಮನ್ ಕ್ಲಾಸ್‌ಗೆ ಸೇರುತ್ತದೆ. ಬದಲಾವಣೆಯಲ್ಲಿ ಪರಿಮಾಣಾತ್ಮಕವಾದ್ದು ಮತ್ತು ಗುಣಾತ್ಮಕವಾದ್ದು ಎಂಬ ವಿಭಾಗ ಸಾಧ್ಯ. ಒಂದು ಹಳ್ಳಿಯಲ್ಲಿ ನೀರಿನ ಕೊರತೆ ಇದೆ ಎಂದಿಟ್ಟುಕೊಳ್ಳೋಣ. ಅದಕ್ಕೆ ಏನು ಪರಿಹಾರಗಳನ್ನು ನೀಡಬಹುದು? ಈ ಊರು ಬಿಟ್ಟು ಬೇರೆ ಊರಿಗೆ ಹೋಗಿ ಎಂದು ಹೇಳಬಹುದು. ಪ್ರತಿದಿನ ಎರಡು ಲಾರಿ ನೀರು ಸರಬರಾಜು ಮಾಡಬಹುದು. ಎರಡರಿಂದ ನಾಲ್ಕಕ್ಕೆ ಹೆಚ್ಚಿಸಬಹುದು. ಐದು ಮೈಲಿ ದೂರದ ಹಳ್ಳದಿಂದ ನೀರು ತಂದುಕೊಡುವ ವ್ಯವಸ್ಥೆ ಮಾಡಬಹುದು, ಇಲ್ಲವೆ ಕಾವೇರಿ ನೀರು ಹರಿಸಬಹುದು. ನ್ಯೂನತೆಗಳಿಂದ ತುಂಬಿದ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆ ತಂದು ಸಮಾಧಾನಕರವಾದ ದೀರ್ಘಕಾಲೀನ ಪರಿಹಾರ ಉಂಟುಮಾಡುವುದು ಗುಣಾತ್ಮಕ ಪರಿಣಾಮ, ಮಿಕ್ಕವೆಲ್ಲಾ ಪರಿಮಾಣಾತ್ಮಕ ಬದಲಾವಣೆಗಳು. ಐನ್‌ಸ್ಟೈನ್ ವಿಜ್ಞಾನಕ್ಕೆ ಸಂಪೂರ್ಣವಾಗಿ ಹೊಸ ರೂಪ ಕೊಟ್ಟ, ಆವರೆಗೆ ವೈಜ್ಞಾನಿಕ ಸಂಶೋಧನೆಗೆ ಮುಗ್ಗಟ್ಟು ಒಡ್ಡಿದ್ದ ಅಂಶಗಳಿಗೆ ಸಮರ್ಪಕ ಉತ್ತರ ಕೊಟ್ಟು ಮುಂದಿನ ಹಾದಿಯನ್ನು ಸುಗಮಗೊಳಿಸಿದ. ಅದು ತೇಪೇದಾರಿ ಬದಲಾವಣೆಯಲ್ಲ, ಅದು ವಿಜ್ಞಾನದ ಮೂಲ ಲಕ್ಷಣವನ್ನು ಬದಲಿಸಿದ ಪ್ರಕ್ರಿಯೆ. ಲೆನಿನ್ ಮಾಡಿದ್ದೂ ಅದನ್ನೇ. ಪ್ರಭುತ್ವದ ಲಕ್ಷಣವನ್ನು ಸಾರವತ್ತಾಗಿ ಬದಲಾಯಿಸಿದ್ದು ಅವನ ಕೊಡುಗೆ. ಐನ್‌ಸ್ಟೈನ್ ವಿಜ್ಞಾನದ ಕ್ಷೇತ್ರದಲ್ಲಿ ಕ್ರಾಂತಿ ಉಂಟುಮಾಡಿದ, ಲೆನಿನ್ ರಾಜಕೀಯ – ಆರ್ಥಿಕ– ಸಾಮಾಜಿಕ – ಸಾಂಸ್ಕೃತಿಕ ವ್ಯವಸ್ಥೆ ಮತ್ತು ಸಂಬಂಧಗಳಲ್ಲಿ ಕ್ರಾಂತಿ ಉಂಟುಮಾಡಿದ. ಒಳ್ಳೆಯ ಕ್ರಿಕೆಟ್ ಆಡುವುದಾದರೆ ವಿಶಿಷ್ಟವಾದ ಬ್ರಾಡ್‌ಮನ್ ಶೈಲಿಯಲ್ಲಿ ಆಡಬೇಕು, ಗುಣಾತ್ಮಕವಾಗಿ ಅದು ಸಾಟಿಯಿಲ್ಲದ್ದು, ಹಾರ್ಡಿಯ ಇಂಗಿತ ಹಾಗಿದ್ದಿತು. ನೀರನ್ನು ಕಾಯಿಸುತ್ತಾ ಹೋದರೆ ಅದರ ಉಷ್ಣತೆಯ ಪರಿಮಾಣ ಹೆಚ್ಚುತ್ತಾ ಸಾಗುತ್ತದೆ. ಅದು ೬೦ ಡಿಗ್ರಿ, ೭೦ ಡಿಗ್ರಿ, ೭೫ ಡಿಗ್ರಿ ಉಷ್ಣತೆಯನ್ನು ಪಡೆದಾಗಲೂ ನೀರಿನ ಲಕ್ಷಣದಲ್ಲಿ ಬದಲಾವಣೆ ಇಲ್ಲ. ಏಕೆಂದರೆ ಅದಿನ್ನೂ ನೀರೇ; ಬೇಕಾದರೆ ಬಿಸಿ ನೀರು, ಸುಡುವ ನೀರು, ಮುಟ್ಟಲಾಗದ ನೀರು ಎಂದೆಲ್ಲಾ ಅದನ್ನು ಭಿನ್ನೈಸಬಹುದು. ಉಷ್ಣತೆಯು ೧೦೦ ಡಿಗ್ರಿಯನ್ನು ದಾಟಿದಾಗ ನೀರು ನೀರಾಗಿರುವುದಿಲ್ಲ, ಅದು ಆವಿಯ ರೂಪ ಪಡೆಯುತ್ತದೆ. ಇದೇ ಪರಿಮಾಣಾತ್ಮಕ ಮತ್ತು ಗುಣಾತ್ಮಕ ಬದಲಾವಣೆಗಳ ನಡುವಿನ ವ್ಯತ್ಯಾಸ. ಯಾವ ರಾಜಕೀಯ ಪ್ರಕ್ರಿಯೆಯು ಗುಣಾತ್ಮಕ ಬದಲಾವಣೆಯತ್ತ ನಮ್ಮನ್ನು ಒಯ್ಯುತ್ತದೋ ಅದು ರಾಜಕೀಯದಲ್ಲಿ ಸೃಜನಶೀಲವಾದ್ದು ಎನಿಸಿಕೊಳ್ಳುತ್ತದೆ. ಜನಸಮುದಾಯದ ದೃಷ್ಟಿಯಿಂದ ಹೇಳುವುದಾದರೆ, ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳಲ್ಲಿ ಗುಣಾತ್ಮಕ ಬದಲಾವಣೆಯು ರಾಜಕೀಯ ಸೃಜನಶೀಲತೆಯ ಮೂಲಭೂತ ಲಕ್ಷಣ. ಇತಿಹಾಸದಲ್ಲಿ ಅಂತಹ ಹಂತಗಳನ್ನು ಕಾಣಬಹುದು. ಗುಲಾಮಗಿರಿ ಅಥವಾ ದಾಸ್ಯದ ಪದ್ಧತಿ ಇರುವ ವ್ಯವಸ್ಥೆಯು ಅದಿಲ್ಲದಿರುವಂತಹ ವ್ಯವಸ್ಥೆಯಾಗಿ ಬದಲಾದರೆ ಅದು ಗುಣಾತ್ಮಕ ಬದಲಾವಣೆ. ಗುಲಾಮರಿಗೆ ೫೦ ಛಡಿ ಏಟು ಬೀಳುವ ಬದಲು ಅದು ೨೦ಕ್ಕೆ ಇಳಿದರೆ ಅಥವಾ ೭೦ಕ್ಕೆ ಹೆಚ್ಚಿದರೆ ಅದು ಕೇವಲ ಪರಿಮಾಣಾತ್ಮಕ ಬದಲಾವಣೆ ಎನಿಸಿಕೊಳ್ಳುತ್ತದೆ. ನಮ್ಮ ದೇಶದಲ್ಲಿ ಅಸ್ಪೃಶ್ಯತೆಯ ಭಾವನೆಯು ಕಳೆದ ಇನ್ನೂರು ವರ್ಷಗಳಲ್ಲಿ ಹೇಗೆ ಭಿನ್ನವಾಗುತ್ತ ಬಂದಿದೆಯೆಂಬುದನ್ನು ಗಮನಿಸಿದರೆ ಪರಿಮಾಣಾತ್ಮಕ ಬದಲಾವಣೆಯನ್ನು ಗುರುತಿಸಬಹುದು. ಆದರೆ ಗುಣಾತ್ಮಕ ಬದಲಾವಣೆ ಆಗಿಲ್ಲ ಎಂಬುದೂ ಗಮನಕ್ಕೆ ಬರುತ್ತದೆ. ಆಸ್ತಿಯಾಗಲಿ, ವಿದ್ಯೆಯಾಗಲಿ, ನೌಕರಿಯ ಅಂತಸ್ತಾಗಲಿ ಇಲ್ಲದ ಅಸ್ಪೃಶ್ಯರು ಇನ್ನೂ ಅಸ್ಪೃಶ್ಯರಾಗಿಯೇ ಉಳಿದುಬಿಟ್ಟಿದ್ದಾರೆ. ಈವರೆಗಿನ ರಾಜಕೀಯವು ಅದನ್ನು ಮೂಲೋತ್ಪಾಟನೆ ಮಾಡುವಷ್ಟು ಸೃಜನಶೀಲವಾಗಿ ಬೆಳೆದಿಲ್ಲವೆಂಬುದು ಅದರ ತಾತ್ಪರ್ಯ. ಬೇರೊಂದು ರೀತಿಯಲ್ಲಿ ಹೇಳುವುದಾದರೆ, ಎಲ್ಲಿಯವರೆಗೆ ಆಸ್ತಿ–ವಿದ್ಯೆ–ನೌಕರಿ ಮುಂತಾದುವೆಲ್ಲಾ ಎಲ್ಲರಿಗೂ ದಕ್ಕುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಸಮಾಜದ ಮೂಲ ಲಕ್ಷಣವಾದ ಅಸಮಾನತೆ ಮತ್ತು ಅಸಮಾನ ಅವಕಾಶ ಮುಂದುವರಿಯುತ್ತದೆ. ಅದನ್ನು ಇಲ್ಲವಾಗಿಸುವುದು ರಾಜಕೀಯ ಸೃಜನಶೀಲತೆ. ರಾಜಕಾರಣಿಗೆಳೆಲ್ಲಾ ಪದ್ಯವನ್ನೋ, ಕತೆಯನ್ನೋ, ನಾಟಕವನ್ನೋ ಬರೆಯಬಹುದು; ಆದರೆ ಅದು ರಾಜಕೀಯ ಸೃಜನಶೀಲತೆ ಎನಿಸಿಕೊಳ್ಳುವುದಿಲ್ಲ.

ರಾಜಕೀಯ ಎಂಬ ಪದದಲ್ಲಿಯೇ ಒಂದು ವ್ಯಂಗ್ಯವಿದೆ. ರಾಜರಿಲ್ಲದ ಕಾಲದಲ್ಲಿ ರಾಜತ್ವದ ಸ್ಥಾನ ಮತ್ತು ಪ್ರಭಾವ ಹೊಂದಲು ತವಕಿಸುವವರಿಗೆ ಕೊರತೆ ಇಲ್ಲ. ಅಂತಹ ಆಶಯವನ್ನು ಪೂರೈಸಿಕೊಳ್ಳಲು ಅನುಸರಿಸಲಾಗುವ, ಅಷ್ಟೇನೂ ಶ್ಲಾಘನೀಯವಲ್ಲದ, ಕ್ರಮವನ್ನು ಸಾಮಾನ್ಯವಾಗಿ ರಾಜಕೀಯ ಎನ್ನಲಾಗುತ್ತದೆ. ಇದರ ವಿಶೇಷವೇನೆಂದರೆ ಆರ್ಥಿಕ ಅವಶ್ಯಕತೆಗಳು ಮತ್ತು ಸೂತ್ರಗಳು ರಾಜಕೀಯವನ್ನು ಪ್ರಭಾವಿಸುವ ಬದಲು ರಾಜಕೀಯದ ಫಲಾನುಭವಿಗಳಿಗೆ ಅನುಕೂಲ ಕಲ್ಪಿಸುವ ಆರ್ಥಿಕ ಸೂತ್ರಗಳನ್ನು ರೂಪಿಸಿ ಅಳವಡಿಸಲಾಗುತ್ತದೆ. ಆಂಟೋನಿಯೋ ಗ್ರಾಂಶಿ ಮತ್ತು ಬೇರೆ ಕೆಲವರು ಪ್ರತಿಪಾದಿಸಿರುವಂತೆ ಇಂತಹ ರಾಜಕೀಯವು ಸಾಮಾಜಿಕವಾಗಿ ಅಧಿಕಾರವನ್ನು ನಿರಂತರವಾಗಿ ಒಂದು ವರ್ಗವು


ಫಿಲಿಪ್ ಲೆನಾರ್ಡ್


ಆಲ್ಬರ್ಟ್ ಐನ್‌ಸ್ಟೈನ್


ಲೆನಿನ್

ತನ್ನಲ್ಲಿ ಕೇಂದ್ರೀಕರಿಸಿಕೊಳ್ಳಲು ಸಾಧನವಾಗುತ್ತದೆ. ಈ ರೀತಿಯ ಅಧಿಕಾರವನ್ನು 'ಹೆಗಿಮನಿ' ಎಂದು ಕರೆಯುತ್ತಾರೆ. ಕೆಳಸ್ತರದವರು ಸಮಾಜದಲ್ಲಿ ಸ್ಥಿರವಾಗಿ ಅಲ್ಲೇ ಉಳಿಯುವಂತಾಗುವುದು ಇದರ ಪರಿಣಾಮ. ಸಮಾನತೆ ಮತ್ತು ನೈಜ ಪ್ರಜಾಪ್ರಭುತ್ವಕ್ಕೆ ಇದರಲ್ಲಿ ಅವಕಾಶವಿಲ್ಲ. ರೇಮಂಡ್ ವಿಲಿಯಮ್ಸ್ ವ್ಯಾಖ್ಯಾನಿಸಿರುವಂತೆ ಇದು ಗ್ರೀಕ್ ಭಾಷೆಯ 'ಎಗೆಮೋನ್' ಎಂಬ ಪದದಿಂದ ಉದ್ಭವಿಸಿದೆ. ಆ ಪದವು 'ನಾಯಕ' 'ಆಳ್ವಿಕೆ ನಡೆಸುವವನು' ಎಂಬ ಅರ್ಥವನ್ನು ಹೊಂದಿದೆ. ಇಂದಿನ ಅಂತರರಾಷ್ಟ್ರೀಯ ರಾಜಕೀಯ ವಿದ್ಯಮಾನಗಳಲ್ಲಿ ಮಿತಿಯಿಲ್ಲದ ಅಧಿಕಾರ ಕೇಂದ್ರದ ಉಪದ್ರವೀ ಅಧಿಕಾರವನ್ನು ಹೆಗಿಮನಿ ಎನ್ನಬಹುದು. ಅದು ಸೂಪರ್‌ಪವರ್‌ಗಳ ಎಗ್ಗಿಲ್ಲದ ಅಧಿಕಾರ. ಅದನ್ನು ಸೀಮಿತಗೊಳಿಸಿ ಒಂದು ರಾಷ್ಟ್ರದ ಮಟ್ಟದಲ್ಲಿ ನೋಡಿದಾಗ ಅದು ಒಂದು ವರ್ಗವು ಶಾಶ್ವತವಾಗಿ ಅಧಿಕಾರವನ್ನು ತನ್ನ ಕೈಯಲ್ಲಿ ಹಿಡಿದಿಟ್ಟುಕೊಳ್ಳುವ ಸ್ವರೂಪದಲ್ಲಿರುತ್ತದೆ. ಹಾಗೆ ಅಧಿಕಾರವನ್ನು ಉಳಿಸಿಕೊಳ್ಳಲು ಆರ್ಥಿಕ ಬಲ, ಸಾಂಸ್ಕೃತಿಕ ಹಿರಿಮೆ, ಬಣದ ಪಾರಂಪರಿಕ ಸ್ಥಾನ ಹೀಗೆ ಎಲ್ಲವನ್ನೂ ಬಳಸಿಕೊಳ್ಳಲಾಗುತ್ತದೆ. ಜನಸಮುದಾಯದ ಪರವಾದ ರಾಜಕೀಯವು ಇಂತಹ ಸ್ವಯಂ ಆರೋಪಿತ ಪ್ರತಿಷ್ಠೆಯನ್ನು ಪ್ರಶ್ನಿಸುತ್ತದೆ. ಹಾಗೆ ಮಾಡುವುದೇ ರಾಜಕೀಯದ ಸೃಜನಶೀಲತೆಯಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಅಗತ್ಯವಾಗಿ ಎಂಥದೋ ಒಂದು ಕ್ರಿಯೆಯಲ್ಲಿ ತೊಡಗಿರುವುದು ಸಹಜ. ಸಮಾಜದಲ್ಲಿ ಜೀವಿಸುತ್ತಿರುವ ವ್ಯಕ್ತಿಯು ತನ್ನ ಸಾಮಾಜಿಕ ಪರಿಸರದ ಮೇಲೆ ಏನಾದರೊಂದು ಪ್ರಭಾವವನ್ನು ಬೀರುತ್ತಿರುತ್ತಾನೆ (ಳೆ). ತನ್ಮೂಲಕ ಸಮಾಜದ ಬದಲಾವಣೆಗೆ ಏನಾದರೊಂದು ರೀತಿಯಲ್ಲಿ ಕಾರಣನಾಗಿರುತ್ತಾನೆ (ಳೆ). ವ್ಯಕ್ತಿಗಳ ಪ್ರಜ್ಞಾವಲಯದ ವ್ಯಾಪ್ತಿಯಲ್ಲಿ ಭಿನ್ನತೆ ಇರಲು ಸಾಧ್ಯ ಮತ್ತು ಆ ಭಿನ್ನತೆಯು ವ್ಯಕ್ತಿಯ ಪ್ರಭಾವದ ಮಿತಿಯನ್ನು ನಿರ್ಧರಿಸುತ್ತದೆ. ಇಲ್ಲಿ ಪ್ರಶ್ನೆ ಎಂದರೆ ಶಿಕ್ಷಣದ ಮಟ್ಟಕ್ಕೆ ಸಂಬಂಧಿಸಿದ್ದಲ್ಲ, ಬದಲಾಗಿ ಅದು ಸಾಮಾಜಿಕ ಪ್ರಜ್ಞೆಯನ್ನು ಸೂಚಿಸುತ್ತದೆ.

ಇತಿಹಾಸದಿಂದ ಹೆಕ್ಕಿ ತೆಗೆದ ದೃಷ್ಟಾಂತಗಳು ಇದನ್ನು ಹೆಚ್ಚು ಸಮಗ್ರವಾಗಿ ಸ್ಪಷ್ಟಗೊಳಿಸುತ್ತವೆ. ಇಂದಿನ ಸನ್ನಿವೇಶದಲ್ಲಿ ಆ ದೃಷ್ಟಾಂತಗಳು ನಮ್ಮ ಕಣ್ಣು ತೆರೆಸಬೇಕು. ರೈತರು ಆತ್ಮಹತ್ಯೆಯಂತಹ ಭೀಕರ ಅಂತ್ಯಕ್ಕೆ ತಮ್ಮನ್ನು ತಾವು ಅರ್ಪಿಸಿಕೊಳ್ಳುತ್ತಿರುವಾಗಲೂ ನಮ್ಮ ಪಕ್ಷ – ನಿಮ್ಮ ಪಕ್ಷ ಎಂದು ಕಚ್ಚಾಡುವ ಮತ್ತು ಕೆಸರನ್ನು ಎರಚಾಡಿಕೊಳ್ಳುವ ನಮ್ಮ "ಜನ ಪ್ರತಿನಿಧಿಗಳು" ಆ ನಾಮಾಂಕಿತಕ್ಕೆ ಯೋಗ್ಯರಾಗಬೇಕಾದರೆ ಮೊದಲು ಅಂತಃಕರಣವನ್ನು ಸ್ವಲ್ಪ ತೊಳೆದುಕೊಳ್ಳಬೇಕು. ಸಕ್ಕರೆ ಕಾರ್ಖಾನೆಗಳ ಮಾಲೀಕರೇ ಮಂತ್ರಿಗಳು ಮತ್ತು ಶಾಸಕರಾಗಿದ್ದರಂತೂ ಡೆಟಾಲ್ ಹಾಕಿ ಮನಸ್ಸನ್ನು ತೊಳೆದುಕೊಳ್ಳಬೇಕು. ಅದಕ್ಕೆ ಈ ದೃಷ್ಟಾಂತಗಳು ಸ್ವಲ್ಪಮಟ್ಟಿಗೆ ನೆರವಾಗಬಲ್ಲವು. ಕಲ್ಲು ಹೃದಯದವರಿಗೆ ಯಾವುದೂ ನೆರವಾಗಲಾರದೆಂಬುದೂ ನಿಜ. ಇಂದಿನ ನಮ್ಮ ಕೇಂದ್ರ ಸರ್ಕಾರದ ನೀತಿಗಳು ಅದನ್ನು ಸಾಬೀತುಗೊಳಿಸುತ್ತವೆ.

ನಾವೀಗ ಜನರ ಮರ್ದನವನ್ನು ನೋಡುತ್ತಾ ಕಾಲ ನೂಕುತ್ತಿದ್ದೇವೆ. ಪ್ರಾಚೀನ ಇಟಲಿಯಲ್ಲಿ, ವಿಶೇಷತಃ ರೋಮ್ ಮತ್ತು ನೇಪಲ್ಸ್‌ಗಳಲ್ಲಿ ಗುಲಾಮರನ್ನು ಕ್ರೂರ ಮೃಗಗಳ ಜೊತೆ ಪಂಜರಗಳಿಗೆ ನೂಕಿ ಅನುಕೂಲಸ್ಥ ಜನ ಪ್ರೇಕ್ಷಕರಾಗಿ ಗುಲಾಮರ ಸಾವನ್ನು ಸವಿಯುತ್ತಿದ್ದರು. ಗುಲಾಮರನ್ನು ಕುಸ್ತಿಪಟುಗಳನ್ನಾಗಿ ಬೆಳೆಸಿ ಅವರನ್ನು ಗ್ಲೇಡಿಯೇಟರ್ಸ್ ಎಂದು ಕರೆಯಲಾಗುತ್ತಿತ್ತು; ಅಂತಹ ಇಬ್ಬರನ್ನು ಅಖಾಡಕ್ಕೆ ತಳ್ಳಿ ಯಾರಾದರೊಬ್ಬ ಸಾಯುವುದನ್ನು ಕಾಣಲು ತುದಿಗಾಲಲ್ಲಿ ನಿಂತಿರುತ್ತಿದ್ದರು. ಇಂತಹ ದೌರ್ಜನ್ಯದ ಆಟಗಳಿಗೆ ಕೊಲೀಸಿಯಂ ಎನ್ನುವ ಕ್ರೀಡಾಂಗಣಗಳನ್ನು ಕಟ್ಟಿಕೊಂಡು ೩೦,೦೦೦ ಜನ ಆನಂದವನ್ನರಸಿ ಸೇರುತ್ತಿದ್ದರು. ಸ್ಪಾರ್ಟಕಸ್ ಎಂಬ ಗುಲಾಮನ ಸರದಿ ಬಂದಾಗ ಅವನು ಗುಲಾಮರ ದಂಗೆಯನ್ನು ಸಂಘಟಿಸಿದ. ಗುಲಾಮಿ ಪದ್ಧತಿಯ ಶವದ ಪೆಟ್ಟಿಗೆ ಅಲ್ಲಿಂದ ಆರಂಭವಾಯಿತು. ರೋಮಿನ ಹೊಲಸು ರಾಜಕೀಯಕ್ಕೆ ಸ್ಪಾರ್ಟಕಸ್ ಸುಗಂಧದ ರಾಜಕೀಯ ಲೇಪ ನೀಡಿ ಗುಣಾತ್ಮಕ ಬದಲಾವಣೆಯನ್ನು ತಂದ, ಗುಲಾಮಗಿರಿ ಪದ್ಧತಿಯನ್ನು ಹೂತುಹಾಕಿದ. ಅದನ್ನು ಏಕಾಕಿಯಾಗಿ ಮಾಡಲಿಲ್ಲ, ಬದಲಾಗಿ ಇಡೀ ಗುಲಾಮ ಸಮುದಾಯದ ಸಂಘಟನೆಯ ಮೂಲಕ ಮಾಡಿದ. ರಾಜಕೀಯದಲ್ಲಿ ಉತ್ತಮವಾದ ಸೃಜನಶೀಲತೆಯ ನೆಲೆಯನ್ನು ಯೂರೋಪಿನಲ್ಲಿ ಕಲ್ಪಿಸಿಕೊಟ್ಟ ಐಕ್ಯ ಹೋರಾಟ ಅದು. ನಮ್ಮಲ್ಲಿ ಗುಲಾಮಿ ಪದ್ಧತಿ ಇಲ್ಲದಿದ್ದರೂ ಕೆಲವರನ್ನು ಗುಲಾಮರಂತೆ ನಡೆಸಿಕೊಳ್ಳುವ ವ್ಯವಸ್ಥೆ ಇದೆ. ನಮ್ಮ ಯಾವ ರಾಜಕಾರಣಿ ಸ್ಪಾರ್ಟಕಸ್ ಆಗುತ್ತಾನೆಂದು ನೋಡಲು ಕಾದುಕುಳಿತಿದ್ದೇವೆ. ಚಿಲಿ ಎಂಬ ಸಂಪದ್ಭರಿತ ಬಡದೇಶವೊಂದು ದಕ್ಷಿಣ ಅಮೆರಿಕಾದಲ್ಲಿದೆ. ನಾಲ್ಕು ಶತಮಾನಗಳ ಹಿಂದೆ ದಕ್ಷಿಣ ಅಮೆರಿಕಾದ ಚಿನ್ನವನ್ನು ಸ್ಪೇನ್ ಲೂಟಿ ಮಾಡಿತು ಮತ್ತು ಈಗ ಚಿಲಿಯ ತಾಮ್ರವನ್ನು ವಾಷಿಂಗ್‌ಟನ್ನಿನಲ್ಲಿರುವ ಅಮೆರಿಕಾ ಸರ್ಕಾರದ ಆಶ್ರಯದಲ್ಲಿ ಲೂಟಿ ಮಾಡಲಾಗುತ್ತಿದೆ. ೧೯೭೦ರ ದಶಕದಲ್ಲಿ ಸಾಲ್ವೆಡಾರ್ ಅಲೆಂಡೆ ಎಂಬ ರಾಜಕೀಯ ಮುತ್ಸದ್ದಿಯು ವಿಶ್ವಸಂಸ್ಥೆಯ ಮಹಾಧಿವೇಶನದಲ್ಲಿ ಹೇಳಿದ: ಚಿಲಿಯ ಸಂದರ್ಭದಲ್ಲಿ ಸ್ವಾತಂತ್ರ್ಯವೆಂದರೆ ನಮ್ಮ ದೇಶದ ತಾಮ್ರಕ್ಕೆ ನಾವು ಮಾಲೀಕರಾಗುವುದು, ಎಂದು. ೧೯೭೩ರಲ್ಲಿ ಅಧ್ಯಕ್ಷ ನಿಕ್ಸನ್ ಆತನನ್ನು ಕೊಲ್ಲಿಸಿದ. ಅಲೆಂಡೆಯ ಆರ್ಥಿಕ ವಿಶ್ಲೇಷಣೆಯು ರಾಜಕೀಯ ಸೃಜನಶೀಲತೆಗೆ ಮಹತ್ವದ ನಿದರ್ಶನ. ಬಹುರಾಷ್ಟ್ರೀಯ ಕಂಪನಿಗಳಿಗೆ ರತ್ನಗಂಬಳಿ ಹಾಸಿ ಸ್ವಾಗತ ನೀಡುತ್ತಿರುವ ಭಾರತದಲ್ಲಿ ಒಬ್ಬ ಅಲೆಂಡೆ ಬೇಕಾಗಿದೆ. ನಮ್ಮ ನೈಸರ್ಗಿಕ ಸಂಪತ್ತು ಮತ್ತು ಕಚ್ಚಾವಸ್ತುಗಳು ನಮ್ಮ ದೇಶದ ಜನರ ಆಸ್ತಿಯಾಗಬೇಕೆಂಬ ಆಶಯವನ್ನು ಹೊತ್ತು ಸಂಘಟನೆಗೊಳ್ಳುವ ರಾಜಕೀಯವು ಸೃಜನಶೀಲವಾಗಿರುತ್ತದೆ. ಮಾತಿನ ಅರ್ಥರಹಿತ ಬುಡುಬುಡಿಕೆಯಲ್ಲಿ ಪ್ರಜಾಪ್ರಭುತ್ವದ ಹೊನಲು ಹರಿಯುವುದಿಲ್ಲ; ಎದೆ ಎಷ್ಟೇ ಅಂಗುಲಗಳದ್ದಿರಲಿ! ರಾಜಕೀಯ ಸೃಜನಶೀಲತೆ ಅದನ್ನು ಆಗುಮಾಡಬೇಕು. ಗ್ರಾಂಶಿ ಪ್ರತಿಪಾದಿಸಿದ್ದ ಹೆಗಿಮನಿಯನ್ನು ನಿರ್ನಾಮ ಮಾಡುವ ವಿಚಾರವು ನಮ್ಮ ರಾಜಕೀಯ ಸೃಜನಶೀಲತೆಯ ನೆಲೆಯಾಗುತ್ತದೆ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಹಿಟ್ಲರನ ಸೈನ್ಯವು ಫ್ರಾನ್ಸ್‌ಅನ್ನು ಆಕ್ರಮಿಸಿತ್ತು. ಪಾಲ್ ಲಾಂಗೆವಾನ್‌ನಂತಹ ವಿಜ್ಞಾನಿಗಳನ್ನು ಬಂಧನದಲ್ಲಿ ಇರಿಸಲಾಯಿತು. ಜೋಲಿಯೋ ಕ್ಯೂರಿ (ಮೇಡಂ ಕ್ಯೂರಿಯ ಅಳಿಯ) ತನ್ನ ಪ್ರಯೋಗಶಾಲೆಯಲ್ಲಿ ಪರಮಾಣು ವಿಜ್ಞಾನ ಸಂಶೋಧನೆ ನಡೆಸುತ್ತಿದ್ದ. ಅದರ ಅಂಗವಾಗಿ 'ಹೆವಿ ವಾಟರ್' ಶೇಖರಿಸಿದ್ದ. ನಾಜಿಗಳಿಂದ ರಕ್ಷಿಸಲು ಅದನ್ನು ಒಂದು ದೊಡ್ಡ ಜೈಲಿನ ಕೋಣೆಗೆ ಸಾಗಿಸಿದ ಮತ್ತು ತಾನು

ಪ್ಯಾರಿಸ್ಸಿನಿಂದ ಹೊರಹೋಗಲು ನಿರಾಕರಿಸಿದ. ಅವನು ವಿಜ್ಞಾನಿಯಾಗಿದ್ದ, ನಿಷ್ಠಾವಂತ ಕಮ್ಯುನಿಸ್ಟ್ ಕಾರ್ಯಕರ್ತನೂ ಆಗಿದ್ದ. ಅವನ ಧೀಮಂತ ಕೆಚ್ಚಿನ ಕ್ರಿಯೆಯು ರಾಜಕೀಯ ಸೃಜನಶೀಲತೆಗೆ ಮಾದರಿ. ಸಂಶೋಧನೆಗಳಿಗೆ ಹೆಚ್ಚು ಸೌಲಭ್ಯಗಳಿರುವ ದೇಶಗಳಿಗೆ ವಲಸೆ ಹೋಗದೆ ಇಲ್ಲಿ ಸಂಶೋಧನೆಗೆ ಬೇಕಾದ ಸಂರಚನೆ ಮತ್ತು ವಾತಾವರಣ ನಿರ್ಮಿಸುವ ಕಷ್ಟದ ಸವಾಲನ್ನು ಸ್ವೀಕರಿಸುವುದು ನಮ್ಮ ವಿಜ್ಞಾನಿಗಳ ಸೃಜನಶೀಲತೆಗೆ ಒಂದು ಲಿಟ್ಮಸ್ ಪ್ರಯೋಗವಾಗುತ್ತದೆ. ಅಂಥವರಿದ್ದಾರೆಂಬುದು ಹೆಮ್ಮೆಯ ವಿಷಯ.

೧೯೫೦–೬೦ರ ದಶಕಗಳಲ್ಲಿ ಭಾರತವು ಅಂತರರಾಷ್ಟ್ರೀಯ ರಾಜಕೀಯ ವಿದ್ಯಮಾನಗಳಿಗೆ ಸ್ಪಂದಿಸುವಾಗ ಅಲಿಪ್ತ ನೀತಿಯನ್ನು ಆವಿಷ್ಕರಿಸಿತು. ಅದನ್ನು ಹೇರಳವಾಗಿ ಮೂದಲಿಸಿ ವಿರೋಧಿಸುವವರು ನಮ್ಮ ದೇಶದಲ್ಲಿದ್ದರು ಮತ್ತು ಈಗಲೂ ಆ ನೀತಿಯನ್ನು ನೆನೆಸಿಕೊಂಡು ಲೇವಡಿ ಮಾಡುವವರಿದ್ದಾರೆ. ವಿಶ್ವದ ಎರಡು ವಿರೋಧಿ ಬಣಗಳಾಗಿ ವಿಂಗಡಿಸಲ್ಪಟ್ಟಿದ್ದ ಸಮಯದಲ್ಲಿ ಯಾವುದೋ ಒಂದು ಬಣಕ್ಕೆ ತಗುಲಿಹಾಕಿಕೊಳ್ಳದೆ ಸ್ವತಂತ್ರವಾಗಿ ಉಳಿಯಲು ಇದ್ದ ಏಕೈಕ ಮಾರ್ಗ ಅಲಿಪ್ತ ನೀತಿಯ ಅನುಸರಣೆಯೇ ಆಗಿತ್ತು. ಈಚಿನ ವರ್ಷಗಳಲ್ಲಿ ಒಂದಿಬ್ಬರು ಅಮೆರಿಕಾ ಅಧ್ಯಕ್ಷರು ತಮ್ಮ ಗಡುಸಾದ ಅಸಂಬದ್ಧ ನೀತಿಯನ್ನು ಬಹಿರಂಗವಾಗಿ ಪ್ರಕಟಿಸಿದ್ದಾರೆ : "ನೀನು ನನ್ನೊಂದಿಗಿರು, ಇಲ್ಲವಾದರೆ ನನ್ನ ಶತ್ರುಪಾಳೆಯದವನೆಂದು ನಿನ್ನನ್ನು ಗುರುತಿಸುತ್ತೇನೆ." ಅಂದರೆ ಮೂರನೆಯ ಪರ್ಯಾಯವೇನೂ ಇಲ್ಲ. ಅಮೆರಿಕಾದ ನಿಲುವಿನಂತೆ ಇರಾಕಿನಲ್ಲಿ ಆ ದೇಶವು ನಡೆಸಿದ ಮಾರಣಹೋಮಕ್ಕೆ ಬೆಂಬಲ ನೀಡಬೇಕು, ಸಮರ್ಥಿಸದಿದ್ದರೆ ಆ ದೇಶದ ವಿರೋಧಿ ನೆಲೆಯಲ್ಲಿ ನಿಂತಂತೆ. ೧೯೭೦ರ ದಶಕದಲ್ಲಿ ಅಮೆರಿಕಾದ ಸಮರ್ಥನೆ ಎಂದರೆ ವಿಯೆಟ್ನಾಂ, ನಿಕರಾಗ್ವ, ಚಿಲಿ, ಗ್ರೆನೆಡಾ ಮುಂತಾದ ದೇಶಗಳ ಮೇಲಿನ ಆಕ್ರಮಣಕ್ಕೆ ಸಮರ್ಥನೆ ಎಂದಾಗುತ್ತಿತ್ತು. ಸೋವಿಯೆತ್ ಒಕ್ಕೂಟದ ನಾಯಕತ್ವದ ಬಣಕ್ಕೆ ಸೇರಿದ್ದರೂ ಏನಾದರೊಂದು ಮುಜುಗರ ಇರುತ್ತಿತ್ತು. ಅಂತಹ ದ್ವಂದ್ವ ನೆಲೆಗಳನ್ನು ಪಕ್ಕಕ್ಕೆ ಸರಿಸಿ ನಾವು ಯಾವುದನ್ನು ಸರಿ ಎಂದು ಪರಿಗಣಿಸುತ್ತೇವೋ ಅದನ್ನು ನಾವು ಬೆಂಬಲಿಸುತ್ತೇವೆ ಎಂಬ ಅತ್ಯಂತ ಸೃಜನಾತ್ಮಕ ನಿಲುವೊಂದನ್ನು ರೂಪಿಸಲಾಯಿತು. ಬಣಗಳನ್ನು ಸಮರ್ಥಿಸುವುದು ಇಲ್ಲವೇ ವಿರೋಧಿಸುವುದು ಎಂಬ ಎರಡು ನೆಲೆಗಳಾಚೆ ಋಜುಮಾರ್ಗಕ್ಕೆ ಮಾತ್ರ ಸಮರ್ಥನೆ ಎಂಬ ಹೊಸ ಪರಿಶುದ್ಧ ನೆಲೆಯೊಂದನ್ನು ಕಂಡುಕೊಂಡಿದ್ದು ನಿಜಕ್ಕೂ ಉತ್ತಮಮಟ್ಟದ ರಾಜಕೀಯ. ಅನೇಕ ರಾಷ್ಟ್ರಗಳು ಇಂತಹ ವಸ್ತುನಿಷ್ಠ ನಿಲುವು ತಾಳಲು ಅಲಿಪ್ತ ನೀತಿಯು ಸಹಾಯ ಮಾಡಿತು. ಈ ಅಲಿಪ್ತ ರಾಷ್ಟ್ರಗಳ ಐಕ್ಯತೆಯ ಮಹತ್ವ ಮತ್ತು ಜರೂರನ್ನು ಸಹ ಆಗ್ಗೆ ಗುರುತಿಸಲಾಗಿತ್ತು. ಆಗ್ಗೆ ವಿದೇಶಾಂಗ ಸಚಿವರಾಗಿದ್ದ ವಿ. ಕೆ. ಕೃಷ್ಣ ಮೆನನ್ ಅದನ್ನು ಬಹುಚೆನ್ನಾಗಿ ನಿರೂಪಿಸಿದ್ದರು: ನಾವೆಲ್ಲ ಜೊತೆಗೂಡಿ ಇರಬೇಕು, ಇಲ್ಲವಾದರೆ ಪ್ರತ್ಯೇಕವಾಗಿ ಒಬ್ಬೊಬ್ಬರನ್ನೂ ಬಡಿದುಹಾಕಲಾಗುತ್ತದೆ (We should hang together or else we shall be hanged separately). ಯಾವುದೇ ಪ್ರಾಮಾಣಿಕ ರಾಜಕೀಯದ ಶ್ರೇಷ್ಠತೆ ಇರುವುದು ಪ್ರತಿಯೊಂದು ಘಟನೆಯನ್ನೂ ಒಳಿತು ಇಲ್ಲವೇ ಹೊಲ್ಲತು ಎಂಬ ನೆಲೆಯಲ್ಲಿ ತೀರ್ಮಾನಿಸುವುದು. ಅದನ್ನು ಸ್ಥಳೀಯ ನೆಲೆಯಲ್ಲಿ ಜನಪರ ಮತ್ತು ಜನವಿರೋಧಿ ಎಂದು ವಿಂಗಡಿಸಬಹುದು. ನಿಷ್ಠಾವಂತ ರಾಜಕಾರಣಕ್ಕೆ ಈ ಸೂತ್ರವು ಅತ್ಯಂತ ಸೃಜನಶೀಲವಾದ್ದು. ಇಂತಹ ಶ್ರೇಷ್ಠ ಮತ್ತು ಮಾನವೀಯ ನೆಲೆಯಿಂದ ನಮ್ಮ ದೇಶವು ದೂರ ಸರಿದಿರುವುದು ಅನಪೇಕ್ಷಣೀಯ. ಅದರ ಕೆಟ್ಟ ಮತ್ತು ಹಿಂಸಾತ್ಮಕ ಪರಿಣಾಮಗಳು ಅನುಭವಕ್ಕೆ ಬರುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಸೃಜನಶೀಲವಾದ್ದು ಮೂಲತಃ ನ್ಯಾಯಪರವಾಗಿಯೂ ಇರಬೇಕು. ಅಂತೆಯೇ ನ್ಯಾಯಪರವಾದ್ದು ಹೊಮ್ಮುವುದು ಸೃಜನಶೀಲತೆಯ ನೆಲೆಯಲ್ಲಿ.

"ಇತಿಹಾಸವು ನನ್ನನ್ನು ನಿರಪರಾಧಿಯೆಂದು ಘೋಷಿಸುತ್ತದೆ" ಎಂಬ ಫಿಡೆಲ್ ಕ್ಯಾಸ್ಟ್ರೋನ ಜಗತ್ಪ್ರಸಿದ್ಧ ಹೇಳಿಕೆ ೧೯೫೯ರ ಕ್ಯೂಬ ಕ್ರಾಂತಿಯ ನಾಲ್ಕು ವರ್ಷಗಳ ಮುಂಚಿನದು. ಆಸ್ಪತ್ರೆಯೊಂದರಲ್ಲಿ ಅವನು ಅದನ್ನು ಹೇಳಬೇಕಾಗಿ ಬಂತೆಂಬುದು ಬಹುಶಃ ಅವನ ಧೀರೋದಾತ್ತ ವ್ಯಕ್ತಿತ್ವದ ಸೂಚಕ. ಮೊಂಕಾಡಾದ ಭವ್ಯಸೌಧಕ್ಕೆ ಲಗ್ಗೆಯಿಟ್ಟು ಅಲ್ಲಿ ಶೇಖರಿಸಿಡಲಾಗಿದ್ದ ಆಯುಧಗಳನ್ನು ವಶಪಡಿಸಿಕೊಳ್ಳಲು ಗ್ರಾನ್ಮಾ ಎಂಬ ಪುಟ್ಟ ಹಡಗಿನಲ್ಲಿ ಮೆಕ್ಸಿಕೋದಿಂದ ಕ್ಯೂಬಾಕ್ಕೆ ಪ್ರಯಾಣಿಸಿದ್ದ ತುಡುಕು ಬುದ್ಧಿಯವರು ಎಂದು ಕ್ಯಾಸ್ಟ್ರೋ ಮತ್ತು ಅವನ ಸಂಗಡಿಗರನ್ನು ಛೇಡಿಸುವುದುಂಟು. ಗ್ರಾನ್ಮಾ ಒಂದು ಹಡಗಲ್ಲ. ಅದು ಕೇವಲ ಒಂದು ದೋಣಿ. ಭ್ರಷ್ಟ ಮತ್ತು ಕ್ರೂರ ಸರ್ವಾಧಿಕಾರಿಯಾಗಿದ್ದ ಬಟಿಸ್ಟಾನನ್ನು ಕ್ಯೂಬಾದಿಂದ ಹೊರಗಟ್ಟಲು ಅದರಲ್ಲಿ ಕ್ಯಾಸ್ಟ್ರೋ ಮತ್ತು ಅವನ ಸಂಗಾತಿಗಳು ಪ್ರಯಾಣಿಸಿ ಬಂದಿದ್ದರು ಮತ್ತು ವಿಫಲರಾದರು. ಕೆಲವು ಸಂಗಾತಿಗಳು ಮೃತಪಟ್ಟರು. ಇತರರು ಕಬ್ಬಿನ ಗದ್ದೆಗಳಲ್ಲಿ ಅವಿತುಕೊಂಡು ಪಾರಾದರು ಮತ್ತು ಕೆಲವರು ಬಂಧಿಸಲ್ಪಟ್ಟರು. 'ಅಪಾಯಕಾರಿ ಕ್ರಾಂತಿಕಾರಿ' ಎಂದು ಯಾರಿಗೂ ತಿಳಿಯದಂತೆ ಆಸ್ಪತ್ರೆಯಲ್ಲಿ ವಿಚಾರಣೆಗೆ ಗುರಿಪಡಿಸಿದಾಗ ಕ್ಯಾಸ್ಟ್ರೋ ನೀಡಿದ ದೀರ್ಘ ಹೇಳಿಕೆಗೆ ಕೊಡಲಾಗಿರುವ ಶೀರ್ಷಿಕೆ "ಇತಿಹಾಸವು ನನ್ನನ್ನು ನಿರಪರಾಧಿಯೆಂದು ಘೋಷಿಸುತ್ತದೆ" ಎಂಬುದು. ಒಂದು ತುಣುಕು ಚೀಟಿಯ ಟಿಪ್ಪಣಿಯೂ ಇಲ್ಲದೆ ಅದ್ಭುತವಾದ ಚಾರಿತ್ರಿಕ ಹೇಳಿಕೆ ನೀಡಿದ ಧೀಮಂತ ನಾಯಕ ಕ್ಯಾಸ್ಟ್ರೋ. ನೆಲ್ಸನ್ ಮಂಡೇಲ ಮತ್ತು ಭಗತ್ ಸಿಂಗ್ ಸಹ ಅಷ್ಟೇ ಅದ್ಭುತವಾದ ಹೇಳಿಕೆಗಳನ್ನು ನ್ಯಾಯಾಲಯಗಳಲ್ಲಿ ನೀಡಿದ್ದರು. ಆದರೆ ಅವು



**ನೆಲ್ಸನ್ ಮಂಡೇಲ**



**ಫಿಡೆಲ್ ಕ್ಯಾಸ್ಟ್ರೋ**



**ಭಗತ್ ಸಿಂಗ್**

ಮೊದಲೇ ಸಿದ್ಧಪಡಿಸಲಾಗಿದ್ದ ಹೇಳಿಕೆಗಳು. ತನ್ನ ದೇಶವನ್ನು ಎಷ್ಟು ಸುಲಿಗೆ ಮಾಡಲಾಗಿದೆ, ದೇಶದ ಜನರನ್ನು ಹೇಗೆ ಹಿಂಸಿಸಲಾಗಿದೆ, ಅಂತಹ ದುಷ್ಟ ಅಧಿಕಾರವನ್ನು ಏಕೆ ಕಿತ್ತೊಗೆಯಬೇಕು, ಎಂಬುದನ್ನು ಅದೇನು ಘನವಾದ ಭಾಷೆಯಲ್ಲಿ ಕ್ಯಾಸ್ಟ್ರೋ ಪ್ರತಿಪಾದಿಸಿದ್ದಾನೆ! ಜನರ ದನಿ ಎಂದರೆ ಅದು. ಅವನ ರಾಜಕೀಯ ಹೋರಾಟವು ಕೇವಲ ದೇಶದ ವಿಮೋಚನೆಗಾಗಿ ನಡೆದ ಹೋರಾಟವಲ್ಲ. "ಬೇರೊಂದು ವಿಶ್ವ ಸಾಧ್ಯ, ನಾವದನ್ನು ಮಾಡಿ ತೋರಿಸುತ್ತೇವೆ" ಎಂಬ ಕೆಚ್ಚಿನ ಅಸಾಮಾನ್ಯ ಹೋರಾಟ ಅದು. ಒಬ್ಬ ವ್ಯಕ್ತಿಯು ಇಡೀ ದೇಶದ ಶಕ್ತಿಯ ಪ್ರತೀಕವಾಗುವಂತಹ ಸೃಜನಶೀಲತೆಯನ್ನು ಆ ಹೋರಾಟದಲ್ಲಿ ಕಾಣುತ್ತೇವೆ. ಚೆ ಗೆವಾರಾನಂತಹ ನಿಸ್ವಾರ್ಥಿಗಳು ಅಂತಹ ಸೃಜನಶೀಲತೆಯ ಸುಂದರ ಮುಖಗಳಾಗುತ್ತಾರೆ. ನಮಗೆ ಶ್ರೇಷ್ಠ ರಾಜಕೀಯದ ಬೆಳಕು ಬೇಕಾದರೆ ಅಂಥವರ ಸೃಜನಶಕ್ತಿಯನ್ನು ಸ್ಮರಿಸಬೇಕು. ಅದರಿಂದ ನಮ್ಮ ಒಂದೆರಡು ಮೋಂಬತ್ತಿಗಳನ್ನು ಹೊತ್ತಿಸಿಕೊಳ್ಳಬೇಕು. ನೆಲ್ಸನ್ ಮಂಡೇಲ ಮತ್ತು ಅವನ ಸಂಗಡಿಗರ ಅಸಾಧ್ಯವಾದ ಹೋರಾಟದ ವಿವರಣೆ ತೀರಾ ಅನಗತ್ಯ. ಅದು ಜಗಜ್ಜನಿತವಾಗಿದೆ. ತನ್ನ ಹೋರಾಟಕ್ಕೆ ಪ್ರೇರಣೆ ನೀಡಿದ ನೂರಾರು ಸಂಗತಿಗಳನ್ನು ದಾಖಲಿಸಿ ಮಂಡೇಲ ನ್ಯಾಯಾಲಯದಲ್ಲಿ ಹೇಳಿದ: ಈ ಆದರ್ಶಗಳ ಸಾಫಲ್ಯಕ್ಕಾಗಿ ನಾನು ಜೀವಿಸಿದ್ದೇನೆ. ಅಗತ್ಯವಿದ್ದರೆ ಅದಕ್ಕಾಗಿ ಸಾಯಲು ಸಹ ನಾನು ಸಿದ್ಧ, ಎಂದು. ಸಮಕಾಲೀನ ಜಾಗತಿಕ ಇತಿಹಾಸದಲ್ಲಿ ಯಾರಾದರೂ ಕಾರ್ಪೊರೇಟ್ ಧಣಿ ಇಂತಹ ಮಾತುಗಳನ್ನು ಯೋಚಿಸಿಯಾನೆ! ಹಾಗೆ ಹೇಳುವ ಚಾರಿತ್ರ್ಯ ಎಂದೂ ಕಾರ್ಪೊರೇಟ್ ಪರತಂತ್ರಜೀವಿಗಳಿಗೆ ಸಿದ್ಧಿಸುವುದಿಲ್ಲ. ಅಗೆದು, ಬಗೆದು, ತುಂಬಿಕೊಂಡು ಓಡಿಹೋಗುವ ಹೇಡಿಗಳಿಗೆ ಸೃಜನಶೀಲತೆಯ ಗಂಧ ಎಲ್ಲಿಂದ ಬಂದೀತು! ದೇಶದೊಡನೆ ಮತ್ತು ದೇಶದ ಜನತೆಯೊಡನೆ ಸಾಯುಜ್ಯವನ್ನು ಪೂರ್ಣ ಪ್ರಮಾಣದಲ್ಲಿ ಅನುಭವಿಸಲು, ಅಂತಹ ತುಡಿತವನ್ನು ಇತರರಿಗೆ ವರ್ಗಾಯಿಸಲು, ಭಗತ್ ಸಿಂಗ್‌ನಂಥವನ ಛಾತಿ ಬೇಕು. ನಮ್ಮ ಪುಡಿಗಾಸು ರಾಜಕಾರಣಿಗಳ ಪ್ರಜ್ಞೆಯು ಅದರಿಂದ ಅನೇಕ ಗಾವುದಗಳ ದೂರದ್ದು. ಅವರ ರಾಜಕೀಯದಲ್ಲಿ ಸೃಜನಶೀಲತೆ ಇಲ್ಲ. ವಿಧ್ವಂಸಕಾರಿ ಚಟುವಟಿಕೆಗಳಿಗೆ ಮಾತ್ರವೇ ಅವರ ಕಾರ್ಯಕ್ಷೇತ್ರವು ಮೀಸಲಾಗಿರುತ್ತದೆ. ಭಗತ್ ಸಿಂಗ್ ಸೆಂಟ್ರಲ್ ಅಸೆಂಬ್ಲಿಯಲ್ಲಿ ಬಾಂಬು ಸಿಡಿಸಲು ಆಯ್ದುಕೊಂಡ ದಿನ ದೇಶದ ದುಡಿಯುವ ಜನರಿಗೆ ಇನ್ನೂ ಘೋರವಾದ ಕೈಕೋಳ ತೊಡಿಸಲು ಬ್ರಿಟಿಷ್ ಸರ್ಕಾರವು ಹೊಸ ದಿಬ್ಬಂಧನಗಳನ್ನು ಹೇರಲು ಹೊರಟಿತ್ತು, ಔದ್ಯಮಿಕ ಕ್ಷೇತ್ರದ ಕೆಲಸಗಾರರಿಗೆ ಇನ್ನೂ ಹೆಚ್ಚಿನ ಕಿರುಕುಳ ನೀಡುವಂತಹ ಶಾಸನವನ್ನು ಅಂಗೀಕರಿಸಲು ಹೊರಟಿತ್ತು. ಜಾಗತೀಕರಣದ ಹಿನ್ನೆಲೆಯಲ್ಲಿ ವಿಶ್ವ ವಾಣಿಜ್ಯ ಸಂಸ್ಥೆಯೊಡನೆ ಒಪ್ಪಂದ ಮಾಡಿಕೊಂಡು ರೈತಾಪಿ ಜನರನ್ನು ನೇಣಿಗೆ ನೂಕುವವರು, ಮೇಕ್ ಇನ್ ಇಂಡಿಯಾ ಎಂದು



ಮಹಾತ್ಮ ಗಾಂಧೀಜಿ

ಅಬ್ಬರಿಸುತ್ತಾ ವಿದೇಶಿ ಬಂಡವಾಳಕ್ಕೆ ಶರಣಾಗುವವರು ಸಹ ಮಾಡುವುದು ಅದನ್ನೇ. ಭಗತ್ ಸಿಂಗ್‌ನ ರಾಜಕೀಯ ಸೃಜನಶೀಲತೆಯ ನೆಲೆ ಇಡೀ ವ್ಯವಸ್ಥೆಯನ್ನು ಗುಣಾತ್ಮಕವಾಗಿ ಪರಿವರ್ತಿಸುವಂಥದ್ದು.

ಭಗತ್ ಸಿಂಗ್‌ನದು ಹಿಂಸಾಮಾರ್ಗವೆಂಬ ಧೋರಣೆಯನ್ನು ಮುಂದುಮಾಡಿ ಗಾಂಧೀಜಿ ಅಂದಿನ ವೈಸರಾಯ್ ಇರ್ವಿನ್‌ನೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಭಗತ್ ಸಿಂಗ್‌ನನ್ನು ಗಲ್ಲಿಗೇರಿಸಕೂಡದೆಂಬ ಷರತ್ತನ್ನು ಸೇರಿಸಲಿಲ್ಲ. ಆ ಕಳಂಕವು ಅವರಿಗೆ ಸದಾ ಅಂಟಿಕೊಂಡೇ ಇರುತ್ತದೆ. ಆದರೆ ಯಃಕಶ್ಚಿತ್ ಮಾರಾಟದ ಸರಕಾದ ಉಪ್ಪನ್ನು ದೇಶದ ಬಿಡುಗಡೆಗೆ ಒಂದು ಅಮೋಘ ಸಂಕೇತವನ್ನಾಗಿಸಿ ವ್ಯಾಪಕ ಹೋರಾಟವನ್ನು ರೂಪಿಸಿದ ಗಾಂಧೀಜಿ ಇತಿಹಾಸಪುರುಷರಾಗಿ ಚಿರಕಾಲ ಕಂಗೊಳಿಸುತ್ತಾರೆ. ಒಂದು ಉಪ್ಪಿನ ಹರಳನ್ನು ಪರ್ವತೋಪಾದಿಯಲ್ಲಿರುವ ಮಹಾನ್ ಆಯುಧವನ್ನಾಗಿ ಮಾಡುವುದು ಅಸಾಧಾರಣ ರಾಜಕೀಯ. ನಿಜವಾದ ಮತ್ತು ಆಳವಾದ ಸೃಜನಶೀಲತೆ ಇರುವುದು ಇಂತಹ ದೃಷ್ಟಿಯಲ್ಲಿ ಮತ್ತು ಆ ದೃಷ್ಟಿಯನ್ನು ಸಾಕಾರಗೊಳಿಸುವುದರಲ್ಲಿ. ಇಡೀ ಜನತೆಯನ್ನು ಒಳಗೊಳ್ಳುವಂತೆ ಮಾಡಲು ಎಲ್ಲಿಲ್ಲದ ಶಕ್ತಿಯನ್ನು ಉಪ್ಪಿಗೆ ತುಂಬಲು ಸಾಧ್ಯವೆಂದು ಬ್ರಿಟಿಷರು ಊಹಿಸಿಯೂ ಇರಲಿಲ್ಲ. ಅದು ಗಾಂಧೀಜಿಯ ಚಮತ್ಕಾರವಲ್ಲ; ಅದು ಜನತೆಯೊಡನೆ ಪೂರ್ಣ ಸಮೀಕರಣದ ಉಚ್ಚ ಮಾದರಿ. ಬಿತ್ತನೆಯ ಬೀಜವನ್ನೋ, ಉಳುವ ನೇಗಿಲನ್ನೋ, ಪುಷ್ಟಿ ನೀಡುವ ನಾಟಿ ಗೊಬ್ಬರವನ್ನೋ ಒಂದು ಅಗಾಧ ಸಂಕೇತವನ್ನಾಗಿಸಿ ರೈತರ ಆತ್ಮಹತ್ಯೆಯನ್ನು ಇಲ್ಲವಾಗಿಸುವ ರಾಜಕೀಯ ಸೃಜನಶೀಲತೆ ನಮಗಿಂದು ಬೇಕಾಗಿದೆ.

೧೯೭೦ರ ದಶಕದ ಆದಿಯಲ್ಲಿ ನಮ್ಮ ದೇಶವು ಗುಜರಾತ್, ಬಿಹಾರ ಮುಂತಾದ ರಾಜ್ಯಗಳಲ್ಲಿ ನವ ನಿರ್ಮಾಣ ಸಮಿತಿಗಳನ್ನು ಕಂಡಿತು. ಶಿಕ್ಷಣದ ಕ್ಷೇತ್ರವು ಔನ್ನತ್ಯವನ್ನು ಕಂಡುಕೊಳ್ಳುತ್ತದೆ, ಜನಸಾಮಾನ್ಯರ ಬಡತನದ ಬೇಗೆಯು ಇನ್ನಿಲ್ಲವಾಗುತ್ತದೆ, ಭ್ರಷ್ಟಾಚಾರದ ಪಿಡುಗನ್ನು ಪೂರ್ತಿಯಾಗಿ ನಾಶಗೊಳಿಸಲಾಗುತ್ತದೆ ಎಂಬಂತಹ ಮಹದಾಶಯಗಳು ವ್ಯಕ್ತವಾದವು, ಆಂದೋಲನಗಳು ಜರುಗಿದವು. ಮಾನ್ಯ ಜಯಪ್ರಕಾಶ ನಾರಾಯಣರ ನೇತೃತ್ವದಲ್ಲಿ ಸಂಪೂರ್ಣ ಕ್ರಾಂತಿಯ ಗುರಿಯನ್ನು ಸಾಧಿಸಿಯೇ ತೀರುತ್ತೇವೆಂಬ ಹೋರಾಟಕ್ಕೆ ಜನತೆಯನ್ನು ಸಜ್ಜುಗೊಳಿಸುವ ಕ್ರಿಯೆ ನಡೆದಿತ್ತು. ಸಮಾಜದ ಚಲನಶೀಲತೆಯು ಗುಣಾತ್ಮಕ ಬದಲಾವಣೆಗೆ ರಂಗವನ್ನು ಸಿದ್ಧಗೊಳಿಸುತ್ತಿದೆಯೆಂಬ ಭಾವನೆ ದಟ್ಟವಾಗಿತ್ತು. ಆದರೆ ಸಂಪೂರ್ಣ ಕ್ರಾಂತಿಯ ಬದಲಾಗಿ ದೇಶವು ತುರ್ತು ಪರಿಸ್ಥಿತಿಯನ್ನು ಅನುಭವಿಸಿತು. ತುರ್ತು ಪರಿಸ್ಥಿತಿಯನ್ನು ನೆನೆಸಿಕೊಳ್ಳುವುದು ಮುಂದುವರಿದಿದೆ, ಆದರೆ ಸಂಪೂರ್ಣ ಕ್ರಾಂತಿಯ ಮಾತೇ ಕೇಳಿಬರುತ್ತಿಲ್ಲ. ಬೇರೇನೇ ದಕ್ಕಿರಲಿ, ಬಿಡಲಿ, ಸಂಪೂರ್ಣ ಕ್ರಾಂತಿಯ ಭಾರಿ ಫಲಾನುಭವಿಗಳೆಂದರೆ ಮತೀಯ ಶಕ್ತಿಗಳು. ಸಂಪೂರ್ಣ ಕ್ರಾಂತಿಯು ಈ ಶಕ್ತಿಗಳಿಗೆ ದೇಶದ ಮೂಲೆಮೂಲೆಗಳಲ್ಲಿ ನೆಲೆ ಕಲ್ಪಿಸಿಕೊಟ್ಟಿತು. ಈಗದು ಹೆಮ್ಮರವಾಗಿ ಬೆಳೆದುನಿಂತಿದೆ. ಅಂದರೆ, ಸಂಪೂರ್ಣ ಕ್ರಾಂತಿಯು ಎಲ್ಲೋ ದಾರಿ ತಪ್ಪಿತು, ಅದರ ರಾಜಕೀಯದಲ್ಲಿ ಸೃಜನಶೀಲತೆಯ ಫಲವತ್ತತೆ ಇರಲಿಲ್ಲ. ಅಂದು ಕಮರಿಹೋದ ಪಂಜನ್ನು ಮತ್ತೆ ಹೊತ್ತಿಸಿ ಎತ್ತಿಹಿಡಿಯಲಾಗಿಲ್ಲ. ಭಾವೋದ್ವೇಗ, ಗುಟ್ಟಿನ ರಾಜಕೀಯ ಹುನ್ನಾರ, ಮಾತುಗಳ ಮಳೆ, ಹಣ್ಣು ಮಡಿಲಿಗೆ ಬಿತ್ತೆಂಬ ಭ್ರಾಂತಿ, ಇಂಥವೆಲ್ಲಾ ಸೃಜನಶೀಲತೆಯ ಲಕ್ಷಣಗಳಲ್ಲ. ಬ್ರಾಡ್‌ಮನ್ ಕ್ಲಾಸ್‌ಗೂ ಇದಕ್ಕೂ ಅಜಗಜಾಂತರವಾದ ಕಂದಕವಿದೆ. ನೈಜವಾದ ಸೃಜನಶೀಲತೆಯು ಆರ್ಥಿಕತೆಯ ವಿಶ್ಲೇಷಣೆಯ ಬೆನ್ನಿನಲ್ಲಿ ಬರುತ್ತದೆ. ಗಾಂಧೀಜಿಯ ಚರಕಾ, ಭಗತ್ ಸಿಂಗ್‌ನ ಹಿಂದುಸ್ತಾನ್ ಸಮಾಜವಾದಿ ಗಣರಾಜ್ಯ ಸಂಘಟನೆ, ಬ್ರಿಟಿಷರ ಸೇವೆಯಲ್ಲಿದ್ದ ಭಾರತೀಯ ನೌಕಾದಳದ ಸಂಘರ್ಷ, ಚಿತ್ತಗಾಂಗ್ ಆಯುಧ ಸಂಗ್ರಹಾಲಯಕ್ಕೆ ಸೂರ್ಯಾಸೇನ್ ಮುಂತಾದವರ ದಾಳಿ, ಭಾರತವನ್ನು ಬಿಟ್ಟು ತೊಲಗಿ ಎಂಬ ಚಳುವಳಿಯಲ್ಲಿ ಅರುಣಾ ಅಸಫ್ ಆಲಿಯಂಥವರ ಪಾತ್ರ, ಸೋಲಾಪುರದ ಗಿರಣಿ ಕಾರ್ಮಿಕರು ನಗರವನ್ನು ಸ್ವಾಧೀನಪಡಿಸಿಕೊಂಡಿದ್ದು, ಇಂಥವೆಲ್ಲಾ ರಾಜಕೀಯ ಸೃಜನಶೀಲತೆಗೆ ವಿಭಿನ್ನ ಉದಾಹರಣೆಗಳು. ಪ್ರಸ್ತುತ ಸನ್ನಿವೇಶದಲ್ಲಿ ರಾಜಕೀಯ ಸೃಜನಶೀಲತೆಯು ಗುಣಾತ್ಮಕ ಪರಿವರ್ತನೆಗೆ ಸಾಧನವಾಗಲು ಯಾವ ಸ್ವರೂಪ ಧರಿಸಬೇಕೆಂಬುದನ್ನು ತರ್ಕಬದ್ಧವಾಗಿ ತಿಳಿದು ಕ್ರಿಯಾಶೀಲರಾಗುವ ಅನಿವಾರ್ಯತೆ ನಮ್ಮೆದುರಿಗಿದೆ.

**ಡಾ|| ಜಿ. ರಾಮಕೃಷ್ಣ**
3-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಹಿಳೆಯರ ಔದ್ಯೋಗಿಕ ಆರೋಗ್ಯ ಸಮಸ್ಯೆಗಳು

ಡಾ॥ ನಾ. ಸೋಮೇಶ್ವರ

**ಕಾ**ರ್ಖಾನೆ ಎಂದರೆ ಯಾವುದಾದರೂ ಒಂದು ವಸ್ತುವನ್ನು ಉತ್ಪಾದಿಸುವ ಸ್ಥಳ. ಒಂದು ಉತ್ಪಾದನಾ ಸ್ಥಳವನ್ನು 'ಕಾರ್ಖಾನೆ' ಎಂದು ಕರೆಯಬೇಕಾದರೆ ಅಲ್ಲಿ ಕನಿಷ್ಠ ಎಷ್ಟು ಜನರು ಕೆಲಸವನ್ನು ಮಾಡುತ್ತಿರಬೇಕು? ೧೦ ಕಾರ್ಮಿಕರು ಅಥವಾ ಹೆಚ್ಚಿನ ಜನರು ವಿದ್ಯುತ್ತಿನ ನೆರವಿನಿಂದ ಉತ್ಪಾದನೆಯನ್ನು ಮಾಡುತ್ತಿದ್ದರೆ ಅದು ಕಾರ್ಖಾನೆಯೆನಿಸಿಕೊಳ್ಳುತ್ತದೆ. ಹಾಗೆಯೇ ವಿದ್ಯುತ್ತಿನ ನೆರವಿಲ್ಲದೆ ೨೦ ಕಾರ್ಮಿಕರು ಅಥವಾ ಹೆಚ್ಚಿನವರು ಉತ್ಪಾದನೆಯಲ್ಲಿ ತೊಡಗಿದ್ದರೆ, ಆ ಸ್ಥಳವೂ ಸಹ ಕಾರ್ಖಾನೆ ಎಂದೆನಿಸಿಕೊಳ್ಳುತ್ತದೆ.

ಕಾರ್ಖಾನೆಗಳಲ್ಲಿ ನಾನಾ ರೀತಿಯ ವಸ್ತುಗಳನ್ನು ಉತ್ಪಾದಿಸುವರು. ಯಾವುದೇ ವಸ್ತುವನ್ನು ಉತ್ಪಾದಿಸಬೇಕಾದರೆ ಅದಕ್ಕೆ ಕಚ್ಚಾ ವಸ್ತುಗಳು ಬೇಕಾಗುತ್ತವೆ. ಕಚ್ಚಾ ವಸ್ತುಗಳನ್ನು ಬಳಸಿಕೊಂಡು ನಿರ್ದಿಷ್ಟ ವಿಧಿ ವಿಧಾನಗಳ ಮೂಲಕ ವಸ್ತುವನ್ನು ಉತ್ಪಾದಿಸಬೇಕಾಗುತ್ತದೆ. ಉತ್ಪಾದನೆಯಾದ ವಸ್ತುವನ್ನು ನಿರ್ದಿಷ್ಟ ರೀತಿಯಲ್ಲಿ 'ಪ್ಯಾಕ್' ಮಾಡಿ ಅದನ್ನು ಗ್ರಾಹಕರಿಗೆ ತಲುಪಿಸಬೇಕಾಗುತ್ತದೆ. ಹೀಗೆ ಯಾವುದೇ ಕಾರ್ಖಾನೆಯಲ್ಲಿ ಉತ್ಪಾದನಾ ಚಟುವಟಿಕೆಯು ಈ ಮೂರು ಘಟ್ಟಗಳನ್ನು ಒಳಗೊಂಡಿರುತ್ತದೆ. ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗುವ ಕಾರ್ಮಿಕರು ಈ ಮೂರೂ ಘಟ್ಟಗಳಲ್ಲಿ ಅನಾರೋಗ್ಯಕ್ಕೆ ತುತ್ತಾಗಬಹುದು. ಅವರ ಅನಾರೋಗ್ಯಕ್ಕೆ ಉತ್ಪಾದನೆಯಲ್ಲಿ ಬಳಸಿದ ಕಚ್ಚಾ ವಸ್ತುಗಳು ಕಾರಣವಾಗಬಹುದು. ಉತ್ಪಾದನಾ ಕಾರ್ಯವಿಧಾನ ಕಾರಣವಾಗಬಹುದು ಅಥವಾ ಪ್ಯಾಕಿಂಗ್ ಕೆಲಸದಿಂದ ಆರೋಗ್ಯ ಹದಗೆಡುತ್ತಿರಬಹುದು. ಈ ಉತ್ಪಾದನಾ ಸಂಬಂಧಿತ ಅನಾರೋಗ್ಯವು ತತ್‌ಕ್ಷಣ ಕಾಣಿಸಿಕೊಳ್ಳಬಹುದು/ವಾರಗಳಾದ ಮೇಲೆ/ತಿಂಗಳುಗಳಾದ ಮೇಲೆ ಇಲ್ಲವೇ ವರ್ಷಗಳಾದ ಮೇಲೆ ಕಾಣಿಸಿಕೊಳ್ಳಬಹುದು. ಇವೆಲ್ಲವನ್ನೂ ನಾವು 'ಔದ್ಯೋಗಿಕ ರೋಗಗಳು' ಎಂದು ಕರೆಯುತ್ತೇವೆ.

ಔದ್ಯೋಗಿಕ ರೋಗಗಳಿಗೆ ಕಾರಣವಾಗಬಹುದಾದ ವಸ್ತುಗಳನ್ನು, ಚಟುವಟಿಕೆಗಳನ್ನು ಗುರುತಿಸಿ ಅವುಗಳನ್ನು ತಡೆಗಟ್ಟುವುದರ ಬಗ್ಗೆ, ಭಾರತ ಸರ್ಕಾರವು 'ಕಾರ್ಖಾನೆಗಳ ಕಾಯಿದೆ-೧೯೪೮' ಎನ್ನುವ ಕಾಯಿದೆಯನ್ನು ರೂಪಿಸಿದೆ. ಈ ಕಾಯಿದೆಯನ್ನು ಕರ್ನಾಟಕ ಸರ್ಕಾರವು 'ಕರ್ನಾಟಕ ಕಾರ್ಖಾನೆಗಳ ನಿಯಮಗಳು-೧೯೬೯' ಎನ್ನುವ ಹೆಸರಿನಲ್ಲಿ ರಾಜ್ಯಾದ್ಯಂತ ಅನ್ವಯಿಸುವಂತೆ ಜಾರಿಗೆ ತಂದಿದೆ. ಈ ಎರಡು ಕಾನೂನುಗಳು ವಿವಿಧ ಉತ್ಪಾದನೆಗಳಲ್ಲಿ ತೊಡಗುವ ಕಾರ್ಮಿಕರ ಆರೋಗ್ಯವು ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವ ವಿಧಿ ವಿಧಾನಗಳನ್ನು ನಿರ್ದೇಶಿಸುತ್ತವೆ. ಔದ್ಯೋಗಿಕ ಅನಾರೋಗ್ಯಗಳು ಸಂಭವಿಸದಿರಲು ಕಾರ್ಖಾನೆಗಳ ಆಡಳಿತ ವರ್ಗದವರು ತೆಗೆದುಕೊಳ್ಳಬೇಕಾದ ಕ್ರಮಗಳನ್ನು ವಿವರಿಸುತ್ತದೆ. ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಔದ್ಯೋಗಿಕ ಕಾಯಿಲೆಗಳಿಗೆ ತುತ್ತಾಗದಂತಿರಲು ಯಾವ ರೀತಿಯ ಸುರಕ್ಷಿತವಾಗಿ ಕೆಲಸ ಮಾಡಬೇಕು, ಅವರ ಕರ್ತವ್ಯಗಳೇನು ಎನ್ನುವುದನ್ನು ಹೇಳುತ್ತದೆ. ಆಯಾ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಯಾವ ಯಾವ ಔದ್ಯೋಗಿಕ ರೋಗಗಳು ಬರುವ ಸಾಧ್ಯತೆಗಳಿವೆ ಹಾಗೂ ಅವನ್ನು ಹೇಗೆ ತಡೆಗಟ್ಟಬೇಕು ಎಂಬುದರ ಬಗ್ಗೆ ಆಡಳಿತ ವರ್ಗದವರು ತಮ್ಮಲ್ಲಿ ಕೆಲಸ ಮಾಡುವ ಎಲ್ಲ ಕಾರ್ಮಿಕರಿಗೆ ಮಾಹಿತಿಯನ್ನು ನೀಡಬೇಕಾಗುತ್ತದೆ ಹಾಗೂ ಕಾರ್ಮಿಕರು ಆಡಳಿತ ವರ್ಗವು ಒದಗಿಸುವ ಸುರಕ್ಷತಾ ಕ್ರಮಗಳನ್ನು ನಿಯತವಾಗಿ ಪಾಲಿಸಬೇಕಾಗುತ್ತದೆ.

**ಪುರುಷ-ಮಹಿಳೆ**

ಕಾರ್ಖಾನೆಗಳಲ್ಲಿ ಪುರುಷರು ಕೆಲಸ ಮಾಡುವ ಹಾಗೆ ಮಹಿಳೆಯರೂ ಕೆಲಸ ಮಾಡುತ್ತಾರೆ. ಅಪಾಯಕಾರಿ ವಸ್ತುಗಳು ಇಲ್ಲವೇ ಚಟುವಟಿಕೆಗಳು ಗಂಡು-ಹೆಣ್ಣಿನ ತಾರತಮ್ಯವನ್ನು ಪರಿಗಣಿಸುವುದಿಲ್ಲ. ಅವು ಎಲ್ಲರಲ್ಲಿಯೂ ಅನಾರೋಗ್ಯವನ್ನು ಉಂಟುಮಾಡುತ್ತವೆ. ಆದರೆ ಕಾರ್ಖಾನೆಯಲ್ಲಿ ಕೆಲಸ ಮಾಡುವ ಮಹಿಳೆಯರು ಕೆಲವು ರೀತಿಯ ವಿಶೇಷ ಔದ್ಯೋಗಿಕ ಅನಾರೋಗ್ಯಗಳಿಗೆ ತುತ್ತಾಗುವ ಸಾಧ್ಯತೆಯು ಹೆಚ್ಚಿರುತ್ತದೆ. ಹಾಗಾಗಿ ಅವರು ಈ ಬಗ್ಗೆ ಹೆಚ್ಚಿನ ವಿಚಾರವನ್ನು ತಿಳಿದುಕೊಳ್ಳಬೇಕು ಹಾಗೂ ನಿಗ್ರಹ ಕ್ರಮಗಳನ್ನು ಕೈಗೊಳ್ಳಬೇಕು.

ನಾನಾ ರೀತಿಯ ಕಾರ್ಖಾನೆಗಳಿವೆ. ಎಲ್ಲ ರೀತಿಯ ಕಾರ್ಖಾನೆಗಳಲ್ಲಿ ಮಹಿಳೆಯರು ಕೆಲಸ ಮಾಡುವುದಿಲ್ಲ. ಕೆಲವು ಕಾರ್ಖಾನೆಗಳಲ್ಲಿ ಪುರುಷರಿಗಿಂತ ಮಹಿಳೆಯರೇ ಅಧಿಕ ಪ್ರಮಾಣದಲ್ಲಿ ಕೆಲಸ ಮಾಡುತ್ತಾರೆ. ಉದಾಹರಣೆಗೆ ಹೇಳುವುದಾದರೆ ಉಡುಪುಗಳನ್ನು ಸಿದ್ಧಪಡಿಸುವ ಕಾರ್ಖಾನೆಗಳು (ಗಾರ್ಮೆಂಟ್ಸ್ ಇಂಡಸ್ಟ್ರಿ). ಎಲೆಕ್ಟ್ರಾನಿಕ್ ಉದ್ಯಮದಲ್ಲಿ, ಆಹಾರ ಪದಾರ್ಥಗಳ ಉದ್ಯಮದಲ್ಲಿ, ಔಷಧ ಉದ್ಯಮದಲ್ಲಿ ಮಹಿಳೆಯರು ಪುರುಷರಷ್ಟೇ ಅಥವಾ ಪುರುಷರಿಗಿಂತ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಕೆಲಸ ಮಾಡುವುದನ್ನು ನಾವು ಕಾಣಬಹುದು. ಅಸಂಘಟಿತ ಉದ್ಯಮಗಳಾದ ಕಟ್ಟಡ ನಿರ್ಮಾಣ, ಮನೆಕೆಲಸ ಮುಂತಾದ ಕೆಲಸಗಳಲ್ಲಿ



ಮಹಿಳೆಯರೇ ಅಧಿಕ ಪ್ರಮಾಣದಲ್ಲಿ ಕೆಲಸ ಮಾಡುತ್ತಾರೆ. ಮಹಿಳೆಯರು ಯಾವುದೇ ಉದ್ಯಮದಲ್ಲಿ ಕೆಲಸ ಮಾಡುತ್ತಿರಲಿ, ಅವರು ಒಂದಲ್ಲ ಒಂದು ರೀತಿಯ ಔದ್ಯೋಗಿಕ ಅನಾರೋಗ್ಯಕ್ಕೆ ತುತ್ತಾಗುವ ಸಾಧ್ಯತೆಯು ಇದ್ದೇ ಇರುತ್ತದೆ.

**ಉದ್ಯೋಗಪೂರ್ವ**

ಒಂದು ಕಾರ್ಖಾನೆಯಲ್ಲಿ ಕೆಲಸ ಮಾಡುವ ಮೊದಲು ಪ್ರತಿಯೊಬ್ಬ ಪುರುಷ ಹಾಗೂ ಮಹಿಳೆಯು ಆರೋಗ್ಯವಾಗಿರುವುದನ್ನು ಖಚಿತಪಡಿಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಉದ್ಯೋಗಪೂರ್ವ ವೈದ್ಯಕೀಯ ತಪಾಸಣೆಗಳನ್ನು ನಡೆಸುವರು. ಇದು ಕಡ್ಡಾಯ. ಒಬ್ಬ ಕಾರ್ಮಿಕನು ಯಾವ ಯಾವ ರೀತಿಯ ವೈದ್ಯಕೀಯ ತಪಾಸಣೆಗಳಿಗೆ ಒಳಗಾಗಬೇಕು ಎನ್ನುವುದನ್ನು ಆತನ/ಆಕೆಯ ಲಿಂಗ, ವಯಸ್ಸು ಹಾಗೂ ಮಾಡಲಿರುವ ಕೆಲಸದ ಅಪಾಯ ಸಂಭವತೆಯನ್ನು ಆಧರಿಸಿರುತ್ತದೆ. ಹಾಗಾಗಿ ಅವರು ಯಾವ ರೀತಿಯ ಪರೀಕ್ಷೆಗಳು ಹಾಗೂ ತಪಾಸಣೆಗಳಿಗೆ ಒಳಗಾಗಬೇಕು ಎನ್ನುವುದನ್ನು ಕಾರ್ಖಾನೆಯ ವೈದ್ಯಾಧಿಕಾರಿ ನಿರ್ಧರಿಸುವರು. ಉದಾ: ಶಬ್ದ ಹೆಚ್ಚಾಗಿರುವ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರುವವರು, ಕೆಲಸಕ್ಕೆ ಸೇರುವ ಮೊದಲೇ ತಮ್ಮ ಕಿವಿಗಳನ್ನು ಪರೀಕ್ಷಿಸುವ ಹಾಗೂ ಶ್ರವಣ ಸೂಕ್ಷ್ಮತೆ ಹಾಗೂ ವ್ಯಾಪ್ತಿಯನ್ನು ತಿಳಿಸುವ ತಪಾಸಣೆಯನ್ನು ಮಾಡಿಕೊಳ್ಳಬೇಕು. ಈ ಉದ್ಯೋಗಪೂರ್ವ ದಾಖಲೆಯು ಆ ವ್ಯಕ್ತಿಯ ಶ್ರವಣ ವ್ಯಾಪ್ತಿಯ 'ಮೂಲ ಮಾಹಿತಿ' ಎಂದೆನಿಸಿಕೊಳ್ಳುತ್ತದೆ. ಈ ಮಾಹಿತಿಯು ಬಹಳ ಮುಖ್ಯವಾದದ್ದು. ಮುಂದೆ ಆ ವ್ಯಕ್ತಿಗೆ ಏನಾದರೂ ಶ್ರವಣ ತೊಂದರೆಯಾದರೆ, ಆಗ ನಡೆಸುವ ಪರೀಕ್ಷೆಯ ಫಲಿತಾಂಶವನ್ನು ಈ ಮೂಲ ಮಾಹಿತಿಯೊಡನೆ ಹೋಲಿಸಿ ನೋಡಬೇಕಾಗುತ್ತದೆ. ಇದರಿಂದ ಶ್ರವಣ ತೊಂದರೆಗೆ ಕಾರಣವನ್ನು ಪತ್ತೆ ಹಚ್ಚಿ, ಮತ್ತಷ್ಟು ಕಿವುಡುತನವಾಗದಂತೆ ಕ್ರಮಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ.




**ನಿಯಮಿತ**

ಅಪಾಯಕಾರಿ ವಸ್ತುಗಳ ಜೊತೆಯಲ್ಲಿ ಹಾಗೂ ಅಪಾಯಕಾರಿ ಉತ್ಪಾದನಾ ಚಟುವಟಿಕೆಗಳಲ್ಲಿ ಕೆಲಸ ಮಾಡುವ ಮಹಿಳೆಯರು ಹಾಗೂ ಪುರುಷರು ನಿಯಮಿತವಾಗಿ ವೈದ್ಯಕೀಯ ತಪಾಸಣೆಗಳಿಗೆ ಒಳಗಾಗಬೇಕು. ಯಾವ ಯಾವ ರೀತಿಯ ಪರೀಕ್ಷೆಗಳಲ್ಲಿ ಮಾಡಿಸಿಕೊಳ್ಳಬೇಕು ಹಾಗೂ ಯಾವಾಗ ಮಾಡಿಸಿಕೊಳ್ಳಬೇಕು ಎಂಬುದನ್ನು ಕಾರ್ಖಾನೆಯ ವೈದ್ಯಾಧಿಕಾರಿಯು ನಿರ್ಧರಿಸುತ್ತಾರೆ. ಕೆಲವು ರೀತಿಯ ವಿಶೇಷ ಪರೀಕ್ಷೆಗಳನ್ನು ೩ ತಿಂಗಳಿಗೊಮ್ಮೆ ಅಥವಾ ೬ ತಿಂಗಳಿಗೊಮ್ಮೆ ನಡೆಸಬೇಕಾಗುತ್ತದೆ. ಸಾಮಾನ್ಯವಾಗಿ ವರ್ಷಕ್ಕೊಮ್ಮೆ ಇಡೀ ಶರೀರದ ಸಮಗ್ರ ಪರೀಕ್ಷೆಯನ್ನು ನಡೆಸುವುದು ವಾಡಿಕೆ. ಇದನ್ನು 'ವಾರ್ಷಿಕ ವೈದ್ಯಕೀಯ ತಪಾಸಣೆ' (ಆ್ಯನುವಲ್ ಮೆಡಿಕಲ್ ಎಕ್ಸಾಮಿನೇಶನ್) ಎಂದು ಕರೆಯುವರು. ಈ ಪರೀಕ್ಷೆಯಲ್ಲಿ ಏನಾದರೂ ಅನಾರೋಗ್ಯ ಕಂಡುಬಂದರೆ, ಆ ಅನಾರೋಗ್ಯವು ಅವರ ಉದ್ಯೋಗದಿಂದಲೇ ಬಂದಿದೆ ಎನ್ನುವುದು ರುಜುವಾತಾದರೆ, ಕೂಡಲೇ ಅವರಿಗೆ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ. ಅವರು ಪೂರ್ಣ ಗುಣಮುಖರಾದ ಮೇಲೆ, ಅವರಿಗೆ ಪುನರ್ವಸತಿಯನ್ನು ಒದಗಿಸಬೇಕಾಗುತ್ತದೆ. ಹಳೇ ಅಪಾಯಕಾರಿ ಕೆಲಸದಲ್ಲಿ ಮುಂದುವರಿಯದಂತೆ ನಿರ್ಬಂಧವನ್ನು ಹೇರಿ, ಸುರಕ್ಷಿತವಾದ ಹೊಸ ಕೆಲಸದಲ್ಲಿ ತೊಡಗುವಂತೆ ಹೇಳಬೇಕಾಗುತ್ತದೆ. ಈ ಬಗ್ಗೆ ಕಾರ್ಖಾನೆಯ ಆಡಳಿತ ವರ್ಗದವರು, ವೈದ್ಯಾಧಿಕಾರಿಗಳು ಹಾಗೂ ಕಾರ್ಮಿಕ ಇಲಾಖೆಯ ವೈದ್ಯರು ಒಟ್ಟಿಗೆ ವಿಚಾರಮಾಡಿ ಸೂಕ್ತ ತೀರ್ಮಾನವನ್ನು ತೆಗೆದುಕೊಳ್ಳುವರು.

**ವಿಭಜನೆ**

ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಮಹಿಳೆಯರು ಅನುಭವಿಸುವ ಔದ್ಯೋಗಿಕ ಅನಾರೋಗ್ಯವನ್ನು ಎರಡು ವಿಶಾಲ ಗುಂಪುಗಳಲ್ಲಿ ವಿಂಗಡಿಸಬಹುದು.

✶ ಮಹಿಳೆಯರ ಔದ್ಯೋಗಿಕ ದೈಹಿಕ ಅನಾರೋಗ್ಯಗಳು

✶ಮಹಿಳೆಯರ ಔದ್ಯೋಗಿಕ ಮಾನಸಿಕ ಅನಾರೋಗ್ಯಗಳು

**ಅ. ದೈಹಿಕ ಅನಾರೋಗ್ಯಗಳು**

ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಪುರುಷರು ಯಾವ ರೀತಿಯಲ್ಲಿ ದೈಹಿಕ ಔದ್ಯೋಗಿಕ ಅನಾರೋಗ್ಯಗಳಿಂದ ನರಳುವ ಸಾಧ್ಯತೆಯಿದೆಯೋ, ಅಂತಹುದೇ ಸಾಧ್ಯತೆಗಳು ಮಹಿಳೆಯರಿಗೂ ಇರುತ್ತದೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ಈಗ ಮಾಡಿಕೊಳ್ಳೋಣ.

೧. **ಅಪಘಾತಗಳು:** ಅಪಘಾತಗಳಿಗೆ ಲಿಂಗ, ವಯಸ್ಸು, ಭಾಷೆ, ಜಾತಿ, ಜನಾಂಗಗಳ ತಾರತಮ್ಯವಿರುವುದಿಲ್ಲ. ಆದರೆ ಅಪಘಾತಗಳ ಪ್ರಮಾಣವನ್ನು ಪರಿಗಣಿಸಿದಾಗ ಹೆಂಗಸರಿಗಿಂತ ಗಂಡಸರೇ ಹೆಚ್ಚು ಅಪಘಾತಗಳಿಗೆ ತುತ್ತಾಗುತ್ತಾರೆ. ಬಹುಶಃ ಇದಕ್ಕೆ ಅವರು ಮಾಡುವ ಕೆಲಸದ ನಮೂನೆಯೇ ಕಾರಣವಿರಬಹುದು. ಸಾಮಾನ್ಯವಾಗಿ ಗಂಡಸರು ಕಷ್ಟಕರವಾದ ಹಾಗೂ ಅಪಾಯಕಾರಿ ಕೆಲಸಗಳಲ್ಲಿ ಹೆಚ್ಚು ತೊಡಗುವ ಸಾಧ್ಯತೆಯಿರುತ್ತದೆ. ಹಾಗಾಗಿ ಅವರು ಮೂಳೆ ಮುರಿಯಬಹುದಾದಂತಹ ಗಂಭೀರ ಅಪಘಾತಗಳಿಗೆ ತುತ್ತಾಗುವ ಸಾಧ್ಯತೆಯಿರುತ್ತದೆ. ಕಾರ್ಖಾನೆಗಳಲ್ಲಿ ಸಾಮಾನ್ಯವಾಗಿ ಹೆಂಗಸರು ದೈಹಿಕ ಶ್ರಮ ಇಲ್ಲದ ಅಥವಾ ಕಡಿಮೆ ಇರುವ ಕೆಲಸಗಳಲ್ಲಿ ತೊಡಗುವುದು ಹೆಚ್ಚು. ಹಾಗಾಗಿ ಅವರಿಗೆ ಗಂಭೀರ ಗಾಯಗಳಾಗುವುದಿಲ್ಲ. ಸಣ್ಣಪುಟ್ಟ ಗಾಯಗಳಾಗುವ ಸಾಧ್ಯತೆಯಿರುತ್ತದೆ. ಎಲೆಕ್ಟ್ರಾನಿಕ್ ಹಾಗೂ ಔಷಧ ಉದ್ಯಮಗಳಲ್ಲಿ ಕೆಲಸ ಮಾಡುವ ಹೆಂಗಸರಿಗೆ ಹೆಚ್ಚು ಚುಚ್ಚು ಗಾಯಗಳಾಗುತ್ತವೆ. ಹೆಂಗಸರು ಯಾವುದೇ ಕೆಲಸವನ್ನು ಮಾಡುವ ಮೊದಲು, ಆ ಕೆಲಸವನ್ನು ಮಾಡುವ ಸರಿಯಾದ ವಿಧಾನವನ್ನು ಕಲಿಯಬೇಕು ಹಾಗೂ ಅಗತ್ಯ ಸುರಕ್ಷತಾ ಕ್ರಮಗಳನ್ನು ಕೈಗೊಂಡು ಕೆಲಸದಲ್ಲಿ ತೊಡಗಬೇಕು.

**೨. ಅಲರ್ಜಿ:** ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ಸಾಮಾನ್ಯ ಸಮಸ್ಯೆಗಳಲ್ಲಿ ಅಲರ್ಜಿಯು ಪ್ರಮುಖವಾದದ್ದು. ಅನೇಕ ಉದ್ಯಮಗಳಲ್ಲಿ ಕಾರ್ಮಿಕರು 'ಲ್ಯಾಟೆಕ್ಸ್' ಕೈಗವಸನ್ನು ಧರಿಸಿ ಕೆಲಸವನ್ನು ಮಾಡುವುದುಂಟು. ಲ್ಯಾಟೆಕ್ಸ್ ಕೆಲವರಲ್ಲಿ ಅಲರ್ಜಿಯನ್ನುಂಟುಮಾಡುತ್ತದೆ. ಲ್ಯಾಟೆಕ್ಸ್ ಅಲರ್ಜಿಯು ಗಂಡಸರಿಗಿಂತ ಹೆಚ್ಚು ಹೆಂಗಸರಲ್ಲಿ ಕಂಡುಬರುತ್ತದೆ. ಚರ್ಮ, ಕಣ್ಣು, ಕಿವಿ, ಮೂಗು, ಶ್ವಾಸಕೋಶಗಳ ಅಲರ್ಜಿಯು ಹೆಂಗಸರಲ್ಲಿಯೇ ಹೆಚ್ಚು. ಇಂತಹವರು ಅಲರ್ಜಿಯನ್ನು ಉಂಟುಮಾಡುವ ವಸ್ತುವಿನಿಂದ ದೂರವಿರಬೇಕಾಗುತ್ತದೆ. ಇದುವೇ ಶಾಶ್ವತ ಪರಿಹಾರ.

**೩. ಸ್ನಾಯು-ಅಸ್ಥಿ ಸಂಬಂಧಿತ ಅನಾರೋಗ್ಯಗಳು:** ಸ್ನಾಯು-ಅಸ್ಥಿ ಸಂಬಂಧಿತ ರೋಗಗಳೆಂದರೆ ಕಾರ್ಮಿಕನ ಸ್ನಾಯುಗಳು, ಮೂಳೆ ಹಾಗೂ ಕೀಲುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು. ಇವುಗಳಲ್ಲಿ ಸರ್ವಸಾಮಾನ್ಯವಾದದ್ದು ಸೊಂಟನೋವು, ಬೆನ್ನುನೋವು, ಕುತ್ತಿಗೆ ನೋವು, ಮಂಡಿನೋವು, ಮೊಣಕೈ ನೋವು ಇತ್ಯಾದಿ. ಒಂದೇ ರೀತಿಯ ಕೆಲಸವನ್ನು ಮತ್ತೆ ಮತ್ತೆ ಮಾಡುವ ಕೆಲಸಗಾರರಲ್ಲಿ ಕೆಲವು ವಿಶಿಷ್ಟ ರೀತಿಯ ಔದ್ಯೋಗಿಕ ಸ್ನಾಯು-ಅಸ್ಥಿ ಸಂಬಂಧಿತ ಅನಾರೋಗ್ಯಗಳು ಕಂಡುಬರುತ್ತವೆ. ಉದಾ: ಬಾಟಲಿಯೊಳಗೆ ಗುಳಿಗೆಗಳನ್ನು ಎಣಿಸಿ ಹಾಕುವ ಕೆಲಸ. ಈ ಕೆಲಸವನ್ನು ಮಾಡುವ ಕಾರ್ಮಿಕನು ೮ ಗಂಟೆಯ ಅವಧಿಯಲ್ಲಿ ನೂರಾರು ಬಾಟಲಿಗಳ ಒಳಗೆ ಸಾವಿರಾರು ಗುಳಿಗೆಗಳನ್ನು ತುಂಬಬೇಕಾಗುತ್ತದೆ. ಅಂದರೆ ಕೆಲಸದ ಇಡೀ ಶಿಫ್ಟ್ ಪೂರ್ಣ ಒಂದೇ ರೀತಿಯ ಕೆಲಸವನ್ನು ಪುನರಾವರ್ತಿಸಬೇಕಾಗುತ್ತದೆ. ಈ ಪುನರಾವರ್ತನೆಯಿಂದ ಕೈಬೆರಳುಗಳು ಹಾಗೂ ಮಣಿಕಟ್ಟು ಸೋಲುತ್ತವೆ. ಕೈಬೆರಳುಗಳು ಹಾಗೂ ಮಣಿಕಟ್ಟು ಸೋತಮೇಲೂ ಕೆಲಸವನ್ನು ಮುಂದುವರೆಸಿದರೆ ಮಣಿಕಟ್ಟು ಬಿಗಿದುಕೊಂಡು ವಿಪರೀತ ನೋಯಲಾರಂಭಿಸುತ್ತದೆ. ಈ ಸ್ಥಿತಿಯನ್ನು 'ಕಾರ್ಪಲ್ ಟನಲ್ ಸಿಂಡ್ರೋಮ್' ಎಂದು ಕರೆಯುವರು. ಈ ಸಮಸ್ಯೆಯು ಪೂರ್ಣ ಪ್ರಮಾಣದಲ್ಲಿ ಬಿಗಡಾಯಿಸಿದ್ದರೆ ಅದನ್ನು ಶಸ್ತ್ರಚಿಕಿತ್ಸೆಯ ಮೂಲಕ ಸರಿಪಡಿಸಬೇಕಾಗುತ್ತದೆ. ಹಾಗಾಗಿ ಈ ಸಮಸ್ಯೆಯನ್ನು ಆರಂಭದಲ್ಲಿಯೇ ಪತ್ತೆಹಚ್ಚುವುದು ಮುಖ್ಯ. ಆ ಕಾರ್ಮಿಕನನ್ನು ಈ ಪುನರಾವರ್ತನೆಯ ಕೆಲಸದಿಂದ

ಸ್ವಲ್ಪದಿನಗಳ ಕಾಲ ದೂರವಿಡುವುದು ಒಳ್ಳೆಯದು. ಮಣಿಕಟ್ಟಿಗೆ ಉತ್ತಮ ವಿಶ್ರಾಂತಿ ದೊರೆತರೆ ಅದು ಸ್ವಯಂ ಗುಣವಾಗುತ್ತದೆ. ಹೀಗೆಯೇ ಮಹಿಳೆಯರಲ್ಲಿ ಕಂಡುಬರುವ ಮತ್ತೊಂದು ಸಮಸ್ಯೆಯೆಂದರೆ 'ಟೆನ್ನಿಸ್ ಎಲ್ಬೋ'. ಮೊಣಕೈ ಊದಿಕೊಂಡು ಎಷ್ಟು ನೋಯುತ್ತದೆಯೆಂದರೆ, ಒಂದು ಲೋಟವನ್ನೂ ಸಹ ಮೇಲಕ್ಕೆತ್ತಲು ಆಗುವುದಿಲ್ಲ. ಈ ರೀತಿಯ ಉದ್ಯೋಗಜನ್ಯ 'ಎರ್ಗನಾಮಿಕ್' ಸಮಸ್ಯೆಗಳನ್ನು ಸಕಾಲದಲ್ಲಿ ಗುರುತಿಸಿದರೆ, ಅವು ಉಗ್ರವಾಗದಂತೆ ತಡೆಗಟ್ಟುವುದು ಸುಲಭವಾಗುತ್ತದೆ. ಸೊಂಟನೋವು ಪುರುಷರಿಗಿಂತ ಮಹಿಳೆಯರಲ್ಲಿ ಹೆಚ್ಚು. ಉದ್ಯೋಗ ಒತ್ತಡದ ಜೊತೆಯಲ್ಲಿ ಗರ್ಭಕೋಶದ ಸಮಸ್ಯೆ, ಮೂತ್ರಾಶಯ ಸಮಸ್ಯೆಗಳೂ ಸೇರಿಕೊಳ್ಳುವ ಕಾರಣ ಸೊಂಟನೋವು ತೀವ್ರವಾಗುತ್ತದೆ. ಬೆನ್ನುನೋವಿನ ಸಮಸ್ಯೆಯು ಗಂಡಸರಲ್ಲಿಯೇ ಅಧಿಕ. ಬಿಲ್ಲೆ ಜಾರುವಿಕೆ (ಡಿಸ್ಕ್ ಪ್ರೊಲಾಪ್ಸ್) ಹಾಗೂ ಬಿಲ್ಲೆಸಂಬಂಧಿತ ಬೆನ್ನುಮೂಳೆಯ ಸಮಸ್ಯೆಗಳು ಗಂಡಸರಲ್ಲಿಯೇ ಹೆಚ್ಚು ಕಂಡುಬರಲು ಪ್ರಮುಖ ಕಾರಣ ಅವರ ಉದ್ಯೋಗವೇ ಆಗಿರುವ ಸಾಧ್ಯತೆಯಿರುತ್ತದೆ. ಅವರು ಹೆಂಗಸರಿಗಿಂತ ಹೆಚ್ಚು ಭಾರ ಎತ್ತುವ ಕೆಲಸಗಳಲ್ಲಿ ತೊಡಗಬಹುದು ಹಾಗೂ ಇತರ ಕಠಿಣತರ ಕೆಲಸಗಳಲ್ಲಿ ತೊಡಗಬಹುದು. ಎಲ್ಲ ರೀತಿಯ ಸ್ನಾಯು ಮತ್ತು ಅಸ್ಥಿಸಂಬಂಧಿತ ಸಮಸ್ಯೆಗಳು ಗಂಡಸರಿಗಿಂತ ಹೆಂಗಸರಲ್ಲಿಯೇ ಹೆಚ್ಚು ಕಂಡುಬರಲು ಕಾರಣ ಅವರ ಶರೀರ ರಚನೆ ಹಾಗೂ ಮಿತಿಮೀರಿದ ಕೆಲಸ. ಮಹಿಳೆಯರು ಕಾರ್ಖಾನೆಯಲ್ಲಿ ಕೆಲಸ ಮಾಡಿಬಂದ ನಂತರ ಮನೆಯಲ್ಲಿಯೂ ಕೆಲಸ ಮಾಡಬೇಕಾಗುತ್ತದೆ. ಈ ದುಪ್ಪಟ್ಟು ಶ್ರಮವು ಸ್ನಾಯು ಮತ್ತು ಕೀಲು ಸಮಸ್ಯೆಗಳನ್ನು ತೀವ್ರಗೊಳಿಸುತ್ತದೆ.

**೪. ಪ್ರಜನನಾಂಗ ಸಮಸ್ಯೆಗಳು:** ಪುರುಷರಲ್ಲಿ ಇಲ್ಲದ ಮಹಿಳೆಯರನ್ನೇ ಕಾಡುವ ಬಹಳ ಮುಖ್ಯವಾದ ಸಮಸ್ಯೆ ಪ್ರಜನನಾಂಗಗಳ ಸಮಸ್ಯೆ. ಪ್ರಜನನಾಂಗ ಸಮಸ್ಯೆಗಳಲ್ಲಿ ಮೊದಲನೆಯದು ಋತುಚಕ್ರ ಸಮಸ್ಯೆಗಳು. ಪ್ರತಿಯೊಬ್ಬ ಮಹಿಳೆಯು ತನ್ನ ಜೀವಮಾನದ ಒಂದಲ್ಲ ಒಂದು ಘಟ್ಟದಲ್ಲಿ ಒಂದಲ್ಲ ಒಂದು ರೀತಿಯ ಋತುಸಮಸ್ಯೆಯನ್ನು ಅನುಭವಿಸಿರುತ್ತಾಳೆ. ಮೊದಲನೆಯದು ಋತುಪೂರ್ವ ಲಕ್ಷಣಾವಳಿ ಅಥವಾ ಪ್ರಿ-ಮೆನ್‌ಸ್ಟ್ರುವಲ್ ಸಿಂಡ್ರೋಮ್. ಇದು ಮದುವೆಯಾಗದ ಹೆಣ್ಣು ಮಕ್ಕಳಲ್ಲಿ ವಿಶೇಷ ರೀತಿಯಲ್ಲಿ ಕಾಡುವುದುಂಟು. ಮಧ್ಯವಯಸ್ಸಿನ ಮಹಿಳೆಯರಲ್ಲಿ ಋತುಸಮಸ್ಯೆಗಳು ಸಾಮಾನ್ಯ. ಅದಕ್ಕೆ ಕಾರಣ ಗರ್ಭಾಶಯದ ನಾರುಗಡ್ಡೆಗಳಾಗಿರಬಹುದು (ಫೈಬ್ರಾಯ್ಡ್ಸ್) ಅಥವಾ ರಕ್ತಹೀನತೆ (ಅನೀಮಿಯ) ಯಾಗಿರಬಹುದು. ಇವುಗಳ ಜೊತೆಯಲ್ಲಿ ಕೆಲಸದ ಶ್ರಮ ಹಾಗೂ ಮಾನಸಿಕ ಒತ್ತಡ ಸೇರಿಕೊಂಡು ಸಮಸ್ಯೆಯು ಉಲ್ಬಣಿಸಬಹುದು. ರಾಸಾಯನಿಕ ವಸ್ತುಗಳಲ್ಲಿ ಕೆಲಸ ಮಾಡುವ ಮಹಿಳೆಯು ಯೋಜಿತ ಗರ್ಭಧಾರಣೆಯನ್ನು ಅನುಸರಿಸಬೇಕು ಹಾಗೂ ಆ ಅವಧಿಯಲ್ಲಿ ಅಪಾಯಕಾರಿ ರಾಸಾಯನಿಕಗಳಿಂದ ದೂರವಿರಬೇಕು. ಎಲೆಕ್ಟ್ರಾನಿಕ್ ಉದ್ಯಮದಲ್ಲಿ ಕೆಲಸ ಮಾಡುವ ಮಹಿಳೆಯರು 'ವಿಡಿಯೋ ಡಿಸ್‌ಪ್ಲೇ ಯೂನಿಟ್'ಗಳಿಂದ ದೂರವಿರುವುದು ಒಳ್ಳೆಯದು. ಇವು ಗರ್ಭಪಾತಕ್ಕೆ ಎಡೆ ಮಾಡಿಕೊಡಬಹುದು ಎಂದು ಕೆಲವು ಅಧ್ಯಯನಗಳು ಗುಮಾನಿಯನ್ನು ವ್ಯಕ್ತಪಡಿಸಿವೆ.

**ವೈದ್ಯಕೀಯ ಪರೀಕ್ಷೆಗಳು**

ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಸ್ತ್ರೀ–ಪುರುಷ ಕಾರ್ಮಿಕರು ಕನಿಷ್ಠ ವರ್ಷಕ್ಕೊಮ್ಮೆಯಾದರೂ ಮಾಡಿಸಿಕೊಳ್ಳಬೇಕಾದ ವೈದ್ಯಕೀಯ ಪರೀಕ್ಷೆಗಳು ಹಾಗೂ ತಪಾಸಣೆಗಳ ಮಾಹಿತಿ ಈ ಕೆಳಕಂಡಂತಿವೆ:

**೧. ಕಣ್ಣುಗಳ ಆರೋಗ್ಯ:** ಕೆಲಸ ಮಾಡುವ ಸ್ಥಳದಲ್ಲಿ ಬೆಳಕು ಸೂಕ್ತ ಪ್ರಮಾಣದಲ್ಲಿ ಇರಬೇಕು. ಹೆಚ್ಚೂ ಇರಬಾರದು. ಕಡಿಮೆಯೂ ಇರಬಾರದು. ಎಲೆಕ್ಟ್ರಾನಿಕ್ ಉದ್ಯಮದಲ್ಲಿ ಮಹಿಳೆಯರು ಸದಾ ಪ್ರಜ್ವಲಿಸುವ 'ಮಾನಿಟರ್' ನೋಡುತ್ತಿರಬೇಕಾಗುತ್ತದೆ. ಔಷಧ ಉದ್ಯಮದಲ್ಲಿ ಮಹಿಳೆಯರು ಪ್ರತಿಯೊಂದು ಸಿರಪ್ ಬಾಟಲಿಯನ್ನು ಅದರ ಶುದ್ಧತೆಗೆ ಪರಿಶೀಲಿಸುತ್ತಲೇ ಇರಬೇಕಾಗುತ್ತದೆ. ಈ ಕೆಲಸವನ್ನು 'ಪರಿವೀಕ್ಷಣೆ' ಅಥವಾ 'ಇನ್‌ಸ್ಪೆಕ್ಷನ್' ಎನ್ನುವರು. ಗಾರ್ಮೆಂಟ್ಸ್ ಉದ್ಯಮದಲ್ಲಿ ಬಟ್ಟೆಗಳನ್ನು ಹೊಲಿಯಬೇಕಾಗುತ್ತದೆ. ಹೊಲಿದು ಸಿದ್ಧಪಡಿಸಿದ ಉಡುಪುಗಳ ಸಮಗ್ರ ಸುಸ್ಥಿತಿಯನ್ನು ಗಮನಿಸಬೇಕಾಗುತ್ತದೆ. ಇಸ್ತ್ರೀ ಮಾಡುವವರೂ ಸಹ ಪೂರ್ಣ ಗಮನವಿಟ್ಟು ಇಸ್ತ್ರೀ ಮಾಡಬೇಕಾಗುತ್ತದೆ. ಒಟ್ಟಿನಲ್ಲಿ ಪರಿವೀಕ್ಷಣೆ ಅಗತ್ಯವಿರುವ ಎಲ್ಲ ಕೆಲಸಗಳಲ್ಲಿಯೂ ಕಣ್ಣುಗಳಿಗೆ ವಿಶೇಷ ಶ್ರಮವಾಗುತ್ತದೆ. ಇಂತಹವರು ವರ್ಷಕ್ಕೊಮ್ಮೆಯಾದರೂ ತಮ್ಮ ಕಣ್ಣುಗಳನ್ನು ಪರೀಕ್ಷಿಸಿಕೊಳ್ಳಬೇಕು. ೪೦ ವರ್ಷ ವಯಸ್ಸಾದವರು ೬ ತಿಂಗಳಿಗೊಮ್ಮೆ ಕಣ್ಣುಗಳ ಪರೀಕ್ಷೆಯನ್ನು ಮಾಡಿಸಿಕೊಳ್ಳುವುದು ಒಳ್ಳೆಯದು. ಕಣ್ಣುಗಳ ಆರೋಗ್ಯಕ್ಕೆ ಉತ್ತಮ ವಿಟಮಿನ್ ಯುಕ್ತ ಆಹಾರವನ್ನು ನಿಯಮಿತ ಸೇವಿಸಬೇಕು.

**೨. ಶ್ವಾಸಕೋಶಗಳ ಆರೋಗ್ಯ:** ಶ್ವಾಸಕೋಶಗಳು ನಮ್ಮ ಬದುಕಿಗೆ ಅಗತ್ಯವಾದ ಆಮ್ಲಜನಕವನ್ನು ಪೂರೈಸುವ ಮುಖ್ಯ ಅಂಗ. ಕಾರ್ಖಾನೆಗಳಲ್ಲಿ ಧೂಳು ಅಧಿಕವಾಗಿರುವುದು ಸಾಮಾನ್ಯ. ಉದಾ: ಸಿಮೆಂಟ್ ಉದ್ಯಮ, ಕಬ್ಬು ಅರೆಯುವ ಕಾರ್ಖಾನೆ, ಹತ್ತಿಗಿರಣಿ, ಬಟ್ಟೆಗಳನ್ನು ನೇಯುವ ಹಾಗೂ ಉಡುಪುಗಳನ್ನು ಸಿದ್ಧಪಡಿಸುವ ಕಾರ್ಖಾನೆ ಇತ್ಯಾದಿ. ಕಾರ್ಖಾನೆಗಳಲ್ಲಿ ಹೊಗೆಯ ಉತ್ಪಾದನೆಯೂ ಹೆಚ್ಚಿರುತ್ತದೆ. ಈ ಹೊಗೆಯನ್ನು ಚಿಮಣಿಗಳ ಮೂಲಕ ವಾಯುಮಂಡಲಕ್ಕೆ ಹರಿಯಬಿಡುವುದು ವಾಡಿಕೆ. ಆದರೆ ಚಿಕ್ಕ ಪುಟ್ಟ ಕಾರ್ಖಾನೆಗಳಲ್ಲಿ ಇಂತಹ ವ್ಯವಸ್ಥೆಯಿರುವುದಿಲ್ಲ. ರಾಸಾಯನಿಕ ಕಾರ್ಖಾನೆಗಳಲ್ಲಿ ನಮ್ಮ ಬರಿಗಣ್ಣಿಗೆ ಕಾಣದಂತಹ ಅನಿಲಗಳು ಸಾಕಷ್ಟು ಪ್ರಮಾಣದಲ್ಲಿರುತ್ತವೆ. ಇವನ್ನು ಉಸಿರಾಡಬಾರದು. ಶ್ವಾಸಕೋಶಗಳಿಗೆ ಅಪಾಯಕಾರಿಯಾಗಬಲ್ಲ ಧೂಳು, ಹೊಗೆ, ರಾಸಾಯನಿಕ ಅನಿಲಗಳ ಉತ್ಪಾದನಾ ಪ್ರಮಾಣವನ್ನು ಸಾಧ್ಯವಾದಷ್ಟು ಕಡಿಮೆ ಮಾಡಬೇಕು. ಈ ಶ್ವಾಸಕೋಶಗಳ ಆರೋಗ್ಯವನ್ನು ನಾಶಪಡಿಸುವ ವಸ್ತುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮೂಗು ಮತ್ತು ಬಾಯಿಯನ್ನು ರಕ್ಷಿಸುವ ಮುಖರಕ್ಷಕವನ್ನು (ಮಾಸ್ಕ್) ನಿತ್ಯ ಧರಿಸಬೇಕು. ನಾನಾ ರೀತಿಯ ಮುಖರಕ್ಷಕಗಳಿವೆ. ಕೆಲಸದ ಸ್ವರೂಪವನ್ನು ಆಧರಿಸಿ ಸೂಕ್ತ ಮುಖರಕ್ಷಕವನ್ನು ಧರಿಸಬೇಕಾಗುತ್ತದೆ. ಈ ದಿಶೆಯಲ್ಲಿ ಕಾರ್ಖಾನೆಯ ಸುರಕ್ಷತಾ ಅಧಿಕಾರಿ ಹಾಗೂ ವೈದ್ಯಾಧಿಕಾರಿಗಳು





ನೆರವಾಗುತ್ತಾರೆ. ಈ ಕಾರ್ಮಿಕರು ೬ ತಿಂಗಳಿಗೊಮ್ಮೆಯಂತೆ ತಮ್ಮ ಶ್ವಾಸಕೋಶಗಳ ಆರೋಗ್ಯ ಹಾಗೂ ಕಾರ್ಯಸಾಮರ್ಥ್ಯವನ್ನು ತಿಳಿಸುವ 'ಪಲ್ಮನರಿ ಫಂಕ್ಷನ್ ಟೆಸ್ಟ್' ಮಾಡಿಸಿಕೊಳ್ಳಬೇಕಾಗುತ್ತದೆ.

**೩. ಕಿವಿಯ ಆರೋಗ್ಯ:** ಕಾರ್ಖಾನೆಗಳು ಎಂದ ಮೇಲೆ ಯಂತ್ರಗಳು ಇರುತ್ತವೆ. ಸಾಮಾನ್ಯವಾಗಿ ಎಲ್ಲ ಯಂತ್ರಗಳು ಶಬ್ದವನ್ನು ಹೊರಡಿಸುತ್ತವೆ. ಕೆಲವು ಯಂತ್ರಗಳು ಮಾತ್ರ ಗಡಚಿಕ್ಕುವ ಶಬ್ದವನ್ನುಂಟುಮಾಡುತ್ತವೆ. ಇಂತಹ ಅಸಾಧ್ಯ ಶಬ್ದದಲ್ಲಿ ಕೆಲಸ ಮಾಡುವುದು ಕಷ್ಟ. ತಲೆನೋವು ಬರುತ್ತದೆ. ರಕ್ತದ ಒತ್ತಡ ಹೆಚ್ಚುತ್ತದೆ. ಕಿವಿಯು ಮಂದವಾಗುತ್ತಾ ಹೋಗಿ ಕಿವುಡುತನ ಆರಂಭವಾಗುತ್ತದೆ. ಈ ಎಲ್ಲ ಸಮಸ್ಯೆಗಳನ್ನು ನಿಗ್ರಹಿಸಲು 'ಇಯರ್ ಮಫ್' ಅಥವಾ 'ಇಯರ್ ಪ್ಲಗ್'ಗಳನ್ನು ನಿಯಮಿತವಾಗಿ ಧರಿಸಬೇಕು. ಹಾಗೆಯೇ ೬ ತಿಂಗಳಿಗೊಮ್ಮೆ ಕಿವಿಗಳ ಶ್ರವಣ ಸೂಕ್ಷ್ಮತೆ ಹಾಗೂ ವ್ಯಾಪ್ತಿಯನ್ನು ತಿಳಿಸುವ 'ಆಡಿಯೋಗ್ರಾಮ್' ಪರೀಕ್ಷೆಯನ್ನು ಮಾಡಿಸಿಕೊಳ್ಳಬೇಕಾಗುತ್ತದೆ.

**೪. ಎಕ್ಸ್-ರೇ ಪರೀಕ್ಷೆ:** ನಾನಾ ರೀತಿಯ ಧೂಳು ಇರುವ ಸ್ಥಳಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಕನಿಷ್ಠ ೩ ವರ್ಷಗಳಿಗೊಮ್ಮೆ ಎದೆಯ ಎಕ್ಸ್-ರೇ ಪರೀಕ್ಷೆಯನ್ನು ಮಾಡಿಸಿಕೊಳ್ಳಬೇಕು. ಏಕೆಂದರೆ ಧೂಳು (ಉದಾ: ಸಿಮೆಂಟ್ ಕಾರ್ಖಾನೆ, ಕಟ್ಟಡ ನಿರ್ಮಾಣ ಕೆಲಸಗಳು, ಲೋಹಗಳನ್ನು ಅರೆಯುವ ಇಲ್ಲವೇ ನುಣುಪುಗೊಳಿಸುವ ಕೆಲಸಗಳು ಇತ್ಯಾದಿ) ನಿರಂತರವಾಗಿ ಶ್ವಾಸಕೋಶಗಳಲ್ಲಿ ಜಮೆಯಾದಾಗ, ಅವು ಶ್ವಾಸಕೋಶಗಳ ಕಾರ್ಯಕ್ಷಮತೆಯನ್ನು ಕುಗ್ಗಿಸುತ್ತವೆ. ಕೆಲವು ಸಲ ಕ್ಯಾನ್ಸರ್ ಬೆಳೆಯಬಹುದು. ಹಾಗಾಗಿ ಶ್ವಾಸಕೋಶಗಳ ಸಮಸ್ಯೆಯನ್ನು ಆರಂಭದಲ್ಲಿಯೇ ಪತ್ತೆಹಚ್ಚಲು ಎಕ್ಸ್-ರೇ ಪರೀಕ್ಷೆಯನ್ನು ಮಾಡಿಸಿಕೊಳ್ಳಬೇಕು.

**ಆ. ಮಾನಸಿಕ ಅನಾರೋಗ್ಯಗಳು**

ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರು ಮುಖ್ಯವಾಗಿ ಎರಡು ರೀತಿಯ ಮಾನಸಿಕ ಅನಾರೋಗ್ಯಕ್ಕೆ ತುತ್ತಾಗುವ ಸಾಧ್ಯತೆಯಿರುತ್ತದೆ. ಮೊದಲನೆಯದು ಲೈಂಗಿಕ ದೌರ್ಜನ್ಯ ಹಾಗೂ ಎರಡನೆಯದು ಔದ್ಯೋಗಿಕ ಒತ್ತಡ.

**೧. ಲೈಂಗಿಕ ದೌರ್ಜನ್ಯ:** ನಮ್ಮದು ಪುರುಷ ಪ್ರಧಾನವಾದ ಸಮಾಜ. ಅವಕಾಶ ದೊರೆತಾಗಲೆಲ್ಲ ಪುರುಷನು ಸ್ತ್ರೀಯರ ಮೇಲೆ ದೌರ್ಜನ್ಯವನ್ನು ಎಸಗಲು ಹಿಂದೆಗೆಯುವುದಿಲ್ಲ. ಜಗತ್ತಿನ ಇತಿಹಾಸದಲ್ಲಿ ಗಂಡು ಯಾವಾಗಲೂ ಹೆಣ್ಣಿನ ಶೋಷಣೆಯನ್ನು ಮಾಡುತ್ತಲೇ ಬಂದಿದ್ದಾನೆ. ಈ ದೌರ್ಜನ್ಯ ಹಾಗೂ ಶೋಷಣೆಯು ಸಂಘಟಿತ ಕಾರ್ಮಿಕ ವಲಯಕ್ಕಿಂತಲೂ ಅಸಂಘಟಿತ ಕಾರ್ಮಿಕ ವಲಯದಲ್ಲಿ ತೀವ್ರವಾಗಿದೆ. ಶೋಷಣೆಗಳು ಆರ್ಥಿಕವಾಗಿ, ಶಾರೀರಿಕವಾಗಿ ಹಾಗೂ ಮಾನಸಿಕವಾಗಿರುತ್ತವೆ. ಕೆಲಸ ಮಾಡುವ ಸ್ಥಳದಲ್ಲಿ ಪುರುಷರು ಮಹಿಳೆಯರನ್ನು ಚುಡಾಯಿಸಬಹುದು. ಅವರ ಬಗ್ಗೆ ಅಸಹ್ಯಕರ ಮಾತುಗಳನ್ನು ಆಡಬಹುದು. ಅವರ ಬಗ್ಗೆ ಅಪಪ್ರಚಾರವನ್ನು ಮಾಡಬಹುದು. ಅವರ ಮೈಕೈ ಮುಟ್ಟಲು ಬರಬಹುದು. ಕೆಲವು ಸಲ ಕೆಲಸದಿಂದ ತೆಗೆದುಹಾಕುತ್ತೇನೆ ಎಂದು ಇಲ್ಲವೇ ಕೆಲಸವನ್ನು ಶಾಶ್ವತಗೊಳಿಸುವುದಾಗಿ ಹೇಳಿ ಲೈಂಗಿಕವಾಗಿ ಶೋಷಿಸಬಹುದು. ಇವೆಲ್ಲವೂ ಮಹಿಳೆಯರ ಶರೀರದ ಮೇಲೆ ಮಾತ್ರವಲ್ಲ, ಮನಸ್ಸಿನ ಮೇಲೆಯೂ ಗಾಢವಾದ ದುಷ್ಪರಿಣಾಮವನ್ನು ಬೀರುತ್ತವೆ. ಇದರ ಪರೋಕ್ಷ ಪ್ರಭಾವವು ಆಕೆಯ ಕುಟುಂಬದ ಮೇಲೂ ಹಾಗೂ ಕಾರ್ಖಾನೆಯ ಉತ್ಪಾದನಾ ಪ್ರಮಾಣದ ಮೇಲೂ ಬೀಳುತ್ತದೆ ಎನ್ನುವುದನ್ನು ಮರೆಯಬಾರದು. ಮಹಿಳೆಯರು ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ದೌರ್ಜನ್ಯವನ್ನು ಮುಚ್ಚಿಡಬೇಕಾಗಿಲ್ಲ. ಅದನ್ನು ದಿಟ್ಟವಾಗಿ ಎದುರಿಸಬೇಕು. ಆಡಳಿತ ವರ್ಗಕ್ಕೆ ದೂರನ್ನು ನೀಡಬೇಕಾಗುತ್ತದೆ. ಒಂದು ಕಾರ್ಖಾನೆಯಲ್ಲಿ ೨೫ಕ್ಕಿಂತಲೂ ಹೆಚ್ಚಿನ ಮಹಿಳೆಯರು ಕೆಲಸ ಮಾಡುತ್ತಿದ್ದರೆ, ಆ ಕಾರ್ಖಾನೆಯಲ್ಲಿ ಆಡಳಿತ ವರ್ಗವು 'ಲೈಂಗಿಕ ದೌರ್ಜನ್ಯ ವಿಚಾರಣಾ ಸಮಿತಿ'ಯನ್ನು ರಚಿಸಬೇಕಾಗುತ್ತದೆ. ಈ ಸಮಿತಿಯನ್ನು ರಚಿಸಲೇಬೇಕು ಎನ್ನುವ ಕಾನೂನಿನ ನಿರ್ಬಂಧವಿದೆ. ಈ ಸಮಿತಿಯು ಆರೋಪಿಗಳನ್ನು ಕರೆಯಿಸಿ ವಿಚಾರಣೆಯನ್ನು ನಡೆಸುತ್ತದೆ. ಆರೋಪವು ಸಾಬೀತಾದಲ್ಲಿ ಅಪರಾಧಿಗೆ ಶಿಕ್ಷೆಯಾಗುತ್ತದೆ. ಹಾಗಾಗಿ ಮಹಿಳಾ ಕಾರ್ಮಿಕರು ತಮ್ಮ ಹಕ್ಕುಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಅಗತ್ಯ ಕಂಡುಬಂದಾಗ ಅವನ್ನು ಉಪಯೋಗಿಸಲು ಹಿಂಜರಿಯಬಾರದು.

**೨. ಮಾನಸಿಕ ಒತ್ತಡ:** ಮಹಿಳೆಯರು ಪ್ರತಿದಿನ ಹಲವು ಪಾತ್ರಗಳನ್ನು ಸಮರ್ಥವಾಗಿ ನಿಭಾಯಿಸಬೇಕಾಗುತ್ತದೆ. ಆಕೆಯು ಹೆಂಡತಿಯಾಗಿ, ತಾಯಿಯಾಗಿ ಮನೆಯ ಕೆಲಸವನ್ನು ನಿರ್ವಹಿಸುವುದರ ಜೊತೆಯಲ್ಲಿ ಕಾರ್ಮಿಕಳಾಗಿ ದುಡಿಯಬೇಕಾಗುತ್ತದೆ. ಸಾಕಷ್ಟು ಪ್ರಕರಣಗಳಲ್ಲಿ ಮಹಿಳೆಯೊಬ್ಬಳೇ ಕುಟುಂಬದ ಏಕೈಕ ದುಡಿಯುವ ವ್ಯಕ್ತಿಯಾಗಿರುತ್ತಾಳೆ. ಆಕೆಯು ಇಡೀ ಕುಟುಂಬವನ್ನು ಸರಿದೂಗಿಸಬೇಕಾಗುತ್ತದೆ. ಕೆಲವು ಸಲ ಮನೆಯಲ್ಲಿ ಹೆಸರಿಗೆ ಮಾತ್ರ ಗಂಡನಿರುತ್ತಾನೆ. ಹೆಂಡತಿಯಾದವಳೇ ಗಂಡನನ್ನು ಮಾತ್ರವಲ್ಲ ಕುಟುಂಬದ ಇತರ ಸದಸ್ಯರನ್ನೂ ಸಾಕಬೇಕಾಗುತ್ತದೆ. ನಾನಾ ಕಾರಣಗಳಿಂದ ಏಕ ಪಾಲಕರಾಗಿ ಮಕ್ಕಳನ್ನು ಸಾಕುತ್ತಿರುವ ಮಹಿಳೆಯರು ನಮ್ಮಲ್ಲಿದ್ದಾರೆ. ಹಾಗಾಗಿ ಇವರೆಲ್ಲರೂ ತಮ್ಮ ತಮ್ಮ ವೈಯಕ್ತಿಕ ಒತ್ತಡಗಳನ್ನು ಭರಿಸಿಕೊಂಡು ಉದ್ಯೋಗವನ್ನು ಮುಂದುವರೆಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗಂಡಸರಿಗಿಂತ ಹೆಂಗಸರು ಹೆಚ್ಚು ಹೆಚ್ಚು ಮಾನಸಿಕ ಒತ್ತಡಗಳಿಗೆ ತುತ್ತಾಗುತ್ತಾರೆ.

✴ ಕೆಲಸದ ಸ್ಥಳದಲ್ಲಿ ಮಹಿಳೆ ಎದುರಿಸಬೇಕಾದ ಪ್ರಮುಖ ಮಾನಸಿಕ ಸಮಸ್ಯೆಯೆಂದರೆ ಲಿಂಗ ತಾರತಮ್ಯ. ಕೆಲವು ಕೆಲಸಗಳನ್ನು ಮಾಡಲು ಮಹಿಳೆಯು ಸಶಕ್ತಳಲ್ಲ ಎಂಬ ಪೂರ್ವಗ್ರಹ ಪೀಡಿತ ಅನಿಸಿಕೆಗಳಿವೆ. ಕೆಲಸದ ಸ್ಥಳದಲ್ಲಿ ಇಂತಹ ನಂಬಿಕೆಗಳು ಆಳವಾಗಿ ಬೇರುಬಿಟ್ಟಿದ್ದಲ್ಲಿ, ಅಲ್ಲಿ ಮಹಿಳೆಯರಿಗೆ ಸಿಗಬೇಕಾದ ಸ್ಥಾನಮಾನಗಳು ಆಕೆಗೆ ದೊರೆಯದೇ ಹೋಗಬಹುದು.

✴ ಸಾಮಾನ್ಯವಾಗಿ ಆಡಳಿತವರ್ಗವು ಕೆಲಸದ ಪ್ರಶ್ನೆ ಬಂದಾಗ ಗಂಡು-ಹೆಣ್ಣಿನ ವ್ಯತ್ಯಾಸವನ್ನು ಪರಿಗಣಿಸುವುದಿಲ್ಲ. ಗಂಡು ದುಡಿದಷ್ಟೇ ಹೆಣ್ಣೂ ದುಡಿಯಬೇಕು ಎಂದು ನಿರೀಕ್ಷಿಸುತ್ತದೆ. ಸಾಮಾನ್ಯವಾಗಿ ಆಕೆಯು ದುಡಿಯಲು ಸಿದ್ಧವಾಗಿರುತ್ತಾಳೆ. ಆದರೆ ಆಕೆಯು ದುಡಿಯಲು ಅಗತ್ಯವಾದ ಅನುಕೂಲತೆಗಳನ್ನು ಮಾಡಿಕೊಡಬೇಕಾಗುತ್ತದೆ. ಒಂದು ಉದಾಹರಣೆ, ಗಂಡಸರು ಉಪಯೋಗಿಸುವ ಸುರಕ್ಷತಾ ಸಾಮಗ್ರಿಗಳು ಹೆಂಗಸರಿಗೆ ಸರಿಹೋಗದಿರಬಹುದು. ಗಂಡಸರ ಬೂಟುಗಳು, ಕೈಗವಸುಗಳು, ಶಿರಸ್ತ್ರಾಣ ಇತ್ಯಾದಿಗಳನ್ನು ಹೆಂಗಸರು ಬಳಸಲು ಕಷ್ಟವಾಗುತ್ತದೆ. ಅವರಿಗೆ ಸರಿಹೊಂದುವ ವಿಶೇಷ ಸಾಮಗ್ರಿಗಳನ್ನು ಆಡಳಿತವರ್ಗವು ತರಿಸಿಕೊಡಬೇಕಾಗುತ್ತದೆ.

✴ ಮಹಿಳೆಯರಿಗೆ ಕೆಲವು ಅನುಕೂಲತೆಗಳನ್ನು ವಿಶೇಷವಾಗಿ ಮಾಡಿಕೊಡಬೇಕಾಗುತ್ತದೆ. ಪ್ರತ್ಯೇಕ ಶೌಚಾಲಯ, ಉಡುಪು ಬದಲಿಸುವ ಕೋಣೆಯಿರಬೇಕಾಗುತ್ತದೆ. ಔದ್ಯೋಗಿಕ ಆರೋಗ್ಯ ಕೇಂದ್ರದಲ್ಲಿ ಮಹಿಳಾ ನರ್ಸ್ ಇದ್ದರೆ ಹೆಚ್ಚು ಅನುಕೂಲವಾಗುತ್ತದೆ. ಆರೋಗ್ಯ ಕೇಂದ್ರದಲ್ಲಿ ಮಹಿಳೆಯರಿಗೆ ಅಗತ್ಯವಾದ ನ್ಯಾಪ್‌ಕಿನ್ ಉಚಿತವಾಗಿ ಇಲ್ಲವೇ ಮಾರಾಟಕ್ಕೆ ದೊರೆಯುವಂತಿರಬೇಕು. ಮಹಿಳೆಯರ ತಾಯ್ತನದ ೨೬ ವಾರಗಳ ರಜೆಯನ್ನು ನೀಡಬೇಕು. ಕೆಲಸ ಮಾಡುವ ಸ್ಥಳದಲ್ಲಿ 'ಮಕ್ಕಳ ಪಾಲನಾ ಕೇಂದ್ರ'ವಿರಬೇಕು. ಶಿಶುವಿಗೆ ನಿಯಮಿತವಾಗಿ ಸ್ತನ್ಯಪಾನ ಮಾಡಿಸಲು ಅವಕಾಶವಿರಬೇಕು.

**ಉಪಸಂಹಾರ**

೨೦೧೪-೧೫ನೆಯ ಸಾಲಿನ ಅಂಕಿ ಅಂಶಗಳ ಅನ್ವಯ ಕರ್ನಾಟಕದಲ್ಲಿ ೨೩.೮೫ ಲಕ್ಷ ಕಾರ್ಮಿಕರು ಕೆಲಸ ಮಾಡುತ್ತಿದ್ದು ಅವರಲ್ಲಿ ಮಹಿಳೆಯರ ಪಾಲು ಕೇವಲ ೭.೭೨ ಲಕ್ಷ. ಅಂದರೆ ಕರ್ನಾಟಕದಲ್ಲಿ ೧/೩ ಮಹಿಳೆಯರು ಮಾತ್ರ ಉದ್ಯೋಗದಲ್ಲಿ ತೊಡಗಿರುವರು ಎನ್ನಬಹುದು. ಉದ್ಯೋಗಸ್ಥ ಮಹಿಳೆಯರು ಬೆಂಗಳೂರು ನಗರ ಜಿಲ್ಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದುಡಿಯುತ್ತಿರುವರು. ೩.೧೬ ಲಕ್ಷ ಮಹಿಳೆಯರಲ್ಲಿ ೨.೫೯ ಲಕ್ಷ ಮಹಿಳೆಯರು ಖಾಸಗೀ ಉದ್ಯೋಗದಲ್ಲಿ ತೊಡಗಿದ್ದರೆ ೫೬,೪೭೮ ಮಹಿಳೆಯರು ಸರ್ಕಾರೀ ಉದ್ಯೋಗಗಳಲ್ಲಿ ನಿರತರಾಗಿರುವರು. ಸಂಘಟಿತ ವಲಯಗಳಲ್ಲಿರುವ ಮಹಿಳೆಯರ ಲೆಕ್ಕ ಸಿಗುತ್ತದೆ. ಇವರಿಗೆ ವೈದ್ಯಕೀಯ ಸೌಲಭ್ಯಗಳು ಸಾಕಷ್ಟು ದೊರೆಯುತ್ತವೆ. ಆದರೆ ಅಸಂಘಟಿತ ವಲಯಗಳಾದ ಕೃಷಿ ಮತ್ತು ಕಟ್ಟಡ ನಿರ್ಮಾಣದಲ್ಲಿ ತೊಡಗಿರುವ ಮಹಿಳೆಯರ ಲೆಕ್ಕವೂ ದೊರೆಯುವುದಿಲ್ಲ. ಇವರಿಗೆ ವೈದ್ಯಕೀಯ ಸೌಲಭ್ಯಗಳು ಹೆಚ್ಚು ಕಡಿಮೆ ದೊರೆಯುವುದೇ ಇಲ್ಲ. ಹಾಗಾಗಿ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿರುವವರ ಬಗ್ಗೆ ಇನ್ನುಮೇಲಾದರೂ ಗಮನವನ್ನು ಹರಿಸಬೇಕಾಗಿದೆ.

**ಡಾ॥ ನಾ. ಸೋಮೇಶ್ವರ**
ಡಿ/೫, ೧೮೬, 'ಜನನಿ', ೪೦೭ ಎಸ್‌ಎಫ್‌ಎಸ್, ೨ನೇ ಮುಖ್ಯರಸ್ತೆ, ೩ನೇ ಕ್ರಾಸ್
ಯಲಹಂಕ ನ್ಯೂ ಟೌನ್, ಜಿ. ಕೆ. ವಿ. ಕೆ. ಅಂಚೆ
ಬೆಂಗಳೂರು – ೫೬೦ ೦೬೪

ಚಂದ್ರಪ್ರಭ ಕಠಾರಿ

ಆ ದಿನ ಮನೆಯಲ್ಲಿ ನೀವುಗಳು ನನ್ನ ನಡೆಸಿಕೊಂಡ ರೀತಿ ನನ್ನನ್ನು ಆತ್ಮಹತ್ಯೆಗೂ ಪ್ರಯತ್ನಿಸುವಂತೆ ಮಾಡಿತು. ಆಕಸ್ಮಿಕವಾಗಿ ಸಿಕ್ಕ ಸಂಯಮಳ ಬದುಕಿನ ಪ್ರೀತಿಯ ಸಾಂತ್ವನ ಮಾತುಗಳಿಂದಾಗಿ ನಾನು ಬದುಕಿದೆ. ಅವಳೇ ನನ್ನನ್ನು ಮನೋವೈದ್ಯರಿಗೆ ತೋರಿಸಿದಳು. ವೈದ್ಯರು – ಇದು ಅಸಹಜ ಹೌದಾದರೂ ಅವಾಸ್ತವವಲ್ಲ. ಪುರಾಣಕಾಲದಿಂದಲೂ ಇಂಥ ಉದಾಹರಣೆಗಳು ಇವೆಯೆಂದು ಹರಿ ಹರ ಸೇರಿದ ಕತೆ ಹೇಳಿದರು. ನನ್ನಂಥವರನ್ನು ಸಲಿಂಗಿ ಅಥವಾ ದ್ವಿಲಿಂಗಿಯಾಗಿ ಹೆಸರಿಸಲು ಸಾಧ್ಯವಿಲ್ಲದ ಸಂಕೀರ್ಣ ವ್ಯಕ್ತಿತ್ವವೆಂದು, ನಮಗೂ ಬದುಕುವ ಹಕ್ಕು ಇದೆಯೆಂದು ಧೈರ್ಯ ತುಂಬಿದರು.

# ಅಸ್ತಿತ್ವ

ತಿಂಗಳ ಕಥೆ

"ಭಾನುವಾರ ಬೆಳಿಗ್ಗೆ ತಿಂಡಿಗೆ ಮನೆಗೆ ಬಂದ್ಬಿಡು. ಅಲ್ಲೇ ಕೂತು ಮಾತಾಡೋಣ" ಎಂದು, ಖುದ್ದು ಅವನಿದ್ದ ಬ್ಯಾಂಕಿಗೆ ಹೋಗಿ ಬಂದ ಚಿಕ್ಕಭಾವನಿಗೆ 'ಆಗಲಿ' ಎಂದಿದ್ದವನು ಊಟದ ಹೊತ್ತಾದರೂ ಬರುವ ಲಕ್ಷಣ ಕಾಣಲಿಲ್ಲ. ಮನೆ ತುಂಬ ನೀರವತೆ. ಕಳೆದ ವಾರವೂ ಹೀಗೆ ಕಾದು ಕುಳಿತು, ಅವನು ಬರದಾಗ ಒಬ್ಬರ ಮೇಲೆ ಒಬ್ಬರು ಆರೋಪಿಸಿ ತಮ್ಮಂದಿರು ಬಡಿದಾಡಿಕೊಂಡಿದ್ದರು. ಅದನ್ನು ನೆನೆದೇ ತಂಗಿಯರು, ಸೊಸೆಯಂದಿರಿಗೆ ಒಬ್ಬರಿಗೊಬ್ಬರು ಮಾತಾಡಬೇಕು ಅನ್ನಿಸಲಿಲ್ಲ. ತಾಯಿ ಸುಲೋಚನ ಕೂಡ ಬೆದರಿ ರೂಮಿನ ಆಚೆಗೆ ಹೋಗದೆ ಆಡುವ ಮೊಮ್ಮಕ್ಕಳನ್ನು ನೋಡುತ್ತ ಮಂಚದ ಮೇಲೆ ಮಲಗಿ ಕಾಲ ನೂಕಿದಳು. ನಾನು ಸತ್ತರೆ ಯಾವತ್ತು ಮಕ್ಕಳಲ್ಲಿ ಕೈಯೊಡ್ಡಬೇಡ. ಅವರು ಕೈಬಿಟ್ಟರೂ ಮನೆ, ಅಂಗಡಿ ಬಾಡಿಗೆ ಬರುತ್ತೆಂದು ಗಂಡ ಹೇಳಿದ್ದು ಧೈರ್ಯ ತಂದರೂ, ಮಾತುಮಾತಿನ ಭರದಲ್ಲಿ ಎರಡನೆಯವ ನಾಗೇಂದ್ರ; "ಹಾಗಿದ್ದಲ್ಲಿ.... ಅಪ್ಪನ ಕತೆ ಮುಗಿತಲ್ಲಾ.... ಅಕ್ಕರೆಯಿದ್ದಲ್ಲಿ ಅಮ್ಮನ್ನ ಕರ್ಕೊಂಡು ಹೋಗಿ ನೀವೇ ಇಟ್ಕೊಳ್ಳಿ" ಎಂದು ತಮ್ಮಂದಿರ ಮೇಲೆ ಕೂಗಾಡಿದ್ದು, ಅದಕ್ಕೆ ಉಳಿದಿಬ್ಬರು ಉತ್ತರಿಸದೆ ಗಬ್ ಚುಪ್ ಆಗಿದ್ದು ಅವಳನ್ನು ಮತ್ತಷ್ಟು ಕಂಗಾಲಾಗುವಂತೆ ಮಾಡಿತ್ತು.



ಎರಡು ತಿಂಗಳ ಹಿಂದೆ ಜಟ್ಟಪ್ಪ ತೀರಿಕೊಂಡ ಮೂರನೇ ದಿನಕ್ಕೆ ಅಸ್ಥಿಯನ್ನು ಶ್ರೀರಂಗಪಟ್ಟಣದ ಸಂಗಮದಲ್ಲಿ ಬಿಟ್ಟು, ಕಾಗೆಗೆ ಎಡೆ ಇಟ್ಟು ಬಂದು ಮತ್ತೆ ಹನ್ನೊಂದನೇ ದಿನಕ್ಕೆ ತಿಥಿಕಾರ್ಯ ಮುಗಿಯುವವರೆಗೂ ತೆಪ್ಪಗಿದ್ದ ಮೂವರು ಗಂಡುಮಕ್ಕಳು ಒಬ್ಬೊಬ್ಬರಾಗಿ ಬೇಸಿಗೆ ಉರಿ ತಾಳದೆ ಪೊದೆಯಿಂದ ಹೊರಬಂದ ಹಾವಿನಂತಾಗಿದ್ದರು. ಅದೇ ದಿನ ಸಂಜೆಗೆ ಕೊನೆಯ ಮಗ ಕಂಪ್ಯೂಟರ್ ಎಂಜಿನಿಯರ್ ಶ್ರೀನಾಥ "ಅಣ್ಣಾ..... ಅಪ್ಪನ ಕಾರ್ಯದ ಖರ್ಚನ್ನು ನೀನೊಬ್ಬನೇ ಹೊತ್ಕೊಳ್ಳೋದು ಬೇಡ. ಎಷ್ಟು ಕೊಡ್ಬೇಕ್ ಅಂತ ಹೇಳು. ಎಲ್ರೂ ಹಂಚ್ಕೊಳ್ಳೋಣ" ಅಂದಿದ್ದೇ ತಡ ನಾಗೇಂದ್ರ ಬುಸ್ಸೆಂದು ಎಗರಿಬಿದ್ದಿದ್ದ. "ತಿಥಿ ಖರ್ಚ್ನ ಹಂಚ್ಕೊಳ್ಳೊ ಕಾಳಜಿ ಇರೋರು ಅಪ್ಪ ಕ್ಯಾನ್ಸರ್ ಕಾಯಿಲೆಯಿಂದ ಹಾಸಿಗೆ ಹಿಡ್ದು ವರ್ಷವಾಗುತ್ತ ಬಂತು. ಆವಾಗ ಎಲ್ರೂ ಎಲ್ಲಿ ನಾಪತ್ತೆಯಾಗಿದ್ರೀ?" ಅಂತ ಜಾಡಿಸಿದ. ಸ್ವಲ್ಪ ಧೈರ್ಯಮಾಡಿ ಮೂರನೆಯವ ಸುರೇಂದ್ರ "ನಾವೆಲ್ಲ ಬೆಂಗ್ಳೂರಿನ ಆಚೆ ಕೆಲ್ಸ ಸಿಕ್ಕು ಅಲೆಮಾರಿಗಳಾದ್ವಿ. ನಿನ್ನಂಗೆ ಮನೇಲೆ ಇದ್ರೆ ನಾವೇನು ಅಪ್ಪನ್ನ ನೋಡ್ಕೊತಿರ್ಲಿಲ್ವ?" ತಮ್ಮಂದಿರಿಂದ ಅಂಥದೇ ಮಾತನ್ನು ಎಣಿಸುತ್ತಿದ್ದವನು, ಅಪ್ಪನ ಆರೈಕೆಗೆ ತಕ್ಕ ಪ್ರತಿಫಲದ ಲೆಕ್ಕಾಚಾರವನ್ನು ತಮ್ಮಂದಿರಿಗೆ ತಿಳಿಸುವ ಅವಕಾಶವನ್ನು ನಾಗೇಂದ್ರ ಚೆನ್ನಾಗಿಯೇ ಉಪಯೋಗಿಸಿಕೊಂಡ.

"ಹೌದಪ್ಪ... ಹೌದು... ನೋಡ್ಕೊತಿದ್ರಿ! ಹಾಳಾದವನು ಮನೆ ಬಿಟ್ಟು ಹೋದ್‌ಮೇಲೆ ನನ್ನೇ ದೊಡ್ಮಗನ ಪಟ್ಟಕ್ಕೆ ಕೂರ್ಸಿ.... ನಫೆಯಿಲ್ದ ಸೊಳ್ಳೆಪರದೆ ವ್ಯಾಪಾರನ ತಲೆಗೆ ಕಟ್ಕೊಂಡು, ಕೂಲಿ ತರ ಹೊಲಿಗೆ ಮಷೀನ್ನ ತುಳಿತ ಮನೆಯಲ್ಲೇ ಬಿದ್ದಿದ್ದೀನಿ. ಚಿಕ್ಕಪೇಟೆ ಸದ್ದಾರ್ ಪತ್ರಪ್ಪದಂಥ ಗಲ್ಲಿಸೊಂದಿ

ಅಂಗಡಿಗಳಿಂದ ಥಾನು ಥಾನು ಬಟ್ಟೆ ಹೊತ್ಕೊಂಡ್ ಬಂದು ಹೊಲ್ದು.... ಜನತಾ ಬಜಾರ್, ವೀರಶೈವ ಸೊಸೈಟಿಗಳಿಗೆ ಕೊಟ್ಟು ಅವರು ಕೊಡೊ ದುಡ್ಡಿಗಾಗಿ ಅಲೆದು... ಕಷ್ಟಪಟ್ಟು ತಂಗಿದೀರ ಮದ್ವೆ ಮಾಡಿ ಮುಗಿಸೋದ್ರಲ್ಲಿ ನನ್ನ ಹೆಣ ಬೀಳ್ಬೇಕಿತ್ತು. ನೀವ್ಗಳೆಲ್ಲ ಕಾಲೇಜ್ನಲ್ಲಿ ಓದ್ಕೊಂಡ್, ಮಜಾ ಮಾಡಿಕೊಂಡಿದ್ರಿ. ಅದೆಲ್ಲ ನಿಮ್ಗೆ ಈಗ ನೆನಪಿಲ್ಲ ಅಲ್ವಾ?... ಪ್ರಯತ್ನ ಪಟ್ಟಿದ್ದರೆ ನಂಗೂ ನಿಮ್ಮಂಗೆ ಗೌರ್ಮೆಂಟ್ ಕೆಲ್ಸ ಸಿಕ್ಕಿರೊದು..."

ಮಾತಿನ ಮಧ್ಯೆ ಏನನ್ನೊ ಹೇಳಲು ಆತುರ ತೋರಿದ ತಮ್ಮಂದಿರಿಗೆ ಅವಕಾಶ ಕೊಡದೆ, "ಸೊಸೈಟಿಯವರು ಬಿಲ್ಲಿನ ದುಡ್ಡು ಕೊಡ್ದೆ ಮೈತುಂಬ ಸಾಲ ಮಾಡ್ಕೊಂಡಿದೀನಿ. ಹೇಗಿದ್ರು ನೀವ್ಗಳು ಸ್ವಂತ ಮನೆ ಕಟ್ಟಿಸ್ಕೊಂಡಿದ್ದೀರಾ. ಈ ಮನೆ, ಔಟ್ ಹೌಸ್ ಬಾಡಿಗೆ, ಮುಂಗಡ.... ನನಗೆ ಬಿಡಿ. ಸುಂಕದಕಟ್ಟೆ, ಯಲಹಂಕ ಸೈಟ್ನ ಮಾರಿ ಬಂದಿದ್ರಲ್ಲಿ ನೀವು ಮೂವ್ರು ಜೊತೆಗೆ.... ಸರಸ್ವತಿ, ಯಮುನಾ, ಕಾವೇರಿ ಹಂಚಿಕೊಳ್ಳಿ" ಅಂತ ಒಂದೇ ಉಸಿರಿಗೆ ಮಾತಾಡಿ, ಸೀದಾ ಆಯಕಟ್ಟಿಗೆ ಬಲೆ ಬೀಸಿದ. ಸಡನ್ನಾಗಿ ಅಣ್ಣ ಹಾಕಿದ ಪಟ್ಟಿಗೆ ಹೋಂವರ್ಕ್ ಮಾಡಿರಲಿಲ್ಲವಾಗಿ ತಮ್ಮಂದಿರು ಸಿಕ್ಕು ವಿಲವಿಲ ಒದ್ದಾಡಿ, ಬಾಯಿಗೆ ಮಾತು ಬಾರದೆ ತಡಬಡಾಯಿಸಿಹೋದರು.

ಅಣ್ಣತಮ್ಮಂದಿರ ಕಿತ್ತಾಟ ನೋಡಿ ಸಾಕಾಗಿ, "ಸಾಧುಪ್ರಾಣಿ ದೇವರಂಥ ಮಾವನವರಿಗೆ ಇಂಥ ಮಕ್ಕಳೇ! ನಿಮ್ಮ ಮನೆ ವಿಚಾರ ನೀವೇ ಬಗೆಹರಿಸಿಕೊಳ್ಳಿ. ತಮಗೆ ಯಾವ ಪಾಲು ಬೇಡ" ಎಂದು ಸ್ಥಿತಿವಂತ, ಸಜ್ಜನ ಅಳಿಯಂದಿರು ಸ್ಪರ್ಧೆಯಿಂದ ಹೊರಗುಳಿದರು. ಆದರೂ ಆಸ್ತಿಪಾಲು ಸಮಸ್ಯೆ ಬಗೆ ಹರಿಯಲಿಲ್ಲವಾಗಿ.... ತಿಂಗಳುಗಳು ಸರಿದು ಆಗಾಗ್ಗೆ ಮತ್ತೆ ಪಂಚಾಯಿತಿಗೆ ನಡೆದರೂ ಒಮ್ಮತಕ್ಕೆ ಬರಲು ವಿಫಲರಾಗಿ, ಸಾಯೋದಕ್ಕೆ ಮುಂಚೆ ಅಪ್ಪ ವಿಲ್ ಬರೆದಿದ್ದರೆ ಎಲ್ಲವೂ ನಿಸೂರಾಗಿತ್ತೆಂದು ಹಲವಾರು ಬಾರಿ ಪೇಚಾಡಿಕೊಂಡರು.

ಆಗೊಂದು ದಿನ 'ನಾಗೇಂದ್ರ – ಸನ್ ಆಫ್ ಲೇಟ್ ಜಟ್ಟಿಂಗರಾಯ, ಸಂಭ್ರಮ–೮೨, ೧೨ನೇ ಮೇನ್, ಗಾಯಿತ್ರಿನಗರ, ಬೆಂಗಳೂರು' ಎಂಬ ವಿಳಾಸಕ್ಕೆ ರಿಜಿಸ್ಟರ್ ಪೋಸ್ಟೊಂದು ಬಂತು. ಮನೆಯ ಹಿರೀಮಗ ಜಿನೇಂದ್ರ ಲಾಯರ್ ನೋಟಿಸ್ ಕಳುಹಿಸಿದ್ದ. ತನ್ನ ಉಪಸ್ಥಿತಿ ಹಾಗೂ ಅನುಮತಿ ಇಲ್ಲದೆ ತಂದೆಯ ಪಿತ್ರಾರ್ಜಿತ ಯಾ ಸ್ವಯಾರ್ಜಿತ ಆಸ್ತಿಯನ್ನು ಯಾವುದೇ ಕಾರಣಕ್ಕೂ ಪರಭಾರೆ ಮಾಡಕೂಡದು. ತಪ್ಪಿದಲ್ಲಿ ಕೋರ್ಟಿಗೆ ಕೇಸ್ ಹಾಕುವುದು ಅನಿವಾರ್ಯ ವಾಗುವುದು ಎಂದು ಬರೆದಿತ್ತು.

ಮನೆಗೆ ಮೊದಲ ಮಗುವಾಗಿ ಹುಟ್ಟಿ ಬೆಳೆದವನು, ಬೆನ್ನಿಗೆ ಬಿದ್ದವರಿಗೆ ಅವನ ಇರುವಿಕೆಯೇ ಕಳೆದ ಹನ್ನೆರಡು ವರುಷಗಳಲ್ಲಿ ಮರತೇಹೋಗಿರುವಾಗ, ಧುತ್ತೆಂದು ನೋಟಿಸ್ ರೂಪದಲ್ಲಿ ಅವತರಿಸಿದ್ದು ಅನಿರೀಕ್ಷಿತ ಮರ್ಮಾಘಾತದ ಸಂಗತಿಯಾಗಿತ್ತು.

ಮನೆಬಿಟ್ಟು ಹೋಗಿ ವಾಪಸು ಬಂದವನ್ಗೆ ಮಾತ್ನಾಡೊಕೆ ಅವಕಾಶ ಕೊಡ್ಬೇಕಿತ್ತು... ಚಿಕ್ಕವನು ಚಿಕ್ಕವನಾಗಿರದೆ ದೊಡ್ಡ ಮನುಷ್ಯನಂತೆ ಕೈ ಮಾಡ್ಬಾರದಿತ್ತು.... ಸ್ವತಃ ಅಪ್ಪನೇ ಮೌನವಾಗಿದ್ದಾಗ ಸುಮ್ನಿರೋದು ಬಿಟ್ಟು ಕತ್ ಹಿಡಿದು ಮನೆಯಾಚೆ ದೂಕಿದ್ದಕ್ಕೆ ಅವ್ನು ಮನೆ ಬಿಟ್ಟಿದ್ದು...

ಜಟ್ಟಪ್ಪನ ಮಕ್ಕಳು – ಆಸ್ತಿ ಹಂಚಿಕೆ ಮತ್ತಷ್ಟು ಕಗ್ಗಂಟಾಗಿ ನೋಟಿಸನ್ನೇ ನೆಪಮಾಡಿಕೊಂಡು ಒಬ್ಬರ ಮೇಲೆ ಒಬ್ಬರು ಆರೋಪಿಸಿ ಮತ್ತಷ್ಟು ಸಿಟ್ಟು ಕಾರಿಕೊಂಡರು. 'ಎಲ್ಲಿ ಹಾಳಾಗಿ ಹೋಗಿದ್ದನೊ... ಏನೋ? ಇದ್ದಾಗಲೂ ನೆಮ್ಮದಿಯಾಗಿ ಇರಗೊಡಲಿಲ್ಲ... ಮನೆ ಬಿಟ್ಟು ಹೋದರೂ ಬೆಂಬಿಡದೆ, ಆಗಿರೊ ಹುಣ್ಣನ್ನು ಮತ್ತಷ್ಟು ಕೆದಕುತ್ತಿದ್ದಾನೆ.. ಹಾಳಾದವನು' ಎಂದು ಏನು ಮಾಡಲಾಗದ ಸ್ಥಿತಿಗೆ ಕೈಕೈ ಹೊಸೆದುಕೊಂಡರು.

ಆ ದಿನಗಳಲ್ಲಿ ಜಟ್ಟಪ್ಪನ ಮನೆಯಲ್ಲಿ ಸೂತಕದ ವಾತಾವರಣವಿರುತ್ತಿತ್ತು. ಮನೆಯಲ್ಲಿ ಅಸಹನೀಯ ಮೌನ. ಯಾರಿಗೆ ಯಾರೂ ಮಾತಾಡುತ್ತಿರಲಿಲ್ಲ. ಓದುತ್ತಿದ್ದ ಮಕ್ಕಳ ಪಿಸುದನಿಯ ಮಾತು, ಸೊಳ್ಳೆಪರದೆ ಹೊಲೆಯುತ್ತಿದ್ದ ಜಟ್ಟಪ್ಪನ ಹೊಲಿಗೆ ಯಂತ್ರದ ಕಟ್.. ಕಟ್.. ಕಟಕಟಾ... ಶಬ್ದದ ಹೊರತು.

ವಿಜಯನಗರ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ಜಿನೇಂದ್ರ, ಆ ದಿನ ಸಂಜೆ ಮನೆಗೆ ಬಂದವನೇ ಬ್ಯಾಂಕ್ ಸಹೋದ್ಯೋಗಿಗಳೊಂದಿಗೆ ಪ್ರವಾಸವೆಂದು ಆತುರಾತುರದಲ್ಲಿ ಸೂಟ್‌ಕೇಸಲ್ಲಿ ಬಟ್ಟೆಬರೆ ತುಂಬಿಕೊಂಡು ಹೊರಟವನು ಮೂರುದಿನವಾದರೂ ಮನೆಗೆ ಹಿಂತಿರುಗಲಿಲ್ಲ.

'ಯಾವತ್ತು ಅವನು ಎಲ್ಲಿಯೂ ಹೀಗೆ ಹೋದವನಲ್ಲ. ಅವನಿಗೇನಾಯಿತೊ?' ಎಂದು ಸುಲೋಚನ ಒಂದೇ ಸಮನೆ ಗೋಳಿಟ್ಟರೆ, ಪುಟ್ಟ ಹೆಣ್ಣುಮಕ್ಕಳು ಏನಾಯಿತೆಂದು ಅರಿಯದೇ ಅಮ್ಮನನ್ನು ಅನುಸರಿಸಿ ಅಳುತ್ತ ಕೂತರು. "ಭಯ ಪಡೊದಿಕ್ಕೆ ಅವನೇನು ಹೆಣ್ಣುಮಗುನೇ? ಏನೋ ಒಂದಿನಾ ಹೆಚ್ಚುಕಮ್ಮಿ ಆಗಿರುತ್ತೆ. ಬರ್ತಾನೆ ಬಿಡು? ಕಣ್ಣೀರಾಕಿ ಮಕ್ಕಳನ್ನು ಗೋಳಾಡಿಸಬೇಡ" ಎಂದು ಜಟ್ಟಪ್ಪ ಸಮಾಧಾನ ಹೇಳಿದರು.

ಒಂದು ದಿನ ತಡೆದು ಬ್ಯಾಂಕಿನಲ್ಲಿ ವಿಚಾರಿಸಿದರೆ ಅವರಿಗೆ ಮತ್ತೊಂದು ಆಘಾತ ಕಾದಿತ್ತು. ಆ ರೀತಿ ಯಾವುದೇ ಪ್ರವಾಸವನ್ನು ಆಯೋಜಿಸಿರಲಿಲ್ಲವೆಂದು ತಿಳಿದುಬಂತು. ಒಂದೆಡೆ ಮಗನ ಕಣ್ಮರೆ, ಮತ್ತೊಂಡೆದೆ ಆತನ ಬಾಯಲ್ಲಿ ಸುಳ್ಳೇ! ಅದು ದೇವರೂ ಒಪ್ಪುವ ಮಾತಾಗಿರಲಿಲ್ಲ.

ಉಳಿದ ಮಕ್ಕಳು ಒಂದು ತೆರನಾದರೆ, ಜಿನೇಂದ್ರ ಎಲ್ಲರಿಗಿಂತ ಗುಣಸ್ವಭಾವದಲ್ಲಿ ಯಾರನ್ನು ಹೋಲುತ್ತಿರಲಿಲ್ಲ. ಅಪ್ಪನಿಗಿಂತ ಹೆಚ್ಚು ಸಮಾಧಾನಿ, ಅಂತರ್ಮುಖಿ. ಶಾಲಾ ಕಾಲೇಜು ದಿನಗಳಲ್ಲಿ ಕೂಡ ಉಳಿದ ಮಕ್ಕಳು ಯಾವಾಗಲೂ ಗಲ್ಲಿ ಬೀದಿ ಗಳಲ್ಲಿ, ಪಾರ್ಕ್‌ನಲ್ಲಿ ಗೆಳೆಯರೊಂದಿಗೆ ಆಡುತ್ತಿದ್ದರೆ ಈತ ಮನೆಯಲ್ಲೇ ಉಳಿದು ಓದುತ್ತ ಕೂರುವ ಪುಸ್ತಕದ ಹುಳು. ದೇವರ ಕೋಣೆ ಹೊಕ್ಕರೆ ಗಂಟೆಗಟ್ಟಲೆ ಕೂತು ಜಪ ಮಾಡುವ ಅಪಾರ ದೈವಪ್ರಿಯ ಎಂದೂ ಅಬದ್ಧ ನುಡಿದ ಕುರುಹೇ ಇಲ್ಲದವನಿಗೆ, ಅಪ್ಪ ಅಮ್ಮನಿಗೆ ತಿಳಿಸದೆ ಸುಳ್ಳು ಹೇಳಿ ಹಾಗೆ ಹೋಗುವ ಯಾವ ಜರೂರತ್ತು ಇತ್ತು? ಯಾವ ಕೋನದಲ್ಲಿ ನೋಡಿದರೂ ನಡೆದ ಸಂಗತಿ ವಿಚಿತ್ರವಾಗಿ ಕಂಡಿತು.

ಜಿನೇಂದ್ರನಿಗೆ ಸ್ನೇಹಿತರು ಅಂತ ಹೇಳಿಕೊಳ್ಳುವವರು ಯಾರೂ ಇರಲಿಲ್ಲ. ಯಾವ ಸುಳಿವೂ ಸಿಗದೆಂಬ ಅರಿವಿದ್ದರೂ ಸಮಾಧಾನಕ್ಕೆಂದು ನೆರೆಹೊರೆಯವರು, ಹತ್ತಿರದ ಸಂಬಂಧಿಕರ ಮನೆಗಳಿಗೆ ನಾಗೇಂದ್ರ, ಸುರೇಂದ್ರ ಹೋಗಿ ಬಾಗಿಲು ತಟ್ಟಿ ಬಂದದ್ದಾಯಿತು. ಅದರಿಂದ ಎಳ್ಳಷ್ಟು ಪ್ರಯೋಜನವಾಗಲಿಲ್ಲ. ಬದಲಿಗೆ ತಾವಾಗೇ ಚಪ್ಪರಿಸಲು ಒಳ್ಳೆ ಸುದ್ದಿಯನ್ನು ಹಂಚಿ ಬಂದಂತಾಯಿತು.

೧. ಜಟ್ಟಪ್ಪ ಸರಿಯಿಲ್ಲ? ಚಿಕ್ಕವನಿಂದ್ಲೂ ಮಗನ್ನ ಮನೇಲೆ ಕೂಡ್ಹಾಕಿ ಇಟ್ಕೊಂಡು ಈಗ ಪಂಜರದಲ್ಲಿರೊ ಗಿಳೀನ ಆಚೆ ಬಿಟ್ಟಂಗೆ.... ಕೆಲ್ಸಕ್ಕೆ ಸೇರಿ ದುಡ್ಡುಕಾಸು ನೋಡೊ ಹಂಗಾಗಿ ಯಾರ್ ಯಾರ ಕೆಟ್ಟೋರ ಸಾವಾಸದಲ್ಲಿ ಬಿದ್ದವ್ನೊ?
೨. ಮೊದಲಿಂದ್ಲು ಜಿನ್ನಿನಾ ನಾನು ನೋಡಿದ್ದೀನಿ. ಹೆಣ್ಣಿಗ.. ಗುಮ್ಮನಗುಸುಕ... ಇಂಥೋರೇ ನೋಡೊಕೆ ಮಳ್ಳಿಯಂತಿದ್ದು... ಒಳಗೊಳಗೇ ಎಲ್ಲಾ ಕಲ್ತಿರ್ತಾರೆ ಮುಂಡೇವು... ಯಾವೊಳ್ ಸೆರಗಲ್ಲಿ ಬಿದ್ದಿದ್ದಾನೊ...
೩. ನೋಡೊಕೆ ರಾಜ್‌ಕುಮಾರನ ಹಾಗೆ ಭಾಳ ಚೆಂದಾಗಿದ್ದ. ಯಾರ್ದೋ ಕೆಟ್ಟದೃಷ್ಟಿ ಬಿದ್ದು ಮಾಟಮಂತ್ರ ಮಾಡಿಸಿರ್ಬೇಕು.

– ಹೀಗೆ ಒಬ್ಬೊಬ್ಬರು ತಲೆಗೊಂದರಂತೆ ಗಾಸಿಪ್ಪನ್ನು ಹೆಣೆಯಲು ಆರಂಭಿಸಿದ್ದರು. ಅದರಲ್ಲಿ ಎರಡನೆಯದು ಹೆಚ್ಚು ಸುದ್ದಿಯಾಗಿ ಜಟ್ಟಪ್ಪನ ಮನೆಯಲ್ಲಿಯೂ ಹಾಗೆ ಅನುಮಾನಪಡುವಂತಾಯಿತು. ಅದಕ್ಕೆ ಅಲ್ಪಸ್ವಲ್ಪ ಕಾರಣಗಳು ಇದ್ದವು.

ಡಿಗ್ರಿಯಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾಗಿ, ಬ್ಯಾಂಕಿಂಗ್ ಪರೀಕ್ಷೆ ಬರೆದು ಸುಲಭವಾಗಿ ಕೆನರಾ ಬ್ಯಾಂಕ್‌ನಲ್ಲಿ ಕ್ಲಾರ್ಕ್ ನೌಕರಿಯನ್ನು ಗಿಟ್ಟಿಸಿಕೊಂಡ ಜಿನೇಂದ್ರನ ಪ್ರೊಬೇಷನರಿ ಕಾಲವಿನ್ನೂ ಮುಗಿದಿರಲಿಲ್ಲ. ಯಾರೊಂದಿಗೂ ಅಷ್ಟಾಗಿ ಬೆರೆಯದ ಜಿನೇಂದ್ರನ ನಡವಳಿಕೆಯಲ್ಲಿ ಅಲ್ಪಕಾಲಕ್ಕೆ ಬಹಳಷ್ಟು ಬದಲಾವಣೆ ಕಂಡವು. ಸಂಜೆ ಆರರ ಹೊತ್ತಿಗೆ ಸೀದಾ ಮನೆ ಸೇರುತ್ತಿದ್ದವನು ತಡಮಾಡಿ ಬರತೊಡಗಿದ. ಕೆಲವೊಮ್ಮೆ ಮಧ್ಯರಾತ್ರಿ ಬಾಗಿಲು ಬಡಿದದ್ದೂ ಉಂಟು. ಮೊದಮೊದಲಿಗೆ ಯಾರೂ ಆ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ. ಆದರೊಂದು ದಿನ ಹೆಣ್ಣೆಂದರೆ ಮಾರು ದೂರ ಹಾರುವವ ಸುಂದರ ಮೊಗದ ಯುವತಿಯೊಂದಿಗೆ ಮನೆಗೆ ಬಂದಾಗ ಎಲ್ಲರೂ ಕಣ್ಣರಳಿಸಿ, 'ಇವನಿಗೆಲ್ಲಿಂದ ಬಂತು ಇಷ್ಟು ಧೈರ್ಯ!' ಎಂದು ಬಿಟ್ಟ ಬಾಯಿ ಹಾಗೆ ಬಿಟ್ಟು ಹೌಹಾರಿದರು.

ಮನೆ ತುಂಬೆಲ್ಲಾ ಹೊಲೆದು ಹಾಕಿದ್ದ ಸೊಳ್ಳೆಪರದೆಯ ಬೆಟ್ಟದ ರಾಶಿಯಲ್ಲಿ ಕುಳಿತು ಕೊಳ್ಳಲು ಜಾಗವಿಲ್ಲದೆ ಸೀದಾ ತನ್ನ ರೂಮಿಗೆ ಕರೆದೊಯ್ದು ಕುಳ್ಳಿರಿಸಿ, ಹೊಲಿಗೆ ಯಂತ್ರ ತುಳಿಯುತ್ತಿದ್ದ ಅಪ್ಪನಿಗೆ '...ಇವರು ಸಂಯಮ ಅಂತ... ನನ್ನ ಬ್ಯಾಂಕ್ ಕಸ್ಟಮರ್' ಎಂದು ಪರಿಚಯಿಸಿದ. ಜಟ್ಟಪ್ಪ ಒಮ್ಮೆಗೆ ಗಲಿಬಿಲಿಗೊಂಡರೂ ಸುಧಾರಿಸಿ ಕೊಂಡು, "ಅಲ್ಲೋ.. ಕತ್ತಲಾಗ್ತ ಬಂತು. ಆ ಹೆಣ್ಮಗಳು ಮನೆಗೋಗೋಕೆ ಲೇಟಾಗಲ್ವೇ" ಅಂದರು. "ಇಲ್ಲಪ್ಪ... ಅವ್ರ ಮನೆ ಇಲ್ಲೇ ಹತ್ರ... ರಾಜಾಜಿನಗರ... ಮಲ್ಲೇಶ್ವರಂನಲ್ಲಿ ನಾಟಕ ನೋಡೋಕೆ ಹೋಗಿದ್ವಿ... ಹಾಗೆ ನಾನೇ ಕರ್ಕೊಂಡು ಬಂದೆ" ಅಂದ.

ಸುಲೋಚನ ಕಾಫಿ, ತಿಂಡಿ ಕೊಟ್ಟು ಆಕೆ ಹೊರಟ ಮೇಲೆ ಕೆಂಗಣ್ಣು ಬಿಟ್ಟು "ಬ್ಯಾಂಕ್ ವ್ಯವಾರನ ಅಲ್ಲೇ ಬಿಟ್ ಬಾ. ಮನೆಗೆ ತಗೊಂಡ್ ಬರ್ಬೇಡ. ಬಂದ್ಗೊಳ್ನ ಹಾಲ್ನಲ್ಲೇ ಕೂರ್ಸೋದ್ ಬಿಟ್, ರೂಮ್ಗೆ ಕರ್ಕೊಂಡೊಗೋದಾ?" ಎಂದು ಗದರಿದರು. ಓದುತ್ತಿದ್ದರೂ ಕಿವಿಗಳನ್ನು ಆಚೆಗೆ ಇರಿಸಿದ್ದ ನಾಗೇಂದ್ರ ರೂಮಾಚೆಗೆ ಬಂದು, "ದಿನಾ ಇವ್ಳ್ ಜೊತೇನೇ ಸುತ್ತೊಂಡು ರಾತ್ರಿ ಲೇಟಾಗಿ ಮನೆಗೆ ಬರೋದ?" ಅಂದ. "ಮಾತ್ನಲ್ಲಿ ಮರ್ಯಾದಿ ಇರ್ಲಿ!" ಅಂದ ಜಿನೇಂದ್ರ ಹೆಚ್ಚು ಮಾತಾಡದೆ ಕೋಣೆ ಸೇರಿದ್ದು, ಇದ್ದು ಇಲ್ಲದ್ದನ್ನು ಕಲ್ಪಿಸಿಕೊಳ್ಳಲು ಅವಕಾಶವಾಯಿತು.

ಅಣ್ಣನ ನಡವಳಿಕೆ ಬಗ್ಗೆ ಆತಂಕಕ್ಕಿಂತ ಕುತೂಹಲ ಹೆಚ್ಚಾಗಿ, ಕಾಲೇಜಿಗೆ ಚಕ್ಕರ್ ಹಾಕಿ ನಾಗೇಂದ್ರ, ಸುರೇಂದ್ರರು ಮಾತಾಡಿಕೊಂಡು ಅಣ್ಣನ ಹಿಂದೆ ಪಾಳಿಯಲ್ಲಿ ಜಾಸೂಸಿಗೆ ಬಿದ್ದರು. ಬ್ಯಾಂಕಿನ ಸಹೋದ್ಯೋಗಿಗಳ ಗುಸುಗುಸು ಮಾತು, ಕೆಲಸ ಮುಗಿದ ಕೂಡಲೇ ಕಾಫಿ ಡೇ, ಮರಿಯಪ್ಪನ ಪಾರ್ಕ್‌ನಲ್ಲಿ ಅವರಿಬ್ಬರ ಗಂಟೆಗಟ್ಟಲೆ ಹರಟೆ... ಇತ್ಯಾದಿಯನ್ನು ಪತ್ತೆ ಹಚ್ಚಿದರು. ಇದಕ್ಕೆ ಪೂರಕವಾಗಿ ಕ್ರಿಕೆಟ್ ಗೆಳೆಯರು ತಾವು ಕೂಡ ಪಿವಿಆರ್, ಒರಿಯನ್ ಮಾಲಲ್ಲಿ ಮಲ್ಟಿಪ್ಲೆಕ್ಸ್‌ಗೆ ಸಿನಿಮಾಗೆ ಬಂದದ್ದನ್ನು ನೋಡಿದ್ದಾಗಿ ಹೇಳಿದರು.

ರಹಸ್ಯ ಪತ್ತೆ ಹಚ್ಚಿದ ಪುಳಕದಲ್ಲಿ ಜಿನೇಂದ್ರ ಮನೆ ಸೇರುವ ಮುಂಚೆಯೇ ಮನೆ ಸೇರಿ, ಅಪ್ಪನಿಗೆ ತಿಳಿಸಿ ಅವರು ಏನೂ ಆಗಿಲ್ಲವೆಂಬಂತೆ ನೋಟ ಬೀರಿದರೆ ತಮ್ಮ ಪತ್ತೇದಾರಿಕೆ ವ್ಯರ್ಥವಾಗಬಾರದೆಂದು ಅಮ್ಮನಲ್ಲಿ ತುಸು ಉಪ್ಪುಖಾರ ಸವರಿ ವಿಷಯ ಅರುಹಿದರು, 'ಇವನಿಗೇನು ಬಂತು ರೋಗ!' ಎಂದು ಸುಲೋಚನ ತಲೆ ಮೇಲೆ ಕೈಹೊತ್ತು ಕೂತರು.

"ಮಾತೆತ್ತಿದರೆ ದೊಡ್ಡವನು ಮಾಡ್ಲಿ... ದೊಡ್ಡವನು ಹೇಳ್ಲಿ... ಎಲ್ಲಕ್ಕೂ ದೊಡ್ಡವನು.. ದೊಡ್ಡವನು.. ಅಂತೀರಾ! ಇದಕ್ಕೇನು ಹೇಳ್ತಿರಾ? ಹಾಗಾದ್ರೆ ನಾವ್ ನೋಡಿದ್ದು ಸುಳ್ಳಾ?" ಮನೆಯಲ್ಲಿ ಜಿನೇಂದ್ರನಿಗೆ ಯಾವತ್ತು ಇದ್ದ ಪ್ರಾಮುಖ್ಯತೆ ಬಗ್ಗೆ ನಾಗೇಂದ್ರ ಅಪ್ಪನಿಗೆ ಕೇಳುವಂತೆ ಅಮ್ಮನನ್ನು ಪ್ರಶ್ನಿಸಿದ.

ಮನೆಗೆ ಬಂದ ಜಿನೇಂದ್ರ, ಕೈಕಾಲು ತೊಳೆದು ದೇವರಮನೆಗೆ ಸೇರುವ ಮುಂಚೆಯೇ ಸುಲೋಚನ, "ಏನಪ್ಪಾ... ಇದೆಲ್ಲ? ನಾಗ, ಸೂರಿ ಹೇಳೊದು ನಿಜನಾ?" ಅಂದರೆ, "ಅಮ್ಮ... ಸುಮ್ನೆ ನೀನು ಇಲ್ಲದ್ದನ್ನ ತಲೆಗೆ ಹಾಕ್ಕೊತ್ತಿದ್ದೀಯ! ಹಾಗೇನಿಲ್ಲ. ಈ ಮಯ್ಯಳ್ಗಿಗೆ ನನ್ನ ಹಿಂದೆ ಸುತ್ತೋದು ಬಿಟ್ಟು ಓದೊದ್ರ ಬಗ್ಗೆ ಗಮನ ಕೊಡಲು ಹೇಳು" ಎಂದು, ಕೇಳಿದ ಪ್ರಶ್ನೆಗೆ ಹೌದು ಎನ್ನಲಿಲ್ಲ, ಹಾಗೆ ಇಲ್ಲ ಎಂದು ನಿರಾಕರಿಸದೆ ಜಪಕ್ಕೆ ಕೂತ.

ಜಟ್ಟಪ್ಪ ಸುಲೋಚನರು – ಇನ್ನು ಸುಮ್ಮನೆ ಕೂತರೆ ಮಗ ಕೈ ತಪ್ಪುವುದು ಖಚಿತವೆಂದು ನಿರ್ಧರಿಸಿ ಪುರೋಹಿತರಲ್ಲಿ, ಸರೀಕರಲ್ಲಿ ಮಗನಿಗೆ ಒಪ್ಪುವ ಹುಡುಗಿಗಾಗಿ ವಧು ಅನ್ವೇಷಣೆ ಶುರುಮಾಡಿದರು. ಜಿನೇಂದ್ರನನ್ನು ಬಾಲ್ಯದಿಂದಲೂ ಬಲ್ಲ ಹತ್ತಿರದ ಸಂಬಂಧಿಗಳೇ ಹೆಣ್ಣು ಕೊಡಲು ತುದಿಗಾಲಲ್ಲಿ ನಿಂತಿದ್ದರು.

ಹುಡುಗಿಯ ಫೋಟೊ ಟೇಬಲ್ಲಿನ ಮೇಲಿಟ್ಟು ಸುಲೋಚನ, "ನೋಡೊ...

# ನಮ್ಮ ಮನೆ

ಒಮ್ಮೆ ಈ ಆಗಸವನೆಲ್ಲ
ಸ್ವಚ್ಛಗೊಳಸಬೇಕಿದೆ
ಅಂಗಳವನೆಲ್ಲ ಗುಡಿಸಿ
ನೀರು ಚಿಮುಕಿಸಿ
ನೀಹಾರಿಕೆಗಳ ಎಳೆದು
ರಂಗೋಲಿ ಹಾಕಬೇಕಿದೆ
ಗೊತ್ತಿರದ ಕಾಲದಿಂದಲೇ
ತೂಗಾಡಿ ಧೂಳಿಡಿದ
ಚಿಕ್ಕೆ ಚಂದ್ರಮರ
ತಿಕ್ಕಿ ಹೊಳಪುಗೊಳಸಬೇಕಿದೆ
ಉಂಡಾಡಿಗಳಂತೆ
ತಿರುಗಾಡುತಿರುವ ಮೋಡಗಳ
ಹಿಡಿದು ಗದರಿ ಕೂಡಿಸಬೇಕಿದೆ
ಪ್ರತಿದಿನ ಇಣುಕಿ
ಕೆಲಸ ಮುಗಿಯಿತೆಂದು
ತೆಪ್ಪಗೆ ಓಡಿಹೋಗುವ
ಸೂರ್ಯನ ಹಿಡಿದು
ಎಣ್ಣೆ ನೀರಿನ ತಲೆಸ್ನಾನ
ಮಾಡಿಸಿ ನಗಿಸಬೇಕಿದೆ
ಎತ್ತೆತ್ತಲೋ ತಿರುಗಿರುವ
ಕಾಮನಬಿಲ್ಲ ಹಿಡಿದು
ಮಹಾದ್ವಾರದಂತೆ
ಅಲಂಕರಿಸಬೇಕಿದೆ

ಪಾಚಿಗಟ್ಟಿರುವ ಸಮುದ್ರದ
ಪಾತ್ರೆಯ ತೊಳೆದು
ಹೊಸ ನೀರು ತುಂಬಬೇಕಿದೆ
ಯಾವಾಗಲಿಂದಲೋ
ಧೂಳಿಡಿದಿರುವ ಭುವಿಯ
ಹಾಸನ್ನು ತೆಗೆದು ಒದರಿ
ನೀಟಾಗಿ ಹಾಸಬೇಕಿದೆ
ನದಿ, ಝರಿ, ಜಲಪಾತಗಳ
ಹೆರಳ ಬಾಚಿ ಚಂದದಿ
ಹೆಣೆದು ಸಿದ್ಧಗೊಳಸಬೇಕಿದೆ
ಕೊನೆಯಲ್ಲಿ–
ಅತ್ತಿತ್ತ ನೋಡದಂತೆ
ನೆಟ್ಟಗೆ ಓಡುವ
ಬೆಳಕಿನ ಏಳುಬಣ್ಣಗಳ
ಹಿಡಿದು ಕಾಮನಬಿಲ್ಲಿನ
ಮಹಾದ್ವಾರಕೆ
" ಇದು ನಮ್ಮ ಮನೆ "
ಎಂದು ಬರೆಯಿಸಬೇಕಿದೆ




**ಸಿದ್ಧರಾಮ ಹಿರೇಮಠ ಕೂಡ್ಲಿಗಿ**, ಬಾಪೂಜಿ ನಗರ, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ – ೫೮೩ ೧೩೫

ಜೆನ್ನಿ... ಹುಡುಗಿ ಎಷ್ಟು ಲಕ್ಷಣವಾಗಿದ್ದಾಳೆ. ಎಂ.ಎ. ಡಬ್ಬಲ್ ಡಿಗ್ರಿ ಮಾಡಿ ಕೆಲಸದಲ್ಲಿದ್ದಾಳೆ. ಇಷ್ಟಪಟ್ಟರೆ ಮದುವೆ ಆದ ಮೇಲೆ ಕೆಲಸಕ್ಕೆ ಹೋಗುತ್ತಾಳೆ. ಇಲ್ಲದಿದ್ದರೆ ಇಲ್ಲ. ಒಳ್ಳೇ ಜನ..." ಎಂದದ್ದೇ, ಜಿನೇಂದ್ರ, "ನಿಮಗ್ಯಾರು ಹೆಣ್ಣು ನೋಡೋದಿಕ್ಕೆ ಹೇಳಿದ್ದು... ನಂಗೆ... ನಂಗೆ... ಹೆಣ್ಣು ಕಂಡರೆ ಆಗೊಲ್ಲ" ಎಂದು ಕೋಪಗೊಂಡು ಕೂಗಾಡಿದ. ಅವನ ಅನಿರೀಕ್ಷಿತ ರೇಗಾಟಕ್ಕೆ ಸುಲೋಚನ ಒಮ್ಮೆ ನಡುಗಿದರು. ಅವನೆಂದೂ ಆ ರೀತಿ ಕೋಪಿಸಿಕೊಂಡವನು ಅಲ್ಲ. ಎತ್ತರದ ದನಿಯಲ್ಲಿ ಮಾತಾಡಿದವನೂ ಅಲ್ಲ.

ತೋರಿಸಿದ ಯಾವುದೇ ಹೆಣ್ಣನ್ನು ನಿರಾಕರಿಸುತ್ತ ಬಂದ ಜಿನೇಂದ್ರನ ಬದುಕು ನಿಂತ ನೀರಾಗುವುದೊ ಎಂದು, 'ಆದದ್ದು ಆಗಲಿ. ಏನು ಮಾಡೋದು, ಹಣೆಬರಹ. ಅವನಿಷ್ಟಪಟ್ಟ ಯಾವುದೇ ಹೆಣ್ಣನ್ನು ಮದುವೆ ಆಗಲಿ' ಎಂದು ಜಟ್ಟಪ್ಪನವರು ನಿರ್ಧರಿಸಿ, ಅದನ್ನೇ ಹೆಂಡತಿಗೆ ತಿಳಿಸಿದರೆ ಸುಲೋಚನ ಸುತರಾಂ ಒಪ್ಪಲಿಲ್ಲ. "ನಿಮ್ಗೇನು ತಲೆ ಕೆಟ್ಟಿದ್ಯಾ? ಯಾವಾಗ್ಲು ಕೆಲ್ಸ ಕೆಲ್ಸ ಅಂತಿರ್ತೀರ. ನಿಮ್ಗೇನ್ ಗೊತ್ತು... ಹೊರಗೆ ಎತ್ತಾಡೊ ಸಂಬಂಧಿಕರ ಬಾಯಿಗೆ ಬೀಳೊದು ನಾನು. ನಮ್ಮಲ್ಲೇನು ಹೆಣ್ಣುಗಳಿಗೆ ಬರವೇ, ನಿಮ್ ಮನೇಲು ಹೆಣ್ಣುಮಕ್ಳು ಇದ್ದಾರೆಂತ ಕೇಳೊ ಪ್ರಶ್ನೆಗೆ ಏನೆಂದು ಉತ್ತರ ಕೊಡೋದು? ಅದೆಲ್ಲ ಆಗೋ ಮಾತಲ್ಲ. ನಮ್ಮಲ್ಲೇ ಯಾರ್‌ನಾದ್ರು ಆಗ್ಲಿ" ಎಂದಳು. ಅವಳ ಮಾತಿಗೆ ಬೆಂಬಲವಾಗಿ ನಾಗೇಂದ್ರ ಬಾಂಬೊಂದು ಸಿಡಿಸಿದ. "ನೀವು ತಿಳಿದ ಹಾಗೆ ಆಕೆ ಹೆಸರು ಸಂಯಮ, ನಿಜ. ಆದರೆ ಅವ್ರು ಕ್ಯಾಥೊಲಿಕ್ ಕ್ರಿಶ್ಚಿಯನ್ನರು. ನಾನು ಖುದ್ದಾಗಿ ಇದನ್ನು ಚೆಕ್ ಮಾಡಿದ್ದೇನೆ" ಎಂದ. ದಂಪತಿಗಳಿಬ್ಬರು ಕುಸಿದುಹೋದರು.

"ಯಾಕ್ ಹೀಗ್ ಆಡಿ ನಮ್ ಹೊಟ್ಟೆ ಉರುಸ್ತಿದ್ದೀಯ? ನಿಂಗೆ ನಾವ್ ಏನ್ ಅನ್ಯಾಯ ಮಾಡಿದ್ವಿ? ಯಾವೊಳೊ ನಿಂಗೆ ಮಂಕುಬೂದಿ ಎರ್ಚಿ.. ಮದ್ವೆ ಮಾತ್ತೆತ್ತಿದರೆ ಉರಿದು ಬೀಳ್ತಿಯ! ನಿನ್ ವಯಸ್ಸವರು ಯಾರು ಮದುವೆ ಆಗಿಲ್ವೇ?" ಸುಲೋಚನ ಮಗನ ವಿಚಿತ್ರ ನಡವಳಿಕೆಯಿಂದ ರೋಸೆದ್ದು ಕಣ್ಣೀರಿಡುತ್ತ, ಸೊಸೈಟಿಗೆ ಕಳುಹಿಸಲು ನೀಟಾಗಿ ಕಟ್ಟಿ, ಜೋಡಿಸಿಟ್ಟ ಸೊಳ್ಳೆಪರದೆ ಬಂಡಲ್ಲುಗಳನ್ನು ಮನೆ ತುಂಬ ಕಿತ್ತು ಎಸೆದು, ಕೂಗಾಡಿ ರಂಪಾಟ ಮಾಡಿದರು. ಅವನು ಅಷ್ಟೇ ಶಾಂತಚಿತ್ತನಾಗಿ "ಆಯ್ತು ಬಿಡಮ್ಮ. ನಾನು ಯಾರ ತಂಟೆಗೂ ಹೋಗಲ್ಲ. ಆದ್ರೆ... ಸದ್ಯಕ್ಕೆ ಮದ್ವೆ ವಿಚಾರ ಬಿಡಿ. ಸಮಯ ಬಂದಾಗ ನಾನೇ ಹೇಳ್ತಿನಿ?" ಅಂದು, ಅಲ್ಲಿಗೆ ಆ ಅಧ್ಯಾಯ ಮುಗಿದು ಜಿನೇಂದ್ರ ತನ್ನ ಮೊದಲಿದ್ದ ದಿನಚರಿಯ ದಾರಿಗೆ ಹೊರಳಿ ಎಲ್ಲರೂ ನಿಟ್ಟುಸಿರುಬಿಡುವಂತಾಗಿತ್ತು.

ಸಂಯಮಳನ್ನೆ ಹುಡುಕಿ ಕೇಳಿದರೆ ಅವನ ಸುಳಿವು ಸಿಗಬಹುದೆಂದು, ಬ್ಯಾಂಕ್ ಮ್ಯಾನೇಜರ್ ಸಹಾಯದಿಂದ ಆಕೆ ಅಕೌಂಟೆಂಟ್ ಆಗಿ ಕೆಲಸ ಮಾಡುತ್ತಿದ್ದ ಕಂಪೆನಿಗೆ ಬಂದರೆ ಕಾಕತಾಳೀಯವೆಂಬಂತೆ ಅವಳೂ ರಾಜೀನಾಮೆ ಕೊಟ್ಟಿದ್ದಳು. ಸಾಂತ್ವನ ಹೇಳಿದ ಬ್ಯಾಂಕ್ ಮ್ಯಾನೇಜರ್ "ಸುಮ್ಮನೆ ಕೂತರೆ ಆಗದು, ಯಾವುದಕ್ಕು ಒಂದು ಪೊಲೀಸ್ ಕಂಪ್ಲೇಟ್ ಕೊಡಿ" ಅಂದರು. ಜಟ್ಟಪ್ಪ ಒಪ್ಪಲಿಲ್ಲ. "ಅವನು ಆ ರೀತಿಯ ಹುಡುಗನಲ್ಲ. ಯಾವುದೋ ತೊಂದರೆಯಲ್ಲಿ ಸಿಕ್ಕಿ ಬಿದ್ದಿದ್ದಾನೆ. ವಾಪಸ್ಸು ಬಂದೇ ಬರುತ್ತಾನೆ" ಎಂದು ತ್ರಿಕಾಲ ಜ್ಞಾನಿಯಂತೆ ನುಡಿದರು.

ಮಕ್ಕಳೆಲ್ಲರೂ ನಿದ್ರೆಗೆ ಜಾರಿದರೆ, ಗಂಡಹೆಂಡತಿಯರಿಬ್ಬರು ನಿದ್ದೆ ಬಾರದೆ ಅವನು ಬಾಗಿಲು ಬಡಿಯುವ ಶಬ್ದಕ್ಕಾಗಿ ಕಾಯ್ದರು. ವಾರ, ತಿಂಗಳುಗಳು ತಮ್ಮ ಪಾಡಿಗೆ ತಾವು ಸರಿದವು... ಎಲ್ಲಿ ಹೋದನೋ, ಅವನ ನೆರಳೂ ಮನೆಯತ್ತ ಸುಳಿಯಲಿಲ್ಲ.

ಒಂದು ಸರಿರಾತ್ರಿ. ಇದ್ದಕ್ಕಿದ್ದಂತೆ ಬಾಗಿಲು ಬಡಿದ ಹಾಗೆ ಆಯಿತು. ಇಡೀ ಮನೆಯೇ ಮಲಗಿತ್ತು. ಜಟ್ಟಪ್ಪ ಥಟ್ಟನೆ ಎದ್ದು ಕೂತರು. ನಿಧಾನವಾಗಿ ಮುಂಬಾಗಿಲ ಬಳಿ ಸಾರಿ ಕಿಟಕಿಯಲ್ಲಿ ನೋಡಿ ಭಯಗೊಂಡರು. ಕತ್ತಲಲ್ಲಿ ಜಿನೇಂದ್ರನ ಅಸ್ಪಷ್ಟ ಆಕೃತಿ ಕಾಣುತ್ತಿತ್ತು. ಕತ್ತರಿಸದೇ ಬಿಟ್ಟ ಉದ್ದ ಕೆದರಿದ ಕೂದಲು. ಬೆಳ್ಳಗೆ ಪಳಪಳ ಹೊಳೆಯುವ ಮೀಸೆ ತೆಗೆದ ಮುಖ. ಹಣೆಯ ಮೇಲೆ ಕಾಸಗಲ ಕುಂಕುಮ. ಗುರುತು ಹಿಡಿಯದ ಹಾಗೆ ವಿಲಕ್ಷಣಗೊಂಡವನನ್ನು ನೋಡಿ ಒಮ್ಮೆಲೆ ಜಟ್ಟಪ್ಪನ ಕೈಕಾಲು ನಡುಗಿದವು. ಸಾವರಿಸಿಕೊಂಡು ಅಗುಳಿ ತೆಗೆದದ್ದೇ ಬಾಗಿಲ ದೂಡಿ ಒಳ ಬಂದ ಜಿನೇಂದ್ರ, "ಅಪ್ಪಾ... ನಾ... ನಿಂಗೆ ಮೋಸ ಮಾಡಲಾರೆ... ನಾ ನಂಬಿದ ದೈವಕ್ಕೆ ವಂಚನೆ ಮಾಡಲಾರೆ. ಅಮ್ಮಾ... ಹೊಂಬುಜ ಪದ್ಮಾವತಿ... ನಿನ್ನನ್ನೇ ನಂಬಿ ಬದುಕೊಂಡೆ...." ಎಂದು ಕಾಲಿಗೆರಗಿ ಗೋಳಾಡಿದ. ಅವನ ಆವೇಶಕ್ಕೆ ಜಟ್ಟಪ್ಪನಿಗೆ ಏನೂ ಮಾಡಲು ತೋಚದೆ ಗದಗದಿಸಿದರು.

ಜಿನೇಂದ್ರ ಕೊನೆಗೂ ಬಂದನೆಂದು ಇಡೀ ಮನೆಯೇ ನಿಟ್ಟುಸಿರಿಟ್ಟರೆ, ನಾಗು ಸೂರಿಗೆ ಸಹ್ಯವಾಗಲಿಲ್ಲ. ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡು ನಂತರ ಅವಳನ್ನು ಮದುವೆಯಾಗಿ ಸಂಸಾರ ಹೂಡಿದ್ದಾನೆ. ಇದೆಲ್ಲವೂ ಅಪ್ಪ ಅಮ್ಮ ಇಬ್ಬರನ್ನು ಮೋಡಿ ಮಾಡುವ ತಂತ್ರ, ನಾಟಕ ಎಂದು ಗುಮಾನಿ ಪಟ್ಟರು.

ಮನೆಯಲ್ಲಿ ಅಸಹನೀಯ ಮೌನ. ಎಲ್ಲರದೂ ಪಿಸುದನಿಯ ಮಾತು. ಶ್ರೀನಾಥ, ತಂಗಿಯರು ಅಣ್ಣನನ್ನು ಮಾತಾಡಿಸಲು ಅಳುಕಿದರೆ, ನಾಗ ಸೂರಿಯರು ಅವನ ಮುಖ ನೋಡಲು ರೇಜಿಗೆ ಪಟ್ಟರು. ಜಟ್ಟಪ್ಪ, ಈಗಿನ್ನು ಬಂದಿದ್ದಾನೆ. ಸಾವರಿಸಿಕೊಂಡು ಅವನೇ ಮಾತಾಡುತ್ತಾನೆಂದುಕೊಂಡರೆ, ಸುಲೋಚನ ಅವನ ಹೊಲಿದ ಬಾಯಿಯನ್ನು ಬಿಡಿಸಲು ಹರಸಾಹಸ ಪಟ್ಟರು. ಆದರೆ, ತೂಕ ಮಾಡಿ ಮಾತಾಡುವ ಜಿನೇಂದ್ರನ ಮನದಲ್ಲಿ ಏನಿತ್ತೊ ಯಾರ ಅರಿವಿಗೂ ಬರಲಿಲ್ಲ.

ಸದಾ ರೂಮಲ್ಲೇ ಉಳಿದು ಹೊರಗೇ ಬಾರದೆ, ಧ್ಯಾನಸ್ಥನಾಗಿದ್ದರೂ ಮುಖದಲ್ಲಿ ಖಿನ್ನತೆ, ಹತಾಶೆ ತುಂಬಿಕೊಂಡಂತೆ ಕಂಡ ಮಗನ ಅವಸ್ಥೆಯನ್ನು ನೋಡಿ ಸುಲೋಚನ ಒಡಲಲ್ಲಿ ಬೆಂಕಿ ತುಂಬಿಕೊಂಡಳು. "ಎಲ್ಲಿಗೆ ಹೋಗಿದ್ದಿ? ಇದೇನು ನಿನ್ನ ವೇಷ?" ಎಂದು ಪರಿಪರಿಯಾಗಿ ಕೇಳಿಕೊಂಡರೂ ಅವನು ತುಟಿ ಎರಡು ಮಾಡಲಿಲ್ಲ. ದಿನಗಳೆದಂತೆ ಸುಲೋಚನಳ ಸಹನೆ ಮಿತಿ ಮೀರುತ್ತಿತ್ತು.

ತಟ್ಟೆಯಲ್ಲಿ ಊಟ ಬಡಿಸಿ ರೂಮಿಗೆ ತಂದ ಸುಲೋಚನ, "ರೂಮ್ನಲ್ಲೇ ಕೂತು ಕೂತು ಬೇಸರವಾಗೊದಿಲ್ವೆ? ಸ್ವಲ್ಪ ಹೊತ್ತು ಹೊರಗ್ ಬಾ. ಅಲ್ಲೇ ಕೂತ್ಕೊಂಡು ತಿನ್ನುವಂತೆ...." ಎಂದಳು. ಶೂನ್ಯದಲ್ಲಿ ದೃಷ್ಟಿನೆಟ್ಟು ಯಾವುದೋ ಲೋಕದಲ್ಲಿದ್ದ ಜಿನೇಂದ್ರ ಉತ್ತರಿಸಲಿಲ್ಲ. ಅದೇನಾಯಿತೊ.... ಕೈಲಿದ್ದ ತಟ್ಟೆಯನ್ನು ಟೇಬಲ್ಲಿನ ಮೇಲೆ ಕುಕ್ಕಿ "ಆಚೆಗೆ ಬಾರೊ ಅಂದ್ರೆ ಅರ್ಥವಾಗೊದಿಲ್ವ?" ಎಂದು ಅವನ ರಟ್ಟೆಯನ್ನು ಹಿಡಿದು ಹಜಾರಕ್ಕೆ ಎಳೆದು ತಂದಳು. ನೆಲದ ಮೇಲೆ ಕುಳಿತು ಬಟ್ಟೆ ಕತ್ತರಿಸುತ್ತಿದ್ದ ಜಟ್ಟಪ್ಪ, ಅನಿರೀಕ್ಷಿತ ಹೆಂಡತಿಯ ಉದ್ವೇಗ ಕಂಡು ದಿಗ್ಭ್ರಾಂತರಾದರು.

"ನಿಂಗೇನು ಮೈಮೇಲೆ ದೆವ್ವ ಮೆಟ್ಟಿದ್ಯಾ? ಅವನನ್ಯಾಕೆ ಹಾಗೆ ಎಳೆದಾಡ್ತಿಯ? ಇಷ್ಟ ಬಂದಲ್ಲಿ ಕೂತು ತಿಂತಾನೆ ಬಿಡು" ಎಂದು, ಹಿಡಿದ ರಟ್ಟೆಯ ಕಪಿಮುಷ್ಟಿಯನ್ನು ಬಿಡಿಸಲು ಹೆಣಗಾಡಿ ವಿಫಲರಾದರು. "ದೆವ್ವ ಬಂದಿರೋದು ನನಗಲ್ಲ... ನಿಮ್ ಮಗಂಗೆ. ಬಾಯಿ ಬಿಡೊ..." ಎಂದು ಭುಜ ಅಲುಗಿಸಿದರೆ ಗೋಡೆಗೆ ಒರಗಿದವನು ಹಾಗೆ ಕುಸಿದು ಕೂತ. ಅಷ್ಟೊತ್ತಿಗೆ ಮುಂಬಾಗಿಲಲ್ಲಿ ಕಂಡ ಸುರೇಂದ್ರ ಏಕಾಏಕಿ ಅಣ್ಣನ ಮೇಲೆ ಎಗರಿ ಬಿದ್ದ. "ಹಾಳಾದವನೇ.... ಯಾವೊಳ್ ಹಿಂದೆ ಹೋಗಿದ್ದಿ? ಬಿಡೊ ಬಾಯಿ.." ಎಂದು ಮುಷ್ಟಿಯಿಂದ ಹೊಟ್ಟೆಗೆ ಗುದ್ದಿದ. "ಅಣ್ಣಯ್ಯನ ಬಿಡ್ರಿ... ಹೊಡಿಬೇಡ್ರಿ..." ಎಂದು ತಂಗಿಯರು ಗೊಳೊ ಎಂದು ಅಳಲು ಆರಂಭಿಸಿ ಅವನನ್ನು ಬಿಡಿಸಲು ಹೆದರಿದರು. ಜಿನೇಂದ್ರ ಪಕ್ಕೆಯನ್ನು ಹಿಡಿದುಕೊಂಡು, ಕಣ್ಣಲ್ಲಿ ಬಳಬಳನೆ ಕಣ್ಣೀರು ಸುರಿಸುತ್ತ, 'ತಾಳಿ... ತಾಳಿ...' ಎಂದೇನೊ ಹೇಳಲು ಪ್ರಯತ್ನಿಸಿದ. ಸಿಟ್ಟಿಗೆದ್ದ ಶ್ರೀನಾಥ, "ನಿಲ್ಲಿಸಿ... ಅಣ್ಣನಿಗೆ ಮಾತ್ನಾಡಲು ಬಿಡಿ" ಎಂದು ಕೂಗುತ್ತಿದ್ದರೆ, ಕುಳಿತವನ ಕಂಕುಳೊಳಗೆ ಕೈಹಾಕಿ ಅನಾಮತ್ತಾಗಿ ಎತ್ತಿ ನಿಲ್ಲಿಸಿ, ಕುತ್ತಿಗೆಗೆ ಕೈಹಾಕಿ, "ನಡಿಯೊ.... ಜಾತಿ ಭ್ರಷ್ಟ.... ನಮ್ಮನೇಲಿ ಇರಬೇಡ" ಎಂದು ನಾಗೇಂದ್ರ ದಬ್ಬಿದ ರಭಸಕ್ಕೆ ಬಿಡಿಸಲು ಬಂದ ಶ್ರೀನಾಥ, ಜಟ್ಟಪ್ಪ ಮಕ್ಕಳ ಮೇಲೆ ಬಿದ್ದರು. ಹಜಾರದಲ್ಲಿಟ್ಟಿದ್ದ ಬಟ್ಟೆಬರೆ, ಸಾಮಾನುಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಹರಡಿ ಇಡೀ ಮನೆ ಎಳೆದಾಟ, ಗೋಳಾಟ, ರೋಷಾವೇಶ ಕರುಣೆಯ ಜಗಳದಲ್ಲಿ ರಣರಂಗವಾಯಿತು. ಕ್ಷಣಮಾತ್ರದಲ್ಲಿ ಕಣ್ಣೆದುರೇ ನಡೆಯುತ್ತಿದ್ದ ಅನಾಹುತದ ಅರಿವಾಗಿ, ಕೊಡವಿಕೊಂಡು ಎದ್ದ ಜಟ್ಟಪ್ಪ, ಸುರೇಂದ್ರ ನಾಗೇಂದ್ರರ ಕೆನ್ನೆಗೆ ಬಾರಿಸಿದರು. ಅಲ್ಲಿಗೆ ಜಡಿಮಳೆ ನಿಂತ ಹಾಗಾಯಿತು.

ಗುಹೆಯಂಥ ಕಗ್ಗತ್ತಲು ತುಂಬಿದ ಕೋಣೆ. ಹೊರಚಾಚಿದ ಕೆಂಪು ನಾಲಿಗೆ, ಬಿರುಗಣ್ಣು ಬಿಟ್ಟ ದೆವ್ವದಂಥ ಹೆಣ್ಣುದೇವರ ಮುಂದೆ ಒಡೆದ ಕುಂಬಳಕಾಯಿ, ಜಜ್ಜಿದ ನಿಂಬೆಹಣ್ಣುಗಳ ರಾಶಿ. ಎಲ್ಲೆಲ್ಲೂ ಅರಿಶಿನ ಕುಂಕುಮದ ಎರೆಚಾಟ. ಭೂಮಿ ಆಕಾಶ ಒಂದು ಮಾಡುವಂಥ ಹುಚ್ಚು ಕುಣಿತ... ಕೇಕೆ... ಕಿವಿ ತಮಟೆ ಹರಿಯುವಂತೆ ಚಪ್ಪಾಳೆ... ಧಗಧಗನೆ ಉರಿವ ಕರ್ಪೂರದ ಉಂಡೆಗಳು... ಎದುರುಗಿದ್ದವರು ಕಾಣದ ಅಗರಬತ್ತಿಯ ದಟ್ಟಹೊಗೆ.... ಹೋಮ. ನೀರು, ಅನ್ನ ಕಾಣದ ಬೆನ್ನಿಗಂಟಿದ ಹೊಟ್ಟೆ... ಉಸಿರುಗಟ್ಟಿ.... ಇನ್ನೇನು ಎದೆಗೂಡು ಒಡೆದು ಚೂರಾಗುತ್ತದೆ ಎಂಬಂಥ ಕೆಮ್ಮು... ಬೆತ್ತಲೇ ನಿಂತವನಿಗೆ ಯಾರೋ ಜೋರಾಗಿ ಜಾಡಿಸಿ ಒದ್ದರು. ಮೂಲೆಗ್ಹೋಗಿ ಬಿದ್ದ. ಮತ್ಯಾರೊ ಚಪ್ಪಾಳೆ ತಟ್ಟುತ್ತ, ಗಡಸು ಗಂಟಲಿಂದ

ವಿಚಿತ್ರವಾದ ಮಂತ್ರ ಕೂಗುತ್ತ ಸುತ್ತಲೂ ಗಿರಕಿ ಹೊಡೆದು ಬೀಸಿದ ಚಾಟಿಗೆ 'ಅಯ್ಯೋ... ಅಮ್ಮಾ...'. ಕಿವಿಯಲ್ಲಿ ಧ್ವನಿ ಪ್ರತಿಧ್ವನಿಯಾಯಿತು. ಎದ್ದು ಕುಳಿತ ಜಿನೇಂದ್ರ ಬೆವತುಹೋಗಿದ್ದ. ಕತ್ತಲಲ್ಲಿ ಮೈಮೇಲೆಲ್ಲ ಕೈ ಆಡಿಸಿ ನೋಡಿದ. ಮಾಗಿದ ಬರೆಗಳು ಕೈ ಬೆರಳುಗಳಿಗೆ ಚರ್ಮದ ಉಬ್ಬುತಗ್ಗುಗಳಲ್ಲಿ ಗೋಚರಿಸಿತು. ದೇಹಕ್ಕೆ ಆದ ಗಾಯ ಮಾಸಿದೆ. ಆದರೆ, ಮನೆಯಲ್ಲಾದ ಅಪಮಾನ ಎದೆಯೊಳಗೆ ಮಾಯದ ಗಾಯದ ಗೀರಾಗಿದೆ. ಸೊಳ್ಳೆಪರದೆ ಕಟ್ಟಿದರೆ ರೋಗ ತರುವ ಕೀಟಗಳಿಂದ ಉಳಿಯಬಹುದು. ಪ್ರಕೃತಿ ಮಾಡಿದ ದೈಹಿಕ, ಮಾನಸಿಕ ಯಡವಟ್ಟುಗಳಿಗೆ ಪರದೆ ಕಟ್ಟುವವರಾರು? ತುರುಬು ಕಟ್ಟಿ ಮಂಚದಿಂದ ಎದ್ದವನು, ಮನೆಯಿಂದ ಹೊರಬಿದ್ದ. ಮತ್ತೆ ಯಾರಿಗೂ ಕಾಣಿಸದೆ ಮಾಯವಾದ. ಅವನು ಬರುತ್ತಾನೆಂಬ ನಿರೀಕ್ಷೆಯಲ್ಲಿ ಸಂಜೆಯಾಗುತ್ತ, ಮನೆ 'ಸಂಭ್ರಮ'ದಲ್ಲಿ ಮತ್ತೆ ನಿರಾಶೆಯ ಕಾರ್ಮೋಡ ಕವಿಯುತ್ತಿರುವಲ್ಲಿ.... ಮನೆಯ ಮುಂದೆ ಕಾರೊಂದು ನಿಂತು ಮೊದಲಿಗೆ ಹೆಣ್ಣೊಬ್ಬಳು ಆರೇಳು ವರ್ಷದ ಮಗುವೊಂದನ್ನು ಇಳಿಸಿ ಕೆಳಗಿಳಿದಳು. ಜಟ್ಟಪ್ಪನ ಮನೆಮಂದಿಗೆ ತತ್‌ಕ್ಷಣಕ್ಕೆ ಯಾರೆಂದು ತಿಳಿಯಲಿಲ್ಲ. ಹತ್ತಿರ ಬಂದಂತೆ ಸಂಯಮ ಎಂದು ತಿಳಿಯಿತು. ಸೂಟುಬೂಟು ತೊಟ್ಟು ಹಿಂದೆಯೇ ಬಂದವನು ಜಿನೇಂದ್ರನೆಂದು ತಿಳಿಯಲು ಬಹಳ ಸಮಯ ಹಿಡಿಯಲಿಲ್ಲ.




ಎಲ್ಲರ ಮುಖದಲ್ಲೂ ಎಂಥದೋ ನಿರಾಳತೆ, ಮಂದಹಾಸ. ಸುಲೋಚನ ಮಾತ್ರ ಕಣ್ಣೀರು ಹಾಕುತ್ತ ಪಾಪಪ್ರಜ್ಞೆ ಹೊತ್ತವರಂತೆ ಸೆರಗಿನ ತುದಿಯನ್ನು ಬಾಯಿಗಿಡಿದು ಹಿಂದೆ ನಿಂತಿದ್ದರು. ಮುಂಬಾಗಿಲ ಬಳಿಯೇ ಸ್ತಂಭೀಭೂತರಾಗಿ ನೆರೆದವರಲ್ಲಿ ಎಚ್ಚೆತ್ತ ಶ್ರೀನಾಥ "ಬನ್ನಿ ಅತ್ತಿಗೆ... ಒಳ ಬನ್ನಿ" ಎಂದು ಸ್ವಾಗತಿಸಿದ. ಸಂಯಮ ಪುಸಕ್ಕೆಂದು ನಕ್ಕು "ಯಾರಪ್ಪ ಅತ್ತಿಗೆ?" ಅಂದಳು. ಅಣ್ಣಯ್ಯನೆಂದು ಕರೆಯಲು ಹೇಸಿಗೆ ಪಟ್ಟು ಹಾಳಾದವನು ಎಂದು ಹೆಸರಿಟ್ಟು ಮನೆಯಿಂದ ಆಚೆ ತಳ್ಳಲು ಅವಸರದಲ್ಲಿದ್ದವರು ಈಗ ಅಪ್ಪಿಕೊಳ್ಳಲು ಉತ್ಸುಕರಾದಂತೆ ತೋರಿತು.

"ಬಹುಶಃ... ನೀವೆಲ್ಲರೂ ತಿಳಿದ ಹಾಗೆ.... ನಾನು ಜಿನ್ನಿಯನ್ನು ಮದುವೆ ಆಗಿಲ್ಲ. ನನ್ನ ಹಸ್ಬೆಂಡು ವಿನ್ಸೆಂಟ್ ಅಂತ. ಸಾಫ್ಟ್‌ವೇರ್ ಕಂಪನಿ ಸಿಇಒ. ಇವಳು ಮಗಳು ಅಮೂಲ್ಯ. ಜಿನ್ನಿಯಂತ, ಒಳ್ಳೆಯವರನ್ನು ಇಷ್ಟಪಟ್ಟಿದ್ದು, ಪ್ರೀತಿಸಿದ್ದು ನಿಜ. ಹಾಗೆ ಮದುವೆಗೆ ಪ್ರಪೋಸ್ ಮಾಡಿದ್ದೂ ಹೌದು. ನನ್ನನ್ನು ಮದುವೆಯಾಗಿ ಮೋಸ ಮಾಡಬಹುದಿತ್ತು. ಆದರೆ, ಆತನದು ಕಪಟವಿಲ್ಲದ ಮಗುವಿನ ಮನಸ್ಸು. ತನ್ನ ಮನದಲ್ಲಿ ಅವಿತಿಟ್ಟ ಯಾರಲ್ಲೂ ಹೇಳಿಕೊಳ್ಳಲಾರದ ಭಾವನೆಗಳನ್ನು ಹಂಚಿಕೊಳ್ಳುವ ಗೆಳತಿಯಾಗಿ ಅಷ್ಟೆ ನನ್ನನ್ನು ಕಂಡರು. ನಾವುಗಳು ಈಗಲೂ ಭೇಟಿಯಾಗುತ್ತಿರುತ್ತೇವೆ. ನಮ್ಮ ನಡುವೆ ಗೋಡೆಗಳಿಲ್ಲ" ಕಾಫಿ ಹೀರುತ್ತ ಸಂಯಮ ಅಷ್ಟು ಹೇಳಿ ಸುಮ್ಮನಾದಳು.

ಜಿನೇಂದ್ರ ಎದ್ದು ಅಮ್ಮನ ಕಾಲಿಗೆ ಎರಗಿ ಅಪ್ಪಿಕೊಂಡು, "ನನ್ನನ್ನು ಕ್ಷಮಿಸಮ್ಮ. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ನಿಮಗೆಲ್ಲ ಬಹಳ ನೋವು ಕೊಟ್ಟೆ" ಎಂದು ಹೇಳಿ, ಲಕೋಟೆಯೊಂದನ್ನು ಅವರ ಕೈಗಿಟ್ಟು ಒಮ್ಮೆ ಎಲ್ಲರಿಗೂ ಕೈಮುಗಿದು ಕಣ್ಣೀರು ಒರೆಸಿಕೊಳ್ಳುತ್ತ ಹೊರನಡೆದ. ಸಂಯಮ ಅವನನ್ನು ಹಿಂಬಾಲಿಸಿದಳು.

ಉಕ್ಕಿ ಬಂದ ಕಣ್ಣೀರು, ಗಂಟಲು ಕಟ್ಟಿ 'ಹೋಗ್ಬೇಡ ನಿಲ್ಲೊ' ಎಂಬ ಮಾತು ಸುಲೋಚನ ಗಂಟಲಲ್ಲೇ ಹುದುಗಿಹೋಯಿತು. ನಡುಗುವ ಕೈಗಳಲ್ಲಿ ಪತ್ರ ಬಿಡಿಸುವಾಗ ಧಾರಾಕಾರವಾಗಿ ಹರಿದ ಕಣ್ಣೀರು ಪತ್ರವನ್ನು ತೋಯಿಸಿತು:

ಪ್ರೀತಿಯ ಅಮ್ಮ,

ದಯವಿಟ್ಟು ನನ್ನನ್ನು ಕ್ಷಮಿಸು. ಇಷ್ಟು ದಿನ ನಿಮ್ಮನ್ನು ಬಿಟ್ಟಿದ್ದಕ್ಕೆ ನಿಮಗಿಂತ ಹೆಚ್ಚು ನಾನೇ ನೋವು ತಿಂದಿದ್ದೇನೆ. ಅಪ್ಪ ತೀರಿಕೊಂಡದ್ದು ತಡವಾಗಿ ತಿಳಿದು, ಕೊನೆಯ ಬಾರಿ ಅವರ ಮುಖವನ್ನೂ ನೋಡಲಾಗಲಿಲ್ಲ. ಆಗಿದ್ದರಲ್ಲಿ ನನ್ನ ತಪ್ಪೇನೂ ಇಲ್ಲ, ಹಾಗೆ ನಿಮ್ಮದು. ಹುಟ್ಟಿದಂದಿನಿಂದ ಎಲ್ಲರೂ ಮಕ್ಕಳನ್ನು ಬೆಳೆಸುವಂತೆ ನನ್ನನ್ನು ಹೆಚ್ಚು ಮುದ್ದಾಗಿ ಸಾಕಿದಿರಿ. ಏನು ಮಾಡುವುದು? ಯಾರನ್ನು ದೂರುವುದು? ನಾನು ನಂಬಿದ ದೇವರನ್ನೇ ಅಥವಾ ಪ್ರಕೃತಿಯ ವೈಚಿತ್ರ್ಯವೆಂದು ಅನ್ನಲೋ ತಿಳಿಯುತ್ತಿಲ್ಲ. ಇದನ್ನು.... ಇಷ್ಟು ಸಂಕಷ್ಟಗಳನ್ನು ದಾಟಿ ಬಂದರೂ ಪತ್ರಮುಖೇನ ಕೂಡ ತಿಳಿಸಲು ಕಷ್ಟವಾಗುತ್ತಿದೆ.

ನಾನು ನಿಮ್ಮಲ್ಲಿ ಆಗಾಗ್ಗೆ ಹೇಳುತ್ತಿದ್ದೆ. ನನಗೆ ಹೆಣ್ಣುಗಳೆಂದರೆ ಆಗುವುದಿಲ್ಲವೆಂದು. ಅದಕ್ಕೆ ಕಾರಣ – ಎಲ್ಲಾ ಗಂಡುಮಕ್ಕಳು ಯೌವನಾವಸ್ಥೆಯಲ್ಲಿ ಹೆಣ್ಣೊಂದನ್ನು ಬಯಸುವಂತೆ ನನ್ನಲ್ಲಿ ಭಾವನೆಗಳು ಬರುತ್ತಿರಲಿಲ್ಲ. ಬದಲಾಗಿ ಕೆಲವು ಗಂಡುಗಳನ್ನು ನೋಡಿದರೆ ಅವರನ್ನು ಅನುಭವಿಸುವ ಆಸೆ ಯಾಗುತ್ತಿತ್ತು. ಅದೇಕೆ ನನಗೆ ಹಾಗೆ ಆಗುತ್ತಿತ್ತು ತಿಳಿಯುತ್ತಿರಲಿಲ್ಲ. ಹಾಗೆಂದುಕೊಂಡ ಕ್ಷಣದಲ್ಲೇ ಪಾಪಪ್ರಜ್ಞೆಯಿಂದ ನರಳಿ ಹೋಗುತ್ತಿದ್ದೆ. ಯಾರಲ್ಲಿ ಹೇಗೆ ಈ ಭಾವನೆಗಳ ವಿಲಕ್ಷಣ ತಾಕಲಾಟವನ್ನು ಹೇಳಿಕೊಳ್ಳುವುದು. ಈ ಸಮಾಜದಲ್ಲಿ ಅದು ಸಾಧ್ಯ ವಿರಲಿಲ್ಲ. ನಾನು ಮನೆ ಬಿಟ್ಟದ್ದು ಇದೇ ಕಾರಣಕ್ಕೆ, ಮರಳಿ ಬಂದದ್ದು ಅದೇ ಪಾಪಪ್ರಜ್ಞೆಯಿಂದಲೇ.

ಮೊದಲೇ ನನ್ನೆಲ್ಲ ಮಾನಸಿಕ ತುಮುಲವನ್ನು ನಿಮ್ಮಲ್ಲಿ ತಿಳಿಸಿದ್ದರೆ.... ನೀವು ಅದನ್ನು ಸಾವಧಾನ ವಾಗಿ ಆಲಿಸಿ ಒಪ್ಪಿಕೊಂಡಿದ್ದರೆ ಬಹುಶಃ ನಾನು ಮನೆ ಬಿಟ್ಟು ಬರುತ್ತಿರಲಿಲ್ಲ ಎನಿಸುತ್ತದೆ. ಆದದ್ದು ಆಯಿತು. ಇದೇ ಜಿಜ್ಞಾಸೆಯಲ್ಲಿ, ನನ್ನಿಂದ ಬೇರೆ ಹೆಣ್ಣುಮಕ್ಕಳ ಬಾಳು ಹಾಳಾಗಬಾರದು. ಆದ್ದರಿಂದ ಮದುವೆ ವಿಚಾರದಿಂದ ದೂರ ಉಳಿದಿದ್ದೇನೆ. ನಿರಾಳನಾಗಿದ್ದೇನೆ.

ಆ ದಿನ ಮನೆಯಲ್ಲಿ ನೀವುಗಳು ನನ್ನ ನಡೆಸಿಕೊಂಡ ರೀತಿ ನನ್ನನ್ನು ಆತ್ಮಹತ್ಯೆಗೂ ಪ್ರಯತ್ನಿಸುವಂತೆ ಮಾಡಿತು. ಆಕಸ್ಮಿಕವಾಗಿ ಸಿಕ್ಕ ಸಂಯಮಳ ಬದುಕಿನ ಪ್ರೀತಿಯ ಸಾಂತ್ವನ ಮಾತುಗಳಿಂದಾಗಿ ನಾನು ಬದುಕಿದೆ. ಅವಳೇ ನನ್ನನ್ನು ಮನೋವೈದ್ಯರಿಗೆ ತೋರಿಸಿದಳು.

ವೈದ್ಯರು – ಇದು ಅಸಹಜ ಹೌದಾದರೂ ಅವಾಸ್ತವವಲ್ಲ. ಪುರಾಣಕಾಲ ದಿಂದಲೂ ಇಂಥ ಉದಾಹರಣೆಗಳು ಇವೆಯೆಂದು ಹರಿ ಹರ ಸೇರಿದ ಕತೆ ಹೇಳಿದರು. ನನ್ನಂಥವರನ್ನು ಸಲಿಂಗಿ ಅಥವಾ ದ್ವಿಲಿಂಗಿಯಾಗಿ ಹೆಸರಿಸಲು ಸಾಧ್ಯವಿಲ್ಲದ ಸಂಕೀರ್ಣ ವ್ಯಕ್ತಿತ್ವವೆಂದು, ನಮಗೂ ಬದುಕುವ ಹಕ್ಕು ಇದೆಯೆಂದು ಧೈರ್ಯ ತುಂಬಿದರು.

ನಂತರ, ಕೆಲಸ ಕಳೆದುಕೊಂಡು ಹುಚ್ಚನಂತೆ ಅಲೆದೆ. ಮತ್ತೆ ಪರೀಕ್ಷೆ ಬರೆದೆ. ಹೊಸ ಬ್ಯಾಂಕಿನಲ್ಲಿ ನೌಕರಿ ಹಿಡಿದೆ. ಬದುಕಲ್ಲಿ ಸಂಯಮಳಂಥ ಒಡನಾಡಿ ಸಿಕ್ಕಿಲ್ಲವಾಗಿದ್ದರೆ, ನನ್ನಂಥ ನತದೃಷ್ಟರು ಫುಟ್ ಪಾತ್ನಲ್ಲಿ, ಸಿಗ್ನಲಲ್ಲಿ ಕಾಣುವ ಹಾಗೆ ನಾನು ಕೂಡ ಚಪ್ಪಾಳೆ ತಟ್ಟುತ್ತ ಭಿಕ್ಷೆ ಬೇಡುತ್ತಿದ್ದೆನೊ.... ಏನೋ. ಸದ್ಯ... ಹಾಗಾಗಲಿಲ್ಲ. ಈಗ ಬ್ಯಾಂಕಿನ ಸೀನಿಯರ್ ಮ್ಯಾನೇಜರ್ ಆಗಿದ್ದೇನೆ.

ಎಲ್ಲಕ್ಕೂ ಮುಖ್ಯವಾಗಿ ಲಾಯರ್ ನೋಟಿಸು ಕಳುಹಿಸಿದ್ದು ಆಸ್ತಿಯ ಆಸೆಗಲ್ಲ. ನನ್ನದಲ್ಲದ ತಪ್ಪಿಗೆ ನಾನು ಮನೆ ಬಿಡಬೇಕಾಯಿತು. ನನಗೆ ಅಸ್ತಿತ್ವವೇ ಇಲ್ಲವಾಯಿತು. ನನ್ನ ಇರುವಿಕೆಯನ್ನು ನಿಮಗೆ ತಿಳಿಸಬೇಕಿತ್ತು. ಅದಕ್ಕೆ ಹಾಗೆ ಮಾಡಿದೆ.

ಅಮ್ಮ... ಮತ್ತೊಮ್ಮೆ ಕ್ಷಮೆ ಇರಲಿ. ನೀನು ಯಾವಾಗ, ಯಾವುದಕ್ಕೆ ಕರೆದರೂ ಬರುತ್ತೇನೆ. ನಿನ್ನ ಮಡಿಲಲ್ಲಿ ಇರುತ್ತೇನೆ... ಅದೇ ನನಗೆ ಸುಖ.

ಇಂತಿ ನಿನ್ನ ಪ್ರೀತಿಯ ಮಗ,

ಜಿನೇಂದ್ರ

– ಎಂದು ಬರೆದ ಪತ್ರದಲ್ಲಿ ಕೊನೆಯಲ್ಲಿ ಬರೆದ ಮಗ ಎಂಬ ಅಕ್ಷರಗಳಿಗೆ ಕಾಟು ಹಾಕಿತ್ತು.

**ಚಂದ್ರಪ್ರಭ ಕಠಾರಿ**
ನಲುಮೆ – ನಂ. ೬೬೦, ೮ನೇ 'ಸಿ' ಮೇನ್, ೧ನೇ ಬ್ಲಾಕ್, ೩ನೇ ಸ್ಟೇಜ್, ಮಂಜುನಾಥ ನಗರ, ವೆಸ್ಟ್ ಆಫ್ ಕಾರ್ಡ್ ರೋಡ್, ಬಸವೇಶ್ವರನಗರ, ಬೆಂಗಳೂರು – ೫೬೦ ೦೧೦.




## ಕಣ್ಣ ಭಾಷೆ

ಜ್ಯೋತಿ ಗುರುಪ್ರಸಾದ್

**ಪುಟ : ೧೧೪** | **ಬೆಲೆ : ರೂ. ೧೬೦**

**ಹೊಸ ಸಂಜೆ ಪ್ರಕಾಶನ,** ಕಾರ್ಕಳ

*ಕಾರ್ಕಳದ ಜ್ಯೋತಿ ಗುರುಪ್ರಸಾದ್ ಅವರ ಈ ಪುಸ್ತಕ ಈಗಾಗಲೇ ತುಮಕೂರಿನ ಕೈ ಬರೆಹದ 'ಶೈನಾ' ಪತ್ರಿಕೆಯಲ್ಲಿ ಅಂಕಣವಾಗಿ ಪ್ರಕಟಗೊಂಡ ಕಿರುಲೇಖನಗಳ ಸಂಗ್ರಹ. ಇದೊಂದು ಸಾಹಿತ್ಯ ಲೋಕದಲ್ಲಿ ಹೊಸಪ್ರಯೋಗ. ಕನ್ನಡದ ವರ್ಣಮಾಲೆಯ ಅಕ್ಷರಗಳನ್ನಿಟ್ಟುಕೊಂಡು ವಿವಿಧ ವಿಷಯಗಳನ್ನು ಕುರಿತಾಗಿ ಸರಳವಾಗಿ ಮತ್ತು ಕಾವ್ಯಾತ್ಮಕವಾಗಿ ರಚಿಸಲಾದ ಬರಹವಿದು. 'ಕಣ್ಣ ಭಾಷೆ'ಯೆಂಬ ಅರ್ಥಪೂರ್ಣವಾದ ಶೀರ್ಷಿಕೆಯನ್ನು ಹೊತ್ತ ಈ ಪುಸ್ತಕದಲ್ಲಿ 'ಅ' ಅಕ್ಷರದಿಂದ 'ಳ' ಅಕ್ಷರದವರೆಗೆ ಎಲ್ಲ ಅಕ್ಷರಕ್ಕೂ ಅನ್ವಯಿಸುವಂತೆ ಒಂದು ವಿಷಯವನ್ನು ಆಯ್ದುಕೊಂಡು, ಪ್ರತಿಯೊಂದು ಅಕ್ಷರಕ್ಕೂ ಹೊಸ ಹೊಳಹುಗಳನ್ನು ಕೊಡುತ್ತಾ, ಅದನ್ನು ವಿಸ್ತಾರವಾದ ನೆಲೆಯಲ್ಲಿ ಕಾಣುವ ಪ್ರಯತ್ನ ಇದೆ. ಕೆಲವು ಅಪರೂಪವಾಗಿ ಬಳಸುವ ಅಕ್ಷರಗಳನ್ನು ಕುರಿತು ಬರೆಯುವಾಗ ಆ ಪದಗಳಿಂದ ಹುಟ್ಟುವ ಅರ್ಥವ್ಯಾಪ್ತಿ ಓದುಗರನ್ನು ಚಿಂತಿಸುವಂತೆ ಮಾಡುತ್ತದೆ. ಉದಾಹರಣೆಗೆ 'ಠ', 'ಢ' ಮತ್ತು 'ಷ' ಇತ್ಯಾದಿ. ಕನ್ನಡಿಗರು ಕನ್ನಡದ ಕಿಟಕಿಯಿಂದ ಜಗತ್ತನ್ನು ನೋಡಬೇಕೆಂಬ ತಿಳುವಳಿಕೆಯನ್ನು ವ್ಯಕ್ತಪಡಿಸುವ ಇಲ್ಲಿನ ಲೇಖನ ಇಂದಿನ ಸಮಕಾಲೀನ ಅಗತ್ಯವನ್ನು ಕುರಿತು ಮಾತನಾಡುತ್ತದೆ. "ಪ್ರತಿಯೊಂದು ಶಬ್ದಗಳ ವಿವರಣೆಯಲ್ಲಿ ವೈಯಾಕರಣಿಯ ಶಿಸ್ತು, ಭಾಷಾವಿಜ್ಞಾನಿಯ ಕ್ರಿಯಾಶೀಲತೆ, ಕವಿಯ ಸೃಜನಶೀಲತೆ, ದಾರ್ಶನಿಕ ಚಿಂತನೆ, ಸಮಾಜ ವಿಜ್ಞಾನಿಯ ಹೊರನೋಟ, ಸಾಂಸ್ಕೃತಿಕ ಮಾನವ ಶಾಸ್ತ್ರಜ್ಞನ ಒಳನೋಟ ಮತ್ತು ಜನಪದರ ಕುತೂಹಲ ಹಾಸುಹೊಕ್ಕಾಗಿದೆ" ಎಂದು ಮುನ್ನುಡಿಯಲ್ಲಿ ಹೇಳಿರುವ ಕವಿ ರಂಜಾನ್ ದರ್ಗಾ ಅವರ ಮಾತುಗಳು ಈ ಪುಸ್ತಕದ ಒಟ್ಟಂದವನ್ನು ಸಂಕ್ಷಿಪ್ತವಾಗಿ ಹೇಳಿದೆ. ಕಣ್ಣ ಭಾಷೆ ಇಲ್ಲಿ ಹೃದಯದ ಭಾಷೆಯೂ, ಹಾಗೆಯೇ ಮೆದುಳಿನ ಭಾಷೆಯೂ ಆಗಿರುವುದು ಈ ಕೃತಿಯ ವಿಶೇಷ.*




## ಜಟಾಯು ಪಕ್ಷಿಗೆ ಶ್ರದ್ಧಾಂಜಲಿ

ಜ್ಯೋತಿ ಗುರುಪ್ರಸಾದ್

**ಪುಟ : ೧೯೦**

**ಬೆಲೆ : ರೂ. ೧೬೦**

**ಸೃಷ್ಟಿ ಇಂಪ್ರಿಂಟ್ಸ್,** ಬೆಂಗಳೂರು

*ಕಳೆದ ಎರಡು ದಶಕಗಳಿಂದ ಕವಯಿತ್ರಿಯಾಗಿ, ಅಂಕಣ ಕಾರ್ತಿಯಾಗಿ ಮತ್ತು ಅಧ್ಯಾಪಕಿಯಾಗಿಯೂ ಅನುಭವವಿರುವ ಲೇಖಕಿ ಜ್ಯೋತಿ ಗುರುಪ್ರಸಾದ್ ಅವರ "ಜಟಾಯು ಪಕ್ಷಿಗೆ ಶ್ರದ್ಧಾಂಜಲಿ" ಹಲವು ನೆಲೆಯಿಂದ ಗಮನಿಸಬೇಕಾದ ಕೃತಿ. ಕನ್ನಡದ ಹಲವಾರು ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿರುವ ಕವನಗಳ ಸಂಕಲನವಾದ ಈ ಕೃತಿಗೆ ಕಾಂತಾವರ ಕನ್ನಡ ಸಂಘದ ೨೦೧೭ರ ಮುದ್ದಣ ಕಾವ್ಯ ಪ್ರಶಸ್ತಿಯೂ ಸಂದಿದೆ. ೧೮೪ ಕವನಗಳುಳ್ಳ ಈ ಕವನ ಸಂಕಲನ ಶೀರ್ಷಿಕೆಯಲ್ಲಿ ಶ್ರದ್ಧಾಂಜಲಿಯನ್ನು ಸೂಚಿಸುವ ಭಾವವನ್ನು ಹೊತ್ತಿದ್ದರೂ ಅದರ ಅರ್ಥವ್ಯಾಪ್ತಿ ಬದುಕಿಗೇ ವಂದನೆಗಳನ್ನು ಅರ್ಪಿಸುವ ನೆಲೆಗೆ ವ್ಯಾಪಿಸುತ್ತದೆ. ಇಲ್ಲಿನ ಬಹುಪಾಲು ಕವನಗಳು ಪ್ರಕಟಿಸುವ ಜೀವನದ ಹಲವು ಆಯಾಮಗಳು ಮತ್ತು ಜೀವಪರ ನಿಲುವು ಇವರ ಕಾವ್ಯದ ಮುಖ್ಯ ನಿಲುವಾಗಿದೆ. ಇದಕ್ಕೆ ಇವರ 'ಜೀವನ ಸಂಗಾತಿ' ಎಂಬ ಕವನ ಸಂಕಲದ ಕೆಲವು ಸಾಲುಗಳನ್ನು ನೋಡಬಹುದು.*

*ಎಲ್ಲವೂ ನಾನು ನಾನೇ ಆಗಿ
ನೀನು ನೀನೇ ಆಗಿ ಒಂದಾಗಿ
ನಿರ್ಭಯದ ಉಸಿರಾಟ ನಡೆದು
ಅಹಂಕಾರದ ಕಾಳಿಕೆ ಕಳೆದು
ಸ್ಪರ್ಷದ ಒಲುಮೆ ಮುತ್ತಲ್ಲಿ
ಹೃದಯದಾಳದ ಆಲಿಂಗನದಲ್ಲಿ
ಜೀವನವಿಡೀ ನನ್ನ ಪ್ರೀತಿಸುತ್ತ ನೀನು
ನಂಬಿಕೆಯ ಪಥದ ಮೇಲೆ ನನ್ನಂತೆ
ಹೆಜ್ಜೆಯಿರಿಸುವಿಯಾದರೆ ಮಾತ್ರ
ನಾವು ಜೀವನ ಸಂಗಾತಿಗಳು*

*ಇವರ ಕವನಗಳ ಮೂಲಸೆಲೆ ಜೀವಪ್ರೀತಿಯಾಗಿದೆ. ಅದು ಗಂಡು – ಹೆಣ್ಣಿನ ಸಂಬಂಧವಿರಲಿ, ತಾಯಿ–ಮಗುವಿನ ಸಂಬಂಧವಿರಲಿ ಬದುಕನ್ನು ಗಾಢವಾಗಿ ಅಪ್ಪಿಕೊಳ್ಳುತ್ತಲೇ ಮಲ್ಲಿಗೆಯ ಘಮದಂತೆ ಪ್ರೀತಿಯ ತಂಗಾಳಿಯನ್ನು ಈ ಸಂಕಲನದ ಕವನಗಳು ಪಸರಿಸುವುದರಲ್ಲೇ ಈ ಕೃತಿಯ ಸಾರ್ಥಕತೆ ಮೆರೆದಿದೆ.*




## ನಿರ್ದಿಗಂತವಾಗಿ ಏರಿ

ಸುಭಾಷ್ ರಾಜಮಾನೆ

**ಪುಟ : ೩೦೦** | **ಬೆಲೆ : ರೂ. ೨೪೫**

**ವಂಶಿ ಪಬ್ಲಿಕೇಷನ್ಸ್,** ನೆಲಮಂಗಲ, ಬೆಂಗಳೂರು

*ಕನ್ನಡ ಅಧ್ಯಾಪಕರಾದ ಸುಭಾಷ್ ರಾಜಮಾನೆಯವರು ಅವರ ಡಾಕ್ಟರೇಟ್ ಪದವಿಗೆಂದು ಬರೆದ ಮಹಾಪ್ರಬಂಧದ ಪರಿಷ್ಕೃತ ರೂಪವಿದು. 'ಕನ್ನಡ ವಿಮರ್ಶೆಯಲ್ಲಿ ಜಾತಿ ಪ್ರಶ್ನೆಯ ಆಯಾಮಗಳು'ಎಂಬ ಶೀರ್ಷಿಕೆಯಡಿ ನಡೆಸಿದ ಅಧ್ಯಯನದ ಫಲಿತ ಈ ಕೃತಿ. ಕನ್ನಡ ಕಾದಂಬರಿ ಪರಂಪರೆಯಲ್ಲಿ ಜಾತಿ ಪ್ರಶ್ನೆಯನ್ನು ವಿವಿಧ ದೃಷ್ಟಿಕೋನಗಳ ಮೂಲಕ ಇಲ್ಲಿ ಚರ್ಚಿಸಲಾಗಿದೆ: ಆರ್ಯ ಕೇಂದಿತ ವಾದ, ದ್ರಾವಿಡ ಕೇಂದ್ರಿತ ವಾದ, ಚಾತುರ್ವರ್ಣ್ಯ ಕೇಂದ್ರಿತ ವಾದ, ಕುಲಕಸಬು ಕೇಂದ್ರಿತ ವಾದ, ವರ್ಣಸಂಕರ ಕೇಂದ್ರಿತ ವಾದ, ಗೋಮಾಂಸ ಭಕ್ಷಣೆ ವಾದ, ಹಿಂದೂ / ಹಿಂದುತ್ವ ಕೇಂದ್ರಿತ ವಾದ ಹೀಗೆ ವಿವಿಧ ದೃಷ್ಟಿಕೋನಗಳ ಮೂಲಕ ಇಲ್ಲಿ ಜಾತಿ ಸಂಕಥನವನ್ನು ನಡೆಸಲಾಗಿದೆ. ಜಾತಿ ವಿನಾಶದ ಹೋರಾಟದಲ್ಲಿ ನಂಬುಗೆಯಿಟ್ಟ ಅಂಬೇಡ್ಕರ್, ಲೋಹಿಯಾ ಅವರಂತಹ ಮಹಾನ್ ನಾಯಕರ ಹಾಗೂ ರಾಷ್ಟ್ರಕವಿ ಕುವೆಂಪುರವರ ಚಿಂತನೆಗಳನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಚೋಮನ ದುಡಿ, ಸಂಸ್ಕಾರ, ಮಲೆಗಳಲ್ಲಿ ಮದುಮಗಳು, ದಾಟು, ಕುಸುಮಬಾಲೆ – ಮುಂತಾದ ಕಾದಂಬರಿಗಳನ್ನು ಜಾತಿ ಪ್ರಶ್ನೆಯ ನೆಲೆಯಲ್ಲಿ ಚರ್ಚೆ, ವಿಶ್ಲೇಷಣೆ ಹಾಗೂ ವಾದ–ವಾಗ್ವಾದಗಳನ್ನು ಮಂಡಿಸಿರುವ ಕನ್ನಡ ವಿಮರ್ಶೆಗಳನ್ನು ಇಲ್ಲಿ ದೀರ್ಘವಾದ ಮತ್ತು ಗಹನವಾದ ಮರು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಗೆ ಸಾವಿರ ವರ್ಷಗಳ ಪ್ರಾಚೀನತೆ ಇರುವ ಹಾಗೆ ಕನ್ನಡ ಸಾಹಿತ್ಯ ವಿಮರ್ಶೆಗೆ ನೂರು ವರ್ಷಗಳ ಇತಿಹಾಸವನ್ನು ಗುರುತಿಸುವ ಈ ಲೇಖಕರು ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರು ೧೯೧೭ರಲ್ಲಿ 'ಕೃಷ್ಣ ಸೂಕ್ತಿ' ಎಂಬ ಪತ್ರಿಕೆಯಲ್ಲಿ ತಿರುಮಲಾಂಬ ಅವರ 'ವಿದ್ಯುಲ್ಲತಾ' ಕಾದಂಬರಿಯ ಬಗ್ಗೆ ತಮ್ಮ ವಿಮರ್ಶೆಯನ್ನು ಪ್ರಕಟಿಸಿದರು. ಹಾಗಾಗಿ ಸುಮಾರು ನೂರು ವರ್ಷಗಳ ಇತಿಹಾಸವಿರುವ ಕನ್ನಡ ವಿಮರ್ಶಾಲೋಕದಲ್ಲಿ ನಡೆದಿರುವ ವ್ಯವಸಾಯವನ್ನು ಕುರಿತ ವಸ್ತುನಿಷ್ಠ ವಿಮರ್ಶೆ ಇಲ್ಲಿದೆ. ಬೆನ್ನುಡಿಯಲ್ಲಿ ರಹಮತ್ ತರೀಕೆರೆಯವರು ಗುರುತಿಸಿರುವಂತೆ ಕನ್ನಡದ ಸಂಶೋಧನೆ ಮತ್ತು ಸಾಹಿತ್ಯ ವಿಮರ್ಶೆಗಳನ್ನು ಪ್ರೀತಿಯಿಂದ ಓದುವವರು ಮತ್ತು ಅವನ್ನಿಟ್ಟುಕೊಂಡು ಸಂಶೋಧನೆ ಮಾಡುವವರು ಕಡಿಮೆ. ಅಂತಹ ಅಪರೂಪದ ಬರಹಗಾರರಾದ ಸುಭಾಷ್ ರಾಜಮಾನೆಯವರ ಈ ಪುಸ್ತಕ ಸಾಹಿತ್ಯದ ಓದಿಗೆ ನೆರವಾಗಬಲ್ಲ ಉತ್ತಮ ಪುಸ್ತಕವಾಗಿದೆ.*

## ಪ್ರಜಾವಾಣಿಯಲ್ಲಿ ನನ್ನ ದಿನಗಳು

ಕುಶಲಾ ಡಿಮೆಲೊ

**ಪುಟ : ೧೩೦** | **ಬೆಲೆ : ರೂ. ೧೨೦**

**ವಿಕಾಸ ಪ್ರಕಾಶನ,** ನಂ. ೧೩೪೧, ೧೬ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು – ೪೦




*ಕನ್ನಡದ ಹಿರಿಯ ಪತ್ರಕರ್ತೆಯರಲ್ಲೊಬ್ಬರಾದ ಇವರ ವೃತ್ತಿ ಜೀವನದ ಆತ್ಮಕಥನವಿದು. ೧೯೫೧ರಿಂದ ೧೯೮೭ರವರೆಗೆ ಸುಮಾರು ೩೬ ವರ್ಷಗಳ ಸುದೀರ್ಘ ಕಾಲಾವಧಿಯಲ್ಲಿ ಪ್ರಜಾವಾಣಿಯಲ್ಲಿ ಕೆಲಸ ಮಾಡಿರುವ ಇವರು ತಮ್ಮ ವೃತ್ತಿ ಜೀವನದಲ್ಲಿ ಪಡೆದುಕೊಂಡ ಸ್ನೇಹಿತರು, ಒಡನಾಡಿದ ಸಹೋದ್ಯೋಗಿಗಳು ಮತ್ತು ಅಧಿಕಾರ ವರ್ಗದವರ ಜೊತೆ ಕಳೆದ ಅಮೂಲ್ಯ ಸಮಯವನ್ನು ಮತ್ತು ಅದು ಕೊಟ್ಟ ಅನುಭವವನ್ನು ಇಲ್ಲಿ ಬರಹಕ್ಕಿಳಿಸಿದ್ದಾರೆ. ಈ ಕಚೇರಿಯಲ್ಲಿ ಅನೇಕರೊಂದಿಗಿನ ಅವರ ಒಡನಾಟವನ್ನು ನಾಡಿನ ಅತ್ಯುತ್ತಮ ಪ್ರತಿಭೆಗಳ ಒಡನಾಟವೆಂದು ಅವರು ಭಾವಿಸುತ್ತಾರೆ. ಈ ಕೃತಿಯ ಪ್ರಕಾಶಕಿ ಲೇಖಕಿಯ ಸಹೋದ್ಯೋಗಿಯೂ ಗೆಳತಿಯಾಗಿದ್ದು, ಈ ಪುಸ್ತಕದ ರಚನೆಯ ಅಗತ್ಯವನ್ನು ಮನಗಾಣಿರುವುದಕ್ಕೆ ಕೊಡುವ ಕಾರಣ ಗಮನೀಯವಾದದ್ದಾಗಿದೆ: ಕನ್ನಡ ಪತ್ರಿಕಾಲಯಗಳಿಗೆ ಮಹಿಳೆಯರ ಪ್ರವೇಶವೇ ಅಸಾಧ್ಯವಾಗಿದ್ದ ದಿನಗಳಲ್ಲಿ ನೀವು ಪ್ರಜಾವಾಣಿ ಪ್ರವೇಶಿಸಿದಿರಿ. ಅದರ ಬೆಳವಣಿಗೆಯನ್ನು ಕಣ್ಣಾರೆ ಕಂಡು ಪಟ್ಟ ಸಂತೋಷವನ್ನು ಪದೇ ಪದೇ ಹೇಳುತ್ತಿದ್ದೀರಿ. ಈ ಅನುಭವವನ್ನು ನೀವು ಬರೆಯಲೇಬೇಕು. ಅದು ನಿಮ್ಮ ವಾರಿಗೆಯ ಅನೇಕ ಪತ್ರಕರ್ತರ ಸಂತೋಷದ ಅನುಭವದ ದಾಖಲೆಯೂ ಆಗುತ್ತದೆ. ಅಷ್ಟೇ ಅಲ್ಲ, ಅದು ಕನ್ನಡ ಪತ್ರಿಕೋದ್ಯಮದ ಇತಿಹಾಸದಲ್ಲಿ ವಿಶೇಷ ಸ್ಥಾನ ಪಡೆಯುತ್ತದೆ – ಈ ಮಾತುಗಳು ಈ ಕೃತಿಯ ಅಗತ್ಯವನ್ನು ಮತ್ತು ಮಹತ್ವವನ್ನು ಒಟ್ಟಿಗೆ ಹೇಳುತ್ತದೆ.*

– **ಎನ್. ಆಶಾ,** *ಗವಿಪುರ, ಬೆಂಗಳೂರು – ೫೬೦ ೦೧೯*

# ಅರಳುವ ಮುನ್ನ ಮುದುಡಿದ ಕಲಾಪುಷ್ಪ ಬಿ. ಎಸ್. ರಂಗ



**ಪ್ರಸ್ತಾವನೆ**

ನನ್ನ – ರಂಗನ ಗೆಳೆತನ ಐವತ್ತು ವರ್ಷಗಳ ಹಿಂದಿನದು; ನಿಕಟ ಬಾಂಧವ್ಯ. ನನಗೆ ಟಿ. ಎಸ್. ರಂಗ (ತಿರುಮಲೈ ಶಾಮಣ್ಣ ರಂಗನಾಥ) ಪರಿಚಯವಾದ್ದು ರಂಗಭೂಮಿಯ ಮುಖೇನ. ಆಗ ನನ್ನ ವಾಸ ಬಸವನಗುಡಿ ಪೊಲೀಸ್ ಠಾಣೆಯ ರಸ್ತೆಯಲ್ಲಿ. ನನ್ನ ಬಂಧು (ದಿ) ಬೆಳ್ಳಾವೆ ವೆಂಕಟರಮಣಯ್ಯನವರ ಮನೆ ಸಮೀಪ; ಅಲ್ಲೇ ಪಕ್ಕದಲ್ಲಿ ಖ್ಯಾತ ರಂಗಭೂಮಿ ನಟ–ನಿರ್ದೇಶಕ (ದಿ) ಬಿ. ಎಸ್. ನಾರಾಯಣರಾಯರು ನಾಟಕದ ತಾಲೀಮು ನಡೆಸುತ್ತಿದ್ದರು. ನಾನಾಗ ಕೆನರಾ ಬ್ಯಾಂಕ್‌ನಲ್ಲಿ ಅಧಿಕಾರಿಯಾಗಿದ್ದೆ. ಅರೆ ವೃತ್ತಿ ರಂಗಭೂಮಿಯಲ್ಲಿದ್ದು, ಮುಂದೆ ಮಹಾರಾಜ ಕಾಲೇಜಿನಲ್ಲಿ ಘಟಾನುಘಟಿಗಳಾಗಿದ್ದ ಸಂಪತ್, ಪ್ರೊ॥ ಗುರುರಾಜ ರಾವ್, ಪ್ರೊ॥ ಎಂ. ರಾಮರಾವ್ ಮುಂತಾದವರ ಗರಡಿಯಲ್ಲಿ ತಯಾರಾಗಿ ನಟನಾಗಿ ಹೆಸರಾಗಿದ್ದ ನನಗೆ ನಾಟಕದ ಗೀಳು : ಹಾಗಾಗಿ ನನ್ನ ಬ್ಯಾಂಕಿನ ಕೆಲಸದ ಒತ್ತಡದ ನಡುವೆಯೂ ಬೆಂಗಳೂರಿನ ಹವ್ಯಾಸಿ ನಾಟಕಗಳ ತಂಡ ಸೇರಿದೆ. ಆ ಸಮಯದಲ್ಲಿ ನನಗೆ ರಂಗನ ಭೇಟಿಯಾಯಿತು – ನಾಟಕದ ತಾಲೀಮಿಗಾಗಿ ಹೋಗುತ್ತಿದ್ದ ನನಗೆ ರವೀಂದ್ರ ಕಲಾಕ್ಷೇತ್ರದ ಮೊಗಸಾಲೆಯಲ್ಲಿ ಇಬ್ಬರು ನೆಲದ ಮೇಲೆ ಕಾಲುಚಾಚಿ ಕೂತು ಮರಗೆಲಸ ಮಾಡುತ್ತ ಮೊಳೆಹೊಡೆಯುತ್ತಿದ್ದರು; ಒಬ್ಬ ಟಿ. ಎಸ್. ರಂಗ, ಮತ್ತೊಬ್ಬ ನಾಗಾಭರಣ. ಅವರಿಬ್ಬರೂ ನಾನು ಪಾತ್ರ ಮಾಡುತ್ತಿದ್ದ ನಾಟಕದ ರಂಗಪರಿಕರಗಳ ತಯಾರಿಯಲ್ಲಿದ್ದರು. ಪರಿಚಯ ಮಾಡಿಕೊಂಡು ಅವರೊಡನೆ ಸ್ನೇಹ ಬೆಳೆಸಿದೆ. ಕಲಾಕ್ಷೇತ್ರದ ಮೆಟ್ಟಿಲ ಮೇಲೆ ಸರಿರಾತ್ರಿಯ ತನಕ ಕೂತು ಹರಟುತ್ತ ಅಲ್ಲೇ ಎದುರಿಗಿದ್ದ ಹೋಟೆಲಿನಲ್ಲಿ ಚಹ ಸೇವಿಸಿ ಮನೆಗೆ ಮರಳುತ್ತಿದ್ದೆವು. ನನ್ನ ಮನೆ ಸಮೀಪದ ಎನ್. ಆರ್. ಕಾಲನಿಯಲ್ಲಿರುವ ರಂಗನ ಮನೆಗೆ ನನ್ನ ದ್ವಿಚಕ್ರ ವಾಹನದಲ್ಲಿ ಬಿಟ್ಟು ಹೋಗುವುದು ಮಾಮೂಲಾಗಿತ್ತು.

**ಕೌಟುಂಬಿಕ ಹಿನ್ನೆಲೆ**

ಪ್ರಾಮಾಣಿಕ, ಸರಳ, ಸಜ್ಜನರಾಗಿ ಹೆಸರಾಗಿದ್ದ ಎಂ.ಎಲ್.ಎ., ಎಂ.ಪಿ. ಆಗಿ ನಿಸ್ವಾರ್ಥ ಸೇವೆ ಸಲ್ಲಿಸುತ್ತ 'ಕರ್ನಾಟಕದ ಗಾಂಧಿ' ಎಂದೇ ಪ್ರಸಿದ್ಧರಾಗಿದ್ದ ಶ್ರೀ ಟಿ. ಆರ್. ಶಾಮಣ್ಣನವರ ಹಿರಿಯ ಪುತ್ರ ರಂಗ.

**ರಂಗ–ನಟ, ನಿರ್ದೇಶಕ ರಂಗಸಂಘಟಕ**

ವಿದ್ಯಾರ್ಥಿಯಾಗಿ ಕಾಲೇಜಿನ ನಾಟಕಗಳಲ್ಲಿ ನಟ–ನಿರ್ದೇಶಕನಾಗಿ ಹೆಸರು ಪಡೆದ. ರಂಗಚಟುವಟಿಕೆಗಳಲ್ಲಿ ಮುಂದಾಳತ್ವ ವಹಿಸಿ ನಾಯಕ ಗುಣವನ್ನು ಬೆಳೆಸಿಕೊಂಡ.

ವಿದ್ಯಾರ್ಥಿದೆಶೆ ಮುಗಿಯಿತು ಯಾವ ಕೆಲಸಕ್ಕೂ ಸೇರಲಿಲ್ಲ. ತನ್ನ ತಂದೆಯ ಸಹಾಯದಿಂದ ಯಾವುದಾದರೂ ಸರ್ಕಾರಿ ನೌಕರಿ ಪಡೆಯುವುದು ಕಷ್ಟವಾಗಿರಲಿಲ್ಲ. ಆದರೆ ನಾಟಕದ ಗೀಳು ರಂಗನನ್ನು ಆ ಕಡೆ ಸೆಳೆಯಲು ಬಿಡಲಿಲ್ಲ. ಯಾವಾಗಲೂ ನಾಟಕದ ಕೆಲಸ. ಬೆಂಗಳೂರಿನ ಹವ್ಯಾಸಿ ನಾಟಕಗಳ ನಂಟು. ಕಷ್ಟವೋ ಸುಖವೋ ರಂಗಭೂಮಿಯ ಕೆಲಸ ನಿರಂತರ!

**ಬಿ. ವಿ. ಕಾರಂತರೊಡನೆ**

ರಂಗನ ಬದುಕಿನಲ್ಲೊಂದು ದೊಡ್ಡ ತಿರುವು ಪ್ರಾರಂಭವಾದ್ದು ಅವನ – ಬಿ. ವಿ. ಕಾರಂತರ ಸಂಪರ್ಕದಿಂದ. ಬಿ. ವಿ. ಕಾರಂತರ ಶಿಷ್ಯವೃಂದದಲ್ಲಿ ತುಂಬ ಹತ್ತಿರದವನಾಗಿದ್ದ ರಂಗ. ಕಾರಂತರ ನಿರ್ದೇಶನದ "ಹಯವದನ", "ಸತ್ತವರ ನೆರಳು", "ಸಂಕ್ರಾಂತಿ", "ಜೋಕುಮಾರಸ್ವಾಮಿ", "ಈಡಿಪಸ್' ಮೊದಲಾದ ನಾಟಕಗಳಲ್ಲಿ ನಟನಾಗಿ, ಹಾಡುಗಾರನಾಗಿ, ರಂಗಸಜ್ಜಿಕೆ ನಿರ್ವಾಹಕನಾಗಿ, ಮತ್ತಿತರ ಕೆಲಸಗಳಲ್ಲಿ ತೊಡಗಿಕೊಂಡಿದ್ದ ರಂಗ ನಾಟಕಗಳನ್ನು ದೇಶಾದ್ಯಂತ ಒಯ್ಯುವಲ್ಲಿ ಮುಂದಾಳತ್ವ ವಹಿಸಿದ್ದ. ಜರ್ಮನಿಯ ಪ್ರಸಿದ್ಧ ನಿರ್ದೇಶಕ ಫ್ರಿಟ್ಜ್ ಬೆನೆವಿಟ್ಜ್‌ನನ್ನು ಕರೆಸಿ 'ಸ್ವಾಮಿ ಪುಟ್ಟಪ್ಪನೂ ಆಳು ಸೋಮನೂ' ಎಂಬ (ಪುಂಟಿಲಾ) ನಾಟಕದ ನಿರ್ದೇಶನ ಮಾಡಿಸಿದ್ದ. ಇದಕ್ಕೆ ಮುನ್ನ ಪುಟ್ಟಣ ಕಣಗಾಲ್ ಅವರಂತಹ ಕೆಲವು ನಿರ್ದೇಶಕರೊಡನೆಯೂ ಕೆಲಸ ಮಾಡಿದ್ದ.

ಇಷ್ಟೊತ್ತಿಗೆ ನಾನು ವರ್ಗವಾಗಿ ಮೈಸೂರಿಗೆ ಹೋಗಿದ್ದೆ. ಇಬ್ಬರ ನಡುವೆ ಪತ್ರ ವ್ಯವಹಾರವಿತ್ತು. ರಂಗನ ಮುದ್ದಾದ ಅಕ್ಷರಗಳಿರುವ ರಂಗುರಂಗಿನ ಪತ್ರಗಳನ್ನೋದುವುದು ನೋಡುವುದು ಸಂತೋಷಕರವಾಗಿತ್ತು. ರಂಗನಿಗೆ ಬೇಸರವಾದಾಗ ನೇರವಾಗಿ ಮೈಸೂರಿಗೆ ಬಂದು ನಮ್ಮ ಮನೆಯಲ್ಲಿ ವಾರಗಟ್ಟಲೆ ಇರುತ್ತಿದ್ದ. ಆಗ ರಂಗಭೂಮಿ ಮತ್ತು ಸಿನಿಮಾ ಬಗ್ಗೆ ಗಂಟೆಗಟ್ಟಲೆ ಚರ್ಚಿಸುತ್ತಿದ್ದ. ಅದೆಷ್ಟು ಚಿತ್ರಕಥೆಗಳನ್ನು ಹೇಳಿದ್ದಾನೋ!

ತಾನು ಸಿನಿಮಾ ಮಾಡಬೇಕೆಂದು ಅದೆಷ್ಟು ತಿರುಗಾಡಿದನೋ! ಏತನ್ಮಧ್ಯೆ ಪಿ. ಲಂಕೇಶ, ಬಿ. ವಿ. ಕಾರಂತ, ಗಿರೀಶ ಕಾರ್ನಾಡ, ಜಿ. ವಿ. ಅಯ್ಯರ್ ಅವರುಗಳ ಜೊತೆ ಚಲನಚಿತ್ರ ನಿರ್ಮಾಣ–ನಿರ್ದೇಶನದ ಒಳ–ಹೊರಗಿನ ಅನುಭವವಾಗಿತ್ತು.

ಚಲನಚಿತ್ರ ಮಾಡಬೇಕೆಂಬ ಅವನ ತುಡಿತ ಅತೀವವಾಗಿದ್ದ ಕಾಲದಲ್ಲಿ ಬಂದ ನಿರ್ಮಾಪಕರಿಂದ ಅರ್ಧದಲ್ಲೇ ನಿಂತುಹೋಯಿತು. ರಂಗ 'ಸ್ಕ್ರಿಪ್ಟ್' ಬರೆಯುವುದರಲ್ಲಿ ನಿಸ್ಸೀಮನಾಗಿದ್ದ. ಆಗ ನಂಜನಗೂಡಿನ ಪುರೋಹಿತ ವರ್ಗದ ಶ್ರೀ ಚಿದಂಬರ ಅವರು ಮುಂದೆ ಬಂದದ್ದರಿಂದ ರಂಗನಿಗೆ ಶ್ರೀಕೃಷ್ಣ ಆಲನಹಳ್ಳಿಯ ಕಥೆ ಆಧಾರಿತ 'ಗೀಜಗನ ಗೂಡು' ಚಿತ್ರ ಮಾಡಲು ಸಾಧ್ಯವಾಯಿತು. ಕಾಕನಕೋಟೆ

**ಎಚ್. ಜಿ. ಸೋಮಶೇಖರರಾವ್**




ಅರಣ್ಯ ಪ್ರದೇಶದಲ್ಲಿ (ದಿ) ಎಸ್. ರಾಮಚಂದ್ರರ ಛಾಯಾಗ್ರಹಣದಲ್ಲಿ ಚಿತ್ರ ನಿರ್ಮಾಣವಾಯ್ತು. ಹೊಸ ಅಲೆಯ ಈ ಚಿತ್ರ ಚಲನಚಿತ್ರದ ಮೂಲಕ 'ತಂಗಾಳಿ ಬೀಸಿದಂತೆ' ಎಂದು ವಿಮರ್ಶಕರು ಕೊಂಡಾಡಿದರು. ಚಿತ್ರಕ್ಕೆ ಪ್ರಶಸ್ತಿಯೂ ದೊರಕಿತು. ಈ ಮುನ್ನ ನಾಗಾಭರಣ ನಿರ್ದೇಶನದ 'ಗ್ರಹಣ' ಚಿತ್ರಕ್ಕೆ ಚಿತ್ರಕತೆ ಬರೆದ ರಂಗನಿಗೆ ರಾಷ್ಟ್ರಪ್ರಶಸ್ತಿ ದೊರಕಿತು.

ರಂಗನಿಗೆ ಉತ್ತರ ಕರ್ನಾಟಕವೆಂದರೆ ಬಹುಪ್ರೀತಿ. ಅದಕ್ಕೆ ಪೂರಕವಾಗಿ ಶ್ರೀ ರಂ. ಶಾ. ಲೋಕಾಪುರರ ಕಾದಂಬರಿ ಆಧಾರಿತ 'ಸಾವಿತ್ರಿ' ಚಲನಚಿತ್ರ ಮಾಡುವ ಅವಕಾಶ ದೊರಕಿತು. ತಲ್ಲೂರಿನ ಸೊಗಸಾದ ವಾಡೆಯಲ್ಲಿ ಚಿತ್ರೀಕರಣವಾಯ್ತು. ಆ ಚಿತ್ರದ ನಾಯಕಿ ಪಾತ್ರ ಮಾಡಿದ್ದ ಮುಂಬೈವಾಸಿ ಕನ್ನಡದ ಹುಡುಗಿ ಅಶ್ವಿನಿ, ಸಮರ್ಥ ಭಾವಪೂರ್ಣ ಅಭಿನೇತ್ರಿ. 'ಸಾವಿತ್ರಿ' ಚಿತ್ರೀಕರಣದ ಸಂದರ್ಭದಲ್ಲಿ ರಂಗ–ಅಶ್ವಿನಿ ಪರಸ್ಪರ ಪ್ರೀತಿಸಿ ಮದುವೆಯಾದರು. ತವರೂರಾದ ಮಾಗಡಿ ರಂಗನಾಥಸ್ವಾಮಿ ದೇವಸ್ಥಾನದಲ್ಲಿ ಮದುವೆಯಾದರು. ಆರತಕ್ಷತೆಗೆ ಅಪಾರ ಸಂಖ್ಯೆಯಲ್ಲಿ ರಾಜಕಾರಣಿಗಳು, ಮಂತ್ರಿಗಳು, ಕಲಾವಿದರು ಸೇರಿದ್ದರು.

'ಸಾವಿತ್ರಿ' ಚಿತ್ರಕ್ಕೆ ರಾಷ್ಟ್ರೀಯ–ಅಂತರರಾಷ್ಟ್ರೀಯ ಪ್ರಶಸ್ತಿಗಳು ದೊರಕಿದವು. ಅಷ್ಟೊತ್ತಿಗೆ ರಂಗ ರಂಗಭೂಮಿಯಿಂದ ಸ್ವಲ್ಪ ದೂರವಾಗಿದ್ದ. ವೇಶ್ಯಾ ಸಮಸ್ಯೆ ಕುರಿತಾದ 'ಗಿಧ್' ಎಂಬ ಹಿಂದಿ ಚಿತ್ರಕ್ಕೆ ನಿರ್ದೇಶಕನಾಗಿ ಪ್ರಸಿದ್ಧ ಕಲಾವಿದರಾಗಿದ್ದ ಓಂಪುರಿ, ನಾನಾ ಪಾಟೇಕರ್, ಸ್ಮಿತಾ ಪಾಟೀಲರಿಂದ ಪಾತ್ರ ಮಾಡಿಸಿ ಸೊಗಸಾದ ಚಿತ್ರ ಮಾಡಿದ ಕೀರ್ತಿ ರಂಗನದು. ಈ ಚಿತ್ರಕ್ಕೂ ಮೆಚ್ಚುಗೆ, ಪ್ರಶಸ್ತಿಗಳು ದೊರಕಿ ಅನೇಕ ದೇಶಗಳ ಫಿಲ್ಮೋತ್ಸವಗಳಲ್ಲಿ ಪ್ರದರ್ಶಿತವಾಯ್ತು. ರಂಗ ವಿದೇಶಗಳಲ್ಲಿ ಪ್ರವಾಸ ಮಾಡಿದ. ಎನ್.ಎಫ್.ಡಿ.ಸಿ.ಯ ನಿರ್ದೇಶಕನಾಗಿದ್ದ. ಮೂರು ಬಾರಿ ರಾಷ್ಟ್ರಮಟ್ಟದ ಶ್ರೇಷ್ಠ ಚಿತ್ರಗಳ ಆಯ್ಕೆ ಸಮಿತಿಯಲ್ಲಿ ಜ್ಯೂರಿಯಾಗಿದ್ದ. ರಾಜ್ಯ–ರಾಷ್ಟ್ರಮಟ್ಟದಲ್ಲಿ ಅನೇಕ ಸಾಕ್ಷ್ಯಚಿತ್ರಗಳನ್ನು ಮಾಡಿ ಹೆಸರಾದ. ಅದರಲ್ಲೂ ತಾನೇ ಸೊಗಸಾದ ಸ್ಕ್ರಿಪ್ಟ್ ತಯಾರಿಸಿ ಡಾ॥ ಎಚ್. ನರಸಿಂಹಯ್ಯ ಮತ್ತು ಶ್ರೀ ಶಂ. ಭಾ. ಜೋಷಿಯವರ ಬಗ್ಗೆ ರಂಗ ಮಾಡಿದ್ದ ಸಾಕ್ಷ್ಯಚಿತ್ರಗಳು ಮಾದರಿಗಳಾಗಿ ಪ್ರಸಿದ್ಧವಾದವು.

**ರಂಗನ ಸಾಹಿತ್ಯ ಪ್ರೇಮ–ವ್ಯಾಸಂಗ ವ್ಯಾಪ್ತಿ**

ರಂಗನಿಗೆ ಓದುವ ಹುಚ್ಚು. ಅವನ ಸಂಗ್ರಹದಲ್ಲಿರುವ ಪುಸ್ತಕಗಳ ರಾಶಿಯ ಕಡೆ ಒಮ್ಮೆ ಕಣ್ಣಾಡಿಸಿದರೆ ಗೊತ್ತಾಗುತ್ತದೆ ಅವನ ಓದಿನ ಹರಹು. ಅವನೊಡನೆ ಮಾತಿಗೆ ಕೂತರೆ ಸಾಕು, ಅವನ ವಿಚಾರಧಾರೆಯ ವ್ಯಾಪ್ತಿ ಅಚ್ಚರಿ ಹುಟ್ಟಿಸುತ್ತಿತ್ತು.

ತುಂಬ ವರ್ಷಗಳಿಂದ ಮಧುಮೇಹ ಕಾಯಿಲೆ ಅವನನ್ನು ಕಾಡಿತು. ಹಾಗಾಗಿ ಅವನ ಕ್ರಿಯಾಶೀಲತೆಗೆ ಕತ್ತರಿ ಬಿತ್ತು. ಅದರ ಮಧ್ಯೆ ರಾವಬಹದ್ದೂರರ 'ಗ್ರಾಮಾಯಣ'ಕ್ಕೆ ಸ್ಕ್ರಿಪ್ಟ್ ತಯಾರಿಸಿದ್ದ. ಅದನ್ನು ದೂರದರ್ಶನದಲ್ಲಿ ಧಾರಾವಾಹಿಯಾಗಿ ಚಿತ್ರೀಕರಿಸುವ ಕನಸು ಕಟ್ಟಿದ್ದ. ಕಾಯಿಲೆ ಉಲ್ಬಣವಾಗಿ ತನ್ನ ಒಂದು ಕಾಲನ್ನು ಕಳೆದುಕೊಳ್ಳುವುದು ಅನಿವಾರ್ಯವಾಯ್ತು. ಆಸ್ಪತ್ರೆಯಲ್ಲಿ ಕಾಲು ಕಳೆದುಕೊಂಡು ನರಳುತ್ತಿದ್ದಾಗ ನಾಲ್ಕಾರು ಬಾರಿ ಹೋಗಿ ನೋಡಿದ್ದೆ. ಆಮೇಲೆ ಅವನು ಮನೆಗೆ ಬಂದ ಮೇಲೆ ಪ್ರತಿನಿತ್ಯ ಹೋಗಿ ಮಾತಾಡಿ ಬರುತ್ತಿದ್ದೆ. ಸಾಯುವುದಕ್ಕೆ ಎರಡು ದಿನ ಮುಂಚೆ ಹೋಗಿದ್ದಾಗ ಲವಲವಿಕೆಯಿಂದ ಮಾತಾಡುತ್ತ, "ಸೋಮಣ್ಣ... ನಾನು ಒಂದು ಒಳ್ಳೇ ಕಥೆ ಯೋಚಿಸಿ 'ಶಾಟ್ ಟು ಶಾಟ್' ರೆಡಿ ಮಾಡಿದ್ದೇನೆ. ಓಡಾಡುವ ಹಾಗಾದಾಗ ಶೂಟಿಂಗ್ ಶುರುಮಾಡೋಣ" ಅಂದ.

... ಅದೆಷ್ಟೋ ಕನಸುಗಳ ಕಣಜವಾಗಿದ್ದ ಈ ರಂಗ... ಮಾಡುವುದು ಮಸ್ತಾಗಿದ್ದಾಗಲೇ ಒಂದು ಮಾತೂ ಹೇಳದೆ ಹೋಗಿಬಿಟ್ಟ , ತನ್ನೆಲ್ಲ ಕನಸುಗಳ ಜೊತೆಗೆ... ಛೇ...!

**ಎಚ್. ಜಿ. ಸೋಮಶೇಖರರಾವ್**
"ಶ್ರೀನಿವಾಸ", ನಂ. ೮೦, ೨೩ನೇ ಮುಖ್ಯರಸ್ತೆ, ಶ್ರೀನಗರ, ಬೆಂಗಳೂರು – ೫೬೦ ೦೫೦

## ಗೋಡೆಗಳ ಒಡೆಯುತ್ತಾ

ಗೋಡೆಗಳ ಒಡೆಯುತ್ತಾ ರೇಖೆಗಳ ದಾಟುತ್ತಾ ಹೊರಡು ಗುಲಾಬಿ
ಮೌನಗಳ ಮೀರುತ್ತಾ ಭಯವ ದಾಟುತಾ ಹೊರಡು ಗುಲಾಬಿ

ನಿಗಿ ನಿಗಿಸುವ ಕೆಂಡದ ನಡುವೆ ಮಳೆಹನಿ ಹೀರುತ್ತಾ ಹೊರಡು
ಎದೆ ತೆರೆದು ನೋವುಗಳ ಕಥೆಯಾಗಿಸಿ ಹೇಳುತ್ತಾ ಹೊರಡು ಗುಲಾಬಿ

ಏಳು ಸುತ್ತಿನ ಕೋಟೆ ಎಲ್ಲೆಡೆ ಬಂಧನ ಮುರಿದುಹಾಕುತ್ತಾ ಹೊರಡು
ಬರಸಿಡಿಲು ಗುಡುಗು ಮಿಂಚಿನಲ್ಲಿ ಮಿಂಚುತ್ತಾ ಹೊರಡು ಗುಲಾಬಿ

ಬೆಂಕಿಯ ಮಧ್ಯೆ ಬೆಳಕು ಬೆಳದಿಂಗಳಾಗುತ್ತಾ ಹೊರಡು
ಹುಲ್ಲು ಬೀಜದ ನಡುವೆ ಬೆಳೆಯಾಗುತ್ತಾ ಹೊರಡು ಗುಲಾಬಿ

ಅಸಮತೆಯ ಕಳ್ಳಿಗೆ ಬೆಂಕಿಯನುಂಡೆ ಉಗುಳುತ್ತಾ ಹೊರಡು
ಕೊಳೆತು ನಾರುತ್ತಿರುವ ಕೊಳಚೆಯಲ್ಲಿ ಹರಿಯುವ ನದಿಯಾಗುತ್ತಾ ಹೊರಡು ಗುಲಾಬಿ

ಕರ್ಮವ ಕಿತ್ತೊಗೆದು ಮೌಢ್ಯವ ನಂದಿಸುತ್ತಾ ಹೊರಡು ಜಯಾ
ಬ್ಯಾನಿ ಬ್ಯಾಸರಕಿ ಮರೆತು ಕರಕಿಯ ಕುಡಿಹಂಗ ಹಬ್ಬುತ್ತಾ ಹೊರಡು ಗುಲಾಬಿ

**ಡಾ॥ ಜಯದೇವಿ ಗಾಯಕವಾಡ**
ನಂ. ೫೮/೭೩, ಹೌಸಿಂಗ್ ಸೊಸೈಟಿ, ಕಾಲೋನಿ ಕಲ್ಲೂರ ರಸ್ತೆ
ಹುಮನಾಬಾದ – ೫೮೫ ೩೩೦, ಬೀದರ್

## ನಾ. ದಿವಾಕರ

ಮಾರ್ಕ್ಸ್‌ವಾದ ಸತ್ತುಹೋಗಿದೆ, ಕಾರ್ಲ್ ಮಾರ್ಕ್ಸ್, ಫ್ರೆಡ್ರಿಕ್ ಏಂಗೆಲ್ಸ್ ಮತ್ತು ಲೆನಿನ್ ಸಮಕಾಲೀನ ಸಂದರ್ಭದಲ್ಲಿ ಪ್ರಸ್ತುತರೇ ಅಲ್ಲ ಎಂಬ ಕೂಗು ಭಾರತದಲ್ಲಂತೂ ಹೆಚ್ಚಾಗುತ್ತಿದೆ. ತ್ರಿಪುರಾದಲ್ಲಿ ಪುಂಡುಪೋಕರಿಗಳು ಲೆನಿನ್ ಪ್ರತಿಮೆಯನ್ನು ಧ್ವಂಸ ಮಾಡುವ ಮೂಲಕ ನೀಡಿದ ಸಂದೇಶವೂ ಇದೇ ಆಗಿದೆ. ಎಡಪಂಥೀಯ ಕಾರ್ಮಿಕ ಚಳುವಳಿಗಳು ಹಿನ್ನಡೆ ಕಾಣುತ್ತಿವೆ. ಈ ಹಿನ್ನೆಲೆಯಲ್ಲಿ ಮಾರ್ಕ್ಸ್‌ವಾದ ಸತ್ತುಹೋಗಿದೆ ಎಂದು ಸ್ವತಃ ಶವಸಂಸ್ಕಾರ ಮುಗಿಸಿ ಶ್ರಾದ್ಧ ಮಾಡಿದವರಂತೆ ಘೋಷಿಸುವ ಮತಾಂಧರು, ಜಾತಿವಾದಿಗಳು, ಕಾರ್ಪೊರೇಟ್ ಉಪಾಸಕರು ಭಾರತದಲ್ಲಿ ಹೆಚ್ಚಾಗುತ್ತಿದ್ದಾರೆ. ಪಶ್ಚಿಮ ಬಂಗಾಲ ಆಯಿತು, ತ್ರಿಪುರಾ ಆಯಿತು. ಇನ್ನು ಕೇರಳದಲ್ಲಿ ಎಡರಂಗ ಸೋತರೆ ತಮ್ಮ ಮಹತ್ವಾಕಾಂಕ್ಷಿ ಯೋಜನೆ ಸಾಕಾರಗೊಂಡಂತೆಯೇ ಎಂದು ಹಿಂದುತ್ವವಾದಿಗಳು ಬೀಗುತ್ತಿದ್ದಾರೆ. ಆದರೆ ೨೦೦ ವರ್ಷಗಳ ಹಿಂದೆ ಜನಿಸಿದ ಮಾರ್ಕ್ಸ್ ಮತ್ತು ಅವರು ರೂಪಿಸಿದ ವೈಜ್ಞಾನಿಕ ಸಮಾಜವಾದ, ಗತಿತಾರ್ಕಿಕ ಭೌತವಾದ ಮತ್ತು ಚಾರಿತ್ರಿಕ ಭೌತವಾದ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗುತ್ತದೆ. ಎಡಪಕ್ಷ, ಚುನಾವಣೆ ಮತ್ತು ಭದ್ರಕೋಟೆಗಳಿಂದಾಚೆ ನೋಡುವ ಕಾಣ್ಕೆ ಇದ್ದಲ್ಲಿ ಇದನ್ನು ಗ್ರಹಿಸಲು ಸಾಧ್ಯ.

ಇಲ್ಲಿ ಮಾರ್ಕ್ಸ್ ಮತ್ತು ಮಾರ್ಕ್ಸ್‌ವಾದವನ್ನು ಕುರಿತು ಎಷ್ಟು ಪುಸ್ತಕಗಳು ಪ್ರಕಟವಾಗಿವೆ, ಜಗತ್ತಿನಾದ್ಯಂತ ಮಾರ್ಕ್ಸ್ ಅಥವಾ ಲೆನಿನ್‌ನ ಎಷ್ಟು ಪುತ್ಥಳಿಗಳಿವೆ, ಅತಿ ಹೆಚ್ಚು ವಿಮರ್ಶೆಗೊಳಗಾದ ತತ್ವಶಾಸ್ತ್ರಜ್ಞನಾರು ಈ ಎಲ್ಲ ಅಂಕಿಅಂಶಗಳನ್ನು ಬದಿಗಿಟ್ಟು ನೋಡುವ ದಾರ್ಶನಿಕತೆ ನಮಗೆ ಬೇಕಿದೆ. ೨೦೦ ವರ್ಷಗಳ ನಂತರ ಮಾರ್ಕ್ಸ್ ಇಂದಿಗೂ ಸ್ಮರಣೀಯನಾಗುತ್ತಾನೆ, ಕೇವಲ ಮಾರ್ಕ್ಸ್‌ವಾದಿಗಳಿಗೆ ಮಾತ್ರವಲ್ಲ, ಅವನ ವಿರೋಧಿಗಳಿಗೂ ಸಹ. ನರೇಂದ್ರ ಮೋದಿ ನೇತೃತ್ವದ, ಸಂಘಪರಿವಾರ ಪ್ರೇರಿತ ಹಿಂದುತ್ವ ರಾಜಕಾರಣದ ಮೂಲ ಉದ್ದೇಶವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಅಲ್ಲಿ ಕಾಂಗ್ರೆಸ್ ಮುಕ್ತ ಭಾರತಕ್ಕಿಂತಲೂ ಮಾರ್ಕ್ಸ್‌ವಾದ ಮುಕ್ತ ಭಾರತಕ್ಕಾಗಿ ಶ್ರಮಿಸುವ ಯೋಚನೆ ಎದ್ದು ಕಾಣುತ್ತದೆ. ಮಾರ್ಕ್ಸ್ ಅಪ್ರಸ್ತುತನೇ ಆಗಿದ್ದಲ್ಲಿ ಅಥವಾ ಮಾರ್ಕ್ಸ್‌ವಾದ ಅಪ್ರಸ್ತುತ ಎನಿಸಿದ್ದಲ್ಲಿ ಇಂದಿಗೂ ಕಾರ್ಪೊರೇಟ್ ಔದ್ಯಮಿಕ ಹಿತಾಸಕ್ತಿಗಳಿಗೆ, ಇವರನ್ನು ಪೋಷಿಸುವ ಬಂಡವಾಳಶಾಹಿ ಪಕ್ಷಗಳಿಗೆ, ಈ ದೇಶದ ಶ್ರಮಜೀವಿಗಳ ಬದುಕನ್ನು ಮೂರಾಬಟ್ಟೆ ಮಾಡಲು ಹೊರಟಿರುವ ಮತಾಂಧರಿಗೆ ಮಾರ್ಕ್ಸ್‌ವಾದವನ್ನು ಇಲ್ಲವಾಗಿಸುವ ತವಕ ಏಕೆ? ಲೆನಿನ್ ಅಪ್ರಸ್ತುತನೇ ಆಗಿದ್ದಲ್ಲಿ ಅವನ ಪ್ರತಿಮೆಯನ್ನು ಧ್ವಂಸಗೊಳಿಸಿದ್ದೇಕೆ? ಮತ್ತೊಂದು ಗಮನಾರ್ಹ ಅಂಶ ಎಂದರೆ ಭಾರತದ ಆಳುವ ವರ್ಗಗಳಿಗೆ (ಕಾಂಗ್ರೆಸ್, ಬಿಜೆಪಿ ಅಥವಾ ತೃತೀಯರಂಗ) ಪ್ರಥಮ ಶತ್ರು ಎಂದರೆ ಮಾವೋವಾದಿಗಳು. ಇಲ್ಲಿಯೂ ಮಾರ್ಕ್ಸ್‌ವಾದದ ಭೂತ ಅಥವಾ ಛಾಯೆ ಎದ್ದು ಕಾಣುತ್ತದೆ. ಎಲ್ಲೋ ಒಂದು ಕಡೆ ಮಾರ್ಕ್ಸ್, ಲೆನಿನ್ ಮತ್ತು ಮಾರ್ಕ್ಸ್‌ವಾದದ ಹೆಜ್ಜೆ ಗುರುತುಗಳನ್ನು ಅಳಿಸಿಹಾಕುವ ಹುನ್ನಾರ ನಡೆಯುತ್ತಿದೆ. ಮಾರ್ಕ್ಸ್ ೨೦೦ ವರ್ಷಗಳ ನಂತರವೂ ಪ್ರಸ್ತುತ ಎಂದು ನಿರೂಪಿಸಲು ಮತ್ತೇನು ಬೇಕು ?

ವೈಜ್ಞಾನಿಕ ತಳಹದಿಯ ಮೇಲೆ ರೂಪುಗೊಂಡ ಯಾವುದೇ ತತ್ವಶಾಸ್ತ್ರ ತನ್ನ ಪ್ರಸ್ತುತತೆಯನ್ನು ಕಳೆದುಕೊಳ್ಳುವುದಿಲ್ಲ. ಮಾರ್ಕ್ಸ್‌ವಾದ ಕೇವಲ ವೈಜ್ಞಾನಿಕ ತಳಹದಿಯನ್ನು ಮಾತ್ರವೇ ಹೊಂದಿಲ್ಲ. ಜಗತ್ತಿನ ಇತಿಹಾಸದ ಓರೆಕೋರೆಗಳನ್ನು ತಿದ್ದುವ ನಿಟ್ಟಿನಲ್ಲಿ ವೈಚಾರಿಕತೆಯ ನೆಲೆಯಲ್ಲಿ ಮಾನವ ಸಮಾಜದ ಅಭ್ಯುದಯದ ಮಾರ್ಗವನ್ನು ಅರಸುತ್ತಲೇ ಸಮಾನತೆಯ ಆಶಯದೊಂದಿಗೆ ಇಡೀ ವಿಶ್ವವನ್ನು ಶೋಷಣೆಯಿಲ್ಲದ ಸಮಾಜವನ್ನಾಗಿ ರೂಪಿಸುವ ಒಂದು ಪ್ರಯತ್ನವಾಗಿ ಮಾರ್ಕ್ಸ್‌ವಾದ ರೂಪುಗೊಂಡಿದೆ. ಮಾರ್ಕ್ಸ್ ತನ್ನ ಅಧ್ಯಯನ ಮತ್ತು ಸಂಶೋಧನೆಯ ಮಾರ್ಗದಲ್ಲಿ ಯಾವುದನ್ನೂ ನಿರಾಕರಿಸಲಿಲ್ಲ. ಆದರೆ ಯಾವುದನ್ನೂ ಪ್ರಶ್ನಾತೀತ ಎಂದೂ ಪರಿಗಣಿಸಲಿಲ್ಲ. ಜಗತ್ತಿನ ವಿದ್ಯಮಾನಗಳೊಂದಿಗೆ, ಮಾನವ ಸಮಾಜವನ್ನು ಕಾಡುತ್ತಿದ್ದ ಜ್ವಲಂತ ಸಮಸ್ಯೆಗಳಿಗೆ ಕೇವಲ ಸಮಕಾಲೀನ ಸಂದರ್ಭದ ವಿದ್ಯಮಾನಗಳನ್ನು ಮಾತ್ರವೇ ಪರಿಗಣಿಸದೆ, ಮಾನವ ಚರಿತ್ರೆಯಲ್ಲಿ ಆಗಿಹೋದ ವಿದ್ಯಮಾನಗಳ ಹೆಜ್ಜೆ ಗುರುತುಗಳನ್ನೂ ನ್ಯಾಯದ ಕಟಕಟೆಯಲ್ಲಿ ನಿಲ್ಲಿಸಿದ ಮಾರ್ಕ್ಸ್ ಅಂತಿಮವಾಗಿ ಕಂಡುಕೊಂಡ ಸಂಗತಿ ಎಂದರೆ ಮಾನವ ಜಗತ್ತು ಬದುಕುವುದೇ

# ೨೦೦ ಅಲ್ಲ ೧೦೦೦ ಆದರೂ ಮಾರ್ಕ್ಸ್ ಪ್ರಸ್ತುತ



ಸಂಘರ್ಷದ ಮೂಲಕ, ಸಂಘರ್ಷದ ಆಧಾರದ ಮೇಲೆ ಮತ್ತು ಸಂಘರ್ಷದ ನೆಲೆಯಲ್ಲಿ ಎನ್ನುವ ಸತ್ಯ. ಇತಿಹಾಸ ಕಾಲದಿಂದಲೂ ಮಾನವ ಜಗತ್ತಿನಲ್ಲಿ ಎರಡು ವರ್ಗಗಳು ಸಮಾಜದ ಎರಡು ಧೃವಗಳಂತೆ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿವೆ. ಸಮಾಜದ ಸ್ವರೂಪ ಮತ್ತು ಸಾಮುದಾಯಿಕ ಸಂಸ್ಕೃತಿ ಏನೇ ಆಗಿದ್ದರೂ ಈ ಎರಡು ವರ್ಗಗಳು ಮಾನವನ ಅಭ್ಯುದಯದ ಹಾದಿಯಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತಲೇ ಬಂದಿವೆ.



ಜಗತ್ತಿನ ನೈಸರ್ಗಿಕ ಮತ್ತು ಮಾನವ ನಿರ್ಮಿತ ಸಂಪತ್ತಿನ ಮೇಲೆ ಒಡೆತನ ಸಾಧಿಸಿ ತನ್ಮೂಲಕ ಜನಸಮುದಾಯಗಳ ಮೇಲೆ ತನ್ನ ಆಧಿಪತ್ಯ ಸಾಧಿಸುವ ಆಳುವ ವರ್ಗ ಒಂದಾದರೆ, ನಿರಂತರವಾಗಿ ದುಡಿಯುತ್ತಲೇ ತನ್ನದೇ ಆದ ಅಸ್ತಿತ್ವವನ್ನೂ ಲೆಕ್ಕಿಸದೆ ಸಂಪತ್ತಿನ ಸೃಷ್ಟಿಯಲ್ಲಿ ತೊಡಗಿಸಿಕೊಳ್ಳುತ್ತಾ ತನ್ನ ಸ್ವಂತಿಕೆಯನ್ನೂ ಕಳೆದುಕೊಳ್ಳುವ ದುಡಿಯುವ ವರ್ಗ ಮತ್ತೊಂದು. ಮಾನವ ಸಮಾಜದ ಮೇಲೆ ನಿಯಂತ್ರಣ ಸಾಧಿಸುವ ಸಂಸ್ಕೃತಿ, ಧರ್ಮ, ಆಡಳಿತ ವ್ಯವಸ್ಥೆ ಮತ್ತು ಆಳುವ ಅಸ್ತ್ರಗಳು ಸಮಾಜದ ಮೇಲ್‌ಸ್ತರದ ರಚನೆಯಾಗಿ ಆಧಿಪತ್ಯ ಸಾಧಿಸುತ್ತವೆ. ಮತ್ತೊಂದೆಡೆ, ಉತ್ಪಾದಕೀಯ ಶಕ್ತಿಗಳು ತಮ್ಮದೇ ಆದ ಉತ್ಪಾದಕೀಯ ವಿಧಾನಗಳ ಮೂಲಕ ಉತ್ಪಾದನಾ ಸಂಬಂಧಗಳನ್ನು ಸೃಷ್ಟಿಸಿಕೊಳ್ಳುತ್ತಾ ಮಾನವ ಸಮಾಜದ ಮುನ್ನಡೆಗೆ ಅಗತ್ಯವಾದ ಸಂಪನ್ಮೂಲಗಳನ್ನು ಸೃಷ್ಟಿಸುತ್ತಾ ಮುಂದುವರೆಯುತ್ತವೆ. ಮೊದಲನೆಯದನ್ನು ಸೂಪರ್ ಸ್ಟ್ರಕ್ಚರ್ ಅಥವಾ ಮೇಲ್ ರಚನೆ ಎಂದೂ ಎರಡನೆಯದನ್ನು ಬೇಸ್ ಅಥವಾ ತಳಹದಿ ಎಂದೂ ಮಾರ್ಕ್ಸ್ ಗುರುತಿಸುತ್ತಾನೆ. ಆಳುವ ವರ್ಗಗಳು, ಸಹಜವಾಗಿ ಸಂಪತ್ತಿನ ಒಡೆತನ ಹೊಂದಿರುವುದರಿಂದ, ಮೇಲ್ ರಚನೆಯನ್ನು ಪ್ರತಿನಿಧಿಸಿದರೆ, ದುಡಿಯುವ ವರ್ಗಗಳು ಸಂಪತ್ತನ್ನು ಸೃಷ್ಟಿಸುವ ಶ್ರಮಜೀವಿಗಳಾಗಿ ಜೀವ ಸವೆಸುತ್ತಾರೆ. ಸಮಾಜ ಯಾವುದೇ ಇರಲಿ, ಸಂಸ್ಕೃತಿ ಯಾವುದೇ ಇರಲಿ, ಮತಧರ್ಮಗಳು ಯಾವುದೇ ಇರಲಿ ಮಾನವ ಸಮಾಜದಲ್ಲಿ ಈ ಎರಡು ವರ್ಗಗಳು ಇರುವುದನ್ನು ಅಲ್ಲಗಳೆಯ ಲಾಗುವುದಿಲ್ಲ. ಹಾಗೆಯೇ ಈ ಶ್ರಮಜೀವಿಗಳ ಮತ್ತು ಸಂಪತ್ತಿನ ಒಡೆಯರ ನಡುವೆ ನಡೆಯುವ ನಿರಂತರ ಸಂಘರ್ಷವನ್ನು ಚಾರಿತ್ರಿಕ ಭೌತವಾದದ ನೆಲೆಯಲ್ಲಿ, ಸಮ ಸಮಾಜವನ್ನು ನಿರ್ಮಿಸುವ ವೈಜ್ಞಾನಿಕ ಸಮಾಜವಾದದ ನೆಲೆಯಲ್ಲಿ ಸುಸ್ಪಷ್ಟವಾಗಿ ವಿಶ್ಲೇಷಿಸುವ ಮಾರ್ಕ್ಸ್‌ವಾದವನ್ನೂ ಅಲ್ಲಗಳೆಯಲಾಗುವುದಿಲ್ಲ.

೨೧ನೆಯ ಶತಮಾನದ ನವ ಉದಾರವಾದ ಸೃಷ್ಟಿಸಿದ ಭ್ರಮಾಲೋಕವನ್ನು ಮಾರ್ಕ್ಸ್ ಸೃಷ್ಟಿಸುವುದಿಲ್ಲ. ೨೦ನೆಯ ಶತಮಾನದ ಔದ್ಯಮಿಕ ಬಂಡವಾಳ ವ್ಯವಸ್ಥೆ ರೂಪಿಸುವ ಮಂಜಿನ ಪರದೆಯನ್ನು ಮಾರ್ಕ್ಸ್ ರೂಪಿಸುವುದಿಲ್ಲ ಅಥವಾ ಹಿಂದೂ, ಕ್ರೈಸ್ತ, ಇಸ್ಲಾಂ, ಯಹೂದ್ಯ ಧರ್ಮಗಳು ಸೃಷ್ಟಿಸುವ ಮಾಯಾ ಲೋಕವನ್ನೂ ಮಾರ್ಕ್ಸ್ ಸೃಷ್ಟಿಸುವುದಿಲ್ಲ. ದುಡಿಯುವ ವರ್ಗಗಳಿಗಾಗಲೀ, ಸಂಪತ್ತಿನ ಒಡೆಯರಿಗಾಗಲೀ ಈ ಜಗತ್ತು ಒಂದೇ. ನಿಸರ್ಗ ಮಾನವ ಸಮಾಜಕ್ಕೆ ನೀಡುವ ಸಂಪನ್ಮೂಲಗಳೂ ಒಂದೇ. ಈ ಸಂಪನ್ಮೂಲಗಳನ್ನು ಎಲ್ಲರ ಒಳಿತಿಗಾಗಿ, ಎಲ್ಲರ ಉಳಿವಿಗಾಗಿ ಬಳಸಲು ಧರ್ಮಗಳು ಅಡ್ಡಿಯಾಗುತ್ತವೆ. ಏಕೆಂದರೆ ಧರ್ಮಗಳಲ್ಲಿ ಶ್ರೇಣೀಕೃತ ಶ್ರೇಷ್ಠತೆಯ ಅಹಮಿಕೆ ಅಂತರ್ಗತವಾಗಿದೆ. ಔದ್ಯಮಿಕ ಲೋಕ ಅಥವಾ ಬಂಡವಾಳದ ಜಗತ್ತು ಲಾಭಕೋರತನದಿಂದ ಸದಾ ತನ್ನ ಒಳಿತನ್ನೇ ಬಯಸುವುದರಿಂದ ಹಂಚಿ ತಿನ್ನುವುದನ್ನು ವಿರೋಧಿಸುತ್ತದೆ. ಹಾಗಾದರೆ ತಮ್ಮ ಬೆವರಿನಿಂದ ತಾವೇ ಸೃಷ್ಟಿಸುವ ಸಂಪತ್ತಿನಲ್ಲಿ ತಮ್ಮ ಪಾಲನ್ನು ಕೇಳಲು ಶ್ರಮಜೀವಿಗಳು ಏನು ಮಾಡಬೇಕು ? ಸಮಾಜದ ಮೇಲ್ ರಚನೆ ಅಥವಾ ಸೂಪರ್ ಸ್ಟ್ರಕ್ಚರ್‌ನ್ನು ಪ್ರತಿನಿಧಿಸುವ ಆಳುವ ವರ್ಗಗಳ ವಿರುದ್ಧ ನಿರಂತರವಾದ ಸಂಘರ್ಷದಲ್ಲಿ ತೊಡಗಿಸಿ ಕೊಳ್ಳಬೇಕು. ಇದು ಮಾರ್ಕ್ಸ್‌ನ ಮುಂಚಿನ ಜಗತ್ತಿನಲ್ಲಿ ಎಷ್ಟು ಸತ್ಯ ಎನಿಸುತ್ತದೋ ಅವನ ನಂತರದ ಲೋಕದಲ್ಲೂ ಅಷ್ಟೇ ಸತ್ಯ, ಅಲ್ಲವೇ ? ಈ ವರ್ಗ ಸಂಘರ್ಷ ಇರುವವರೆಗೂ ಮಾರ್ಕ್ಸ್‌ವಾದ ಜೀವಂತವಾಗಿರುತ್ತದೆ.

ಮತ ಧರ್ಮಗಳು ಮತ್ತು ಬಂಡವಾಳ ವ್ಯವಸ್ಥೆ ಮಾನವ ಸಮಾಜದ ಮುಂದೆ ಮಂಜಿನ ಪರದೆಯನ್ನು ಸೃಷ್ಟಿಸುವುದೇ ಅಲ್ಲದೆ ಆಕಾಶದಲ್ಲೊಂದು ತಾರೆ ಹೊಳೆಯುತ್ತಲೇ ಇರುತ್ತದೆ ಎಂಬ ಭ್ರಮೆ ಸೃಷ್ಟಿಸುತ್ತದೆ. ಆದರೆ ಮಾರ್ಕ್ಸ್ ಭ್ರಮೆ ಸೃಷ್ಟಿಸುವುದಿಲ್ಲ. ಪ್ರತಿಯೊಬ್ಬ ಮಾನವನ ಪಾದದಡಿಯಲ್ಲಿ ಭೂಮಿ ಬಿರುಕು ಬಿಡುತ್ತಿದೆ, ಈ ಕಂಪನ ಸಹಜವಾದುದಲ್ಲ, ಸಮಾಜದ ಮೇಲ್ ರಚನೆಯನ್ನು ನಿಯಂತ್ರಿಸುವ ಸಂಪತ್ತಿನ ಒಡೆಯರು ನಿಮ್ಮ ಕಾಲಡಿಯ ಭೂಮಿಯನ್ನು ಕಸಿದು ಕೊಳ್ಳುತ್ತಿದ್ದಾರೆ ಎಂಬ ಎಚ್ಚರಿಕೆಯನ್ನು ಮಾರ್ಕ್ಸ್ ತನ್ನ ವೈಜ್ಞಾನಿಕ ಸಮಾಜವಾದದ ಮೂಲಕ ನೀಡುತ್ತಲೇ ಇದ್ದಾನೆ. ಇದು ಕೇವಲ ಕಾರ್ಮಿಕ ವರ್ಗ ಅಥವಾ ನೌಕರ ವರ್ಗಕ್ಕೆ ಅಥವಾ ಕೆಳಸ್ತರದ ದುಡಿಯುವ ವರ್ಗಗಳಿಗೆ ಅನ್ವಯಿಸುವುದಲ್ಲ, ತಮ್ಮ ಶ್ರಮದಿಂದ ಸಂಪತ್ತನ್ನು ಸೃಷ್ಟಿಸುವ ಎಲ್ಲ ವರ್ಗಗಳಿಗೂ ಅನ್ವಯಿಸುವ ನಿಯಮ. ತಮ್ಮನ್ನು ಕಾರ್ಮಿಕ ಎನ್ನುವ ಚೌಕಟ್ಟಿನಿಂದ ಹೊರತಾಗಿಯೇ ಭಾವಿಸಿದ್ದ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ದುಡಿಮೆಗಾರರೂ ಇದನ್ನು ಮನಗಂಡಿರುವುದನ್ನು ಇತ್ತೀಚಿನ ಬೆಳವಣಿಗೆಗಳಲ್ಲಿ ಕಾಣಬಹುದು. ನಿತ್ಯ ಜೀವನದ ಈ ವಾಸ್ತವವನ್ನು ಅಲ್ಲಗಳೆಯ ಲಾಗುವುದಿಲ್ಲ ಎನ್ನುವುದಾದರೆ ಮಾರ್ಕ್ಸ್‌ವಾದವನ್ನೂ ಅಲ್ಲಗಳೆಯಲಾಗುವುದಿಲ್ಲ.

ನಿಜ, ಭ್ರಮೆ ಸೃಷ್ಟಿಸದ ಯಾವುದೇ ವಿದ್ಯಮಾನವೂ ಜನಾಕರ್ಷಣೀಯವಾಗಿರು ವುದಿಲ್ಲ. ಕಲಾತ್ಮಕ ಚಲನಚಿತ್ರಗಳೇ ಇದಕ್ಕೆ ಸಾಕ್ಷಿ. ನವ ಉದಾರವಾದ ಮತ್ತು ಮತಧರ್ಮಗಳ ಶ್ರೇಷ್ಠತೆ ಸೃಷ್ಟಿಸುವ ಭ್ರಮೆ ಜನಸಾಮಾನ್ಯರನ್ನು ವರ್ಗಾತೀತವಾಗಿ ಆಕರ್ಷಿಸುತ್ತದೆ. ಶ್ರಮಜೀವಿಗಳೂ ಸಹ ಧರ್ಮದ ಹಂಗಿನಲ್ಲಿ ಸಿಲುಕಿ ಕುಸಿಯುತ್ತಿರುವ ತಮ್ಮ ತಳಹದಿಗೆ ಮತ್ತೊಂದು ಧರ್ಮವನ್ನೋ, ಜಾತಿಯನ್ನೋ ಅಥವಾ ಸಮುದಾಯವನ್ನೋ ದೂಷಿಸುತ್ತಾ ಭ್ರಮಾಲೋಕದಲ್ಲಿ ತೇಲುತ್ತಿರುತ್ತಾರೆ. ಈ ಭ್ರಮಾಲೋಕದ ವಿಹಾರದ ನಡುವೆಯೇ ತಮ್ಮ ಮೂಲ ನೆಲೆ ಮತ್ತು ಅಸ್ತಿತ್ವವನ್ನು ಕಳೆದುಕೊಳ್ಳುತ್ತಲೇ ಇರುತ್ತಾರೆ. ಕಳೆದುಹೋದ ಅಸ್ತಿತ್ವ ಮತ್ತೊಂದು ಉನ್ನತ ಅಥವಾ ಶ್ರೇಷ್ಠ ನೆಲೆಯೊಡನೆ ಸಮಾಗಮವಾಗುವುದನ್ನು ಕಂಡು ಸಂಭ್ರಮಿಸುತ್ತಾ ತಮ್ಮ ಸ್ವಂತಿಕೆಯನ್ನೇ ಕಳೆದುಕೊಳ್ಳುತ್ತಾರೆ. ಆದರೆ ಈ ಸಂಭ್ರಮದ ನಡುವೆಯೇ ಕುಸಿಯುತ್ತಿರುವ ಕಾಲಡಿಯ ಭೂಮಿ ಶ್ರಮಜೀವಿಗಳ ಬೆವರನ್ನು ಮಣ್ಣಲ್ಲಿ ಮಣ್ಣಾಗಿಸುತ್ತಾ ಇತಿಹಾಸದಲ್ಲಿ ಒಂದಾಗುತ್ತಿರುತ್ತದೆ. ಈ ಮಣ್ಣಾದ ಬೆವರಿನ ಕಣಗಳಿಂದ ಮತ್ತೊಮ್ಮೆ ಶ್ರಮಜೀವಿಗಳ ಸಂಘರ್ಷದ ಹೆಜ್ಜೆ ಗುರುತುಗಳು ಮೂಡುವುದು ಖಚಿತ ಎಂದು ಮಾರ್ಕ್ಸ್ ಹೇಳುತ್ತಾನೆ. ಆಕಾಶಕಾಯಗಳನ್ನೇ ದಿಟ್ಟಿಸುತ್ತಾ ವಿಹರಿಸುವವರಿಗೆ ಕಾಲಡಿಗೆ ಮೆತ್ತಿದ ಧೂಳು ಕಾಣಲು ಸಾಧ್ಯವಿಲ್ಲ. ಹಾಗೆಂದ ಮಾತ್ರಕ್ಕೆ ಧೂಳು ಮೆತ್ತಿಲ್ಲ ಎನ್ನಲಾಗುವುದಿಲ್ಲ. ಈ ಧೂಳಿನ ಕಣಗಳನ್ನು ಅಳಿಸಿಹಾಕಲು ನವ ಉದಾರವಾದದ ಮಾಯಾಲೋಕ ತನ್ನದೇ ಆದ ಪ್ರಯತ್ನಗಳನ್ನು ಮಾಡುತ್ತಿದೆ. ಆದರೆ ಶ್ರಮಜೀವಿಗಳ ಬೆವರಿನ ಕಣಗಳು, ಪಾದದಡಿಯ ಧೂಳಿನ ಕಣಗಳು ಪರಮಾಣು ಕಣಗಳಂತೆ ತನ್ನನ್ನು ತಾನೇ ವಿಘಟಿಸಿಕೊಳ್ಳುತ್ತಾ ಹೋಗುತ್ತದೆ. ಈ ಪ್ರಕ್ರಿಯೆ ಸದಾ ಸತ್ಯ ಎನ್ನುವುದಾದರೆ ಮಾರ್ಕ್ಸ್‌ವಾದವೂ ಸದಾ ಸತ್ಯವೇ.

೨೦೦ ಪೂರೈಸಿರುವ ಮಾರ್ಕ್ಸ್ ೧೦೦೦ ದಾಟುತ್ತಾನೆ. ಅವನ ಪ್ರತಿಮೆಗಳು ಇಲ್ಲವಾಗ ಬಹುದು. ಆದರೆ ಮಾರ್ಕ್ಸ್‌ವಾದದ ವರ್ಗ ಸಂಘರ್ಷದ ಕೂಗು ಕೊನೆಯಾಗುವುದೇ ಇಲ್ಲ. ಕೊನೆಗಾಣದ ಕೂಗು ಕೆಲಕಾಲ ಕೇಳಿಸದಿರಬಹುದು. ಆದರೆ ಎಂದಿಗೂ ಅಪ್ರಸ್ತುತವಾಗುವುದಿಲ್ಲ, ಪ್ರತಿಧ್ವನಿಸುತ್ತಲೇ ಇರುತ್ತದೆ. ಮಾರ್ಕ್ಸ್‌ವಾದವೂ ಹಾಗೆಯೇ.

ನಾ. ದಿವಾಕರ
ಮನೆ ಸಂಖ್ಯೆ ೭೯, ಈಶಾವಾಸ್ಯಂ ನಾಗಲಕ್ಷ್ಮಿ ಮಾರ್ಗ, ೫ನೇ ಅಡ್ಡರಸ್ತೆ ಎಂಎಂಜಿ ಟೆಂಪಲ್ ಬೆಲ್ ಬಡಾವಣೆ, ಲಿಂಗಾಂಬುಧಿ ರಸ್ತೆ, ಶ್ರೀರಾಂಪುರ ೨ನೇ ಹಂತ, ಮೈಸೂರು – ೫೭೦ ೦೨೩

ಮಾರ್ಕ್ಸ್‌ವಾದದ ಬಗ್ಗೆ ಎರಡು ಶತಮಾನಗಳಿಂದಲೂ ಹಲವು ನೆಲೆಗಳಲ್ಲಿ ಚರ್ಚೆಗಳು ನಡೆಯುತ್ತಾ ಬಂದಿವೆ. ಉತ್ಪಾದನಾ ಕ್ಷೇತ್ರದಲ್ಲಿನ ಬದಲಾವಣೆಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ನಾಗರಿಕತೆಯ ಚರಿತ್ರೆಯಲ್ಲಿ ಅದರ ಪಾತ್ರವು ಮಹತ್ತರವಾದುದು. ವಿವಿಧ ಸಾಮಾಜಿಕ ಸಂರಚನೆಗಳಿಗೆ ಅದುವೇ ಮೂಲ. ಉತ್ಪಾದನಾ ಸಾಧನಗಳು ಯಾರ ಒಡೆತನದಲ್ಲಿವೆ ಮತ್ತು ಉತ್ಪಾದನಾ ಸಂಬಂಧಗಳು ಎಂಥವು ಎಂಬುದು ಮೂಲಭೂತ ಅಂಶವೆಂದು ಚಾರಿತ್ರಿಕ ಭೌತವಾದವು ಪ್ರತಿಪಾದಿಸುತ್ತದೆ. ನಾಗರಿಕತೆಯ ವಿವಿಧ ಹಂತಗಳನ್ನು ಗಮನಿಸಿದರೆ ಎಲ್ಲವೂ ನಿರೀಕ್ಷೆಯಂತೆಯೇ ನಡೆದಿಲ್ಲವೆಂಬುದು ನಿಜ, ಆದರೆ ಹೊಸ ಉತ್ಪಾದನಾ ಸಾಧನಗಳು ಮತ್ತು ವಿಧಾನಗಳು ಮಾನವನ ಹತೋಟಿಯನ್ನು ಮೀರಿ ಹೋಗುವುದಂತೂ ಇಲ್ಲ. ಸಾಧನಗಳನ್ನು ರೂಪಿಸುವವರು ಅವನ್ನು ಬೆಳೆಸುತ್ತಾರೆ ಮತ್ತು ಬಳಸುತ್ತಾರೆ. ಆ ಅರ್ಥದಲ್ಲಿ ಈಗಿನ ಬದಲಾವಣೆಯು ತೀರಾ ಹೊಸದೇನೂ ಅಲ್ಲ. ಮಾರ್ಕ್ಸ್ ಆಗಲಿ ಬೇರೆ ಯಾರೇ ಆಗಲಿ ಬೆಳವಣಿಗೆಗಳನ್ನು ತಿರಸ್ಕರಿಸುವುದಿಲ್ಲ, ಆದರೆ ಉತ್ಪಾದನಾ ಸಂಬಂಧಗಳಿಗೆ ಒತ್ತುಕೊಡುತ್ತಾರೆ. ಇಂದಿನ ಸನ್ನಿವೇಶವು ಅದಕ್ಕೆ ಹೊರತಾಗಿದೆಯೇ? ಇದರ ಬಗ್ಗೆ ಒಂದು ಆರೋಗ್ಯಯುತವಾದ ಚರ್ಚೆಯ ಅಗತ್ಯವಿದೆ.



# ವೈಜ್ಞಾನಿಕ ತಾಂತ್ರಿಕ ಕ್ರಾಂತಿ
# ಒಂದು ಮಹತ್ತರ ಪರಿವರ್ತನೆಯ ಯುಗ

೧೮-೨೦ನೇ ಶತಮಾನಗಳು ಕೈಗಾರಿಕಾ ಯುಗದ ಹುಟ್ಟು -ಬೆಳವಣಿಗೆಗಳಿಗೆ ಸಾಕ್ಷಿಯಾಗಿದ್ದಂತೆ ಇಂದು ನಾವು ವಿಜ್ಞಾನ - ತಾಂತ್ರಿಕ ಹಾಗೂ ಮಾಹಿತಿ-ಸಂಪರ್ಕ ಸಾಧನಗಳ ಕ್ಷೇತ್ರಗಳಲ್ಲಿ ಉಂಟಾಗಿರುವ ಕ್ರಾಂತಿ ಹಾಗೂ ಅವು ಜನಜೀವನದ ಮೇಲೆ ಆಗುಮಾಡಿರುವ ಪರಿಣಾಮಗಳಿಗೆ ಸಾಕ್ಷಿಯಾಗಿದ್ದೇವೆ. ವಿಜ್ಞಾನ-ತಾಂತ್ರಿಕ ಸಾಧನೆಗಳು ಉಂಟುಮಾಡಿರುವ ಮಹತ್ತರ ಹಾಗೂ ಗುಣಾತ್ಮಕ ಬದಲಾವಣೆಗಳನ್ನು ಗಮನಿಸದೆ ನಮ್ಮ ಮುಂದಿನ ಅದೆಷ್ಟೋ ಸವಾಲುಗಳು - ಪ್ರಶ್ನೆಗಳನ್ನು ಸಮರ್ಪಕವಾಗಿ ಹಾಕಿಕೊಳ್ಳಲು - ಉತ್ತರಿಸಲು ಸಾಧ್ಯವಿಲ್ಲ ಎಂದರೆ ತಪ್ಪಾಗಲಾರದು. ಏಕೆಂದರೆ, ಈ ಕ್ರಾಂತಿಯ ಪ್ರಭಾವದಿಂದ ಹೊರತಾದ ಕ್ಷೇತ್ರ ಯಾವುದೂ ಇಲ್ಲ.

ಕೈಗಾರಿಕಾ ಕ್ರಾಂತಿಯು ಬೀರಿದ ಪರಿಣಾಮದಿಂದಾಗಿ ಜಗತ್ತಿನ ವಿವಿಧ ಸಮಾಜಗಳ ಮೇಲೆ ಉಂಟಾದ ಬದಲಾವಣೆಗಳನ್ನು ಆಳವಾಗಿ ಮತ್ತು ವೈಜ್ಞಾನಿಕವಾಗಿ ಅಭ್ಯಸಿಸಿದವನು ಆಧುನಿಕ ಯುಗದ ಮಹಾನ್ ಚಿಂತಕ ಕಾರ್ಲ್ ಮಾರ್ಕ್ಸ್. ಬಂಡವಾಳಶಾಹಿ ವ್ಯವಸ್ಥೆಯ ಬುನಾದಿ, ಬೆಳವಣಿಗೆಯ ಹಾದಿ ಸಮಾಜವಾದಿ - ಕಮ್ಯುನಿಸ್ಟ್ ವ್ಯವಸ್ಥೆಗಳಿಗೆ ಹಿನ್ನೆಲೆಯಾದ ಸಾಮಾಜಿಕ ನಿಯಮಗಳನ್ನು ಅರ್ಥೈಸಿ ಪ್ರಚುರಗೊಳಿಸಿದ ಖ್ಯಾತಿ ಅವರದು. ಕೈಗಾರಿಕಾ ಕ್ರಾಂತಿ ಹಾಗೂ ಪ್ರಕೃತಿ, ಮಾನವ ಮತ್ತು ಮಾನವ ಸಮಾಜಗಳ ಚಲನೆ - ಬೆಳವಣಿಗೆ ಕುರಿತ ಅವರ ಅಧ್ಯಯನದಿಂದ ಹೊರಹೊಮ್ಮಿದ ವಿಚಾರಗಳು ಇಡೀ ವಿಶ್ವದ ಚಿಂತನಶೀಲ ಮನಸ್ಸುಗಳ ಮೇಲೆ ಅಗಾಧವಾದ ಪರಿಣಾಮ ಬೀರಿವೆ. ಕೈಗಾರಿಕಾ ಕ್ರಾಂತಿಯ ಪ್ರಭಾವದಿಂದ ವಿಜ್ಞಾನ - ತಾಂತ್ರಿಕ ಹಾಗೂ ಇತರೆ ಕ್ಷೇತ್ರಗಳಲ್ಲಿ ಹಲವಾರು ಹೊಸ ಹೊಸ ವಿಭಾಗಗಳು, ವಿಷಯಗಳು ಹುಟ್ಟಿಕೊಂಡವು. ಇವುಗಳನ್ನು ಕುರಿತ ಕಾರ್ಲ್ ಮಾರ್ಕ್ಸ್‌ರ ಅಭ್ಯಾಸ ಮತ್ತು ಅವರು ತಲುಪಿದ ಕೆಲವು ಹೊಸ ಮತ್ತು ಮೂಲಭೂತ ತೀರ್ಮಾನಗಳನ್ನು ಇಂದಿನ ಚಿಂತಕರು ಮತ್ತು ಸಾಮಾಜಿಕ ಕಾರ್ಯಕರ್ತರು ಬಳಸುತ್ತಿದ್ದಾರೆ. ಒಟ್ಟಾರೆ, ಕೈಗಾರಿಕಾ ಕ್ರಾಂತಿಯು ಇಡೀ ಸಮಾಜದ ಮೇಲೆ ಹಲವಾರು ಬಗೆಗಳಲ್ಲಿ ತನ್ನ ಆಳವಾದ ಪ್ರಭಾವವನ್ನು ಬೀರಿದೆ ಎಂಬುದು ನಿರ್ವಿವಾದ.

**ಹೊಸ ತಾಂತ್ರಿಕ ಕ್ರಾಂತಿಯ ಪರಿಣಾಮ**

ಎರಡನೆಯ ವಿಶ್ವ ಯುದ್ಧದ ನಂತರ ಹಲವು ಗಮನಾರ್ಹ ಘಟನೆಗಳು ಮತ್ತು ಬೆಳವಣಿಗೆಗಳು ಉಂಟಾದವು. ಅದರಲ್ಲೂ ಮುಖ್ಯವಾಗಿ ಕಳೆದ ನಾಲ್ಕು ದಶಕಗಳಲ್ಲಿ ನಡೆದ ಬದಲಾವಣೆಗಳಲ್ಲಿ ೧೮-೨೦ನೇ ಶತಮಾನದ ಕೈಗಾರಿಕಾ ಕ್ರಾಂತಿಯ ಪರಿಣಾಮಕ್ಕಿಂತ ಹೆಚ್ಚಿನ ಗಾತ್ರ, ವೇಗ, ವಿಸ್ತಾರದ ಸ್ವರೂಪವನ್ನು ಪಡೆದಂತಹ ಒಂದು ಹೊಸ ಕೈಗಾರಿಕಾ ಕ್ರಾಂತಿಯನ್ನು ನಾವು ಕಾಣುತ್ತಿದ್ದೇವೆ. ಮುಖ್ಯವಾಗಿ ಇದುವರೆಗೆ ಸಮಾಜ ಕಂಡರಿಯದ ಹೊಸ ಉತ್ಪಾದನಾ ವಿಧಾನ ಇದರ ಮುಖ್ಯ ಲಕ್ಷಣ. ಮಾಹಿತಿ ಕ್ರಾಂತಿಯು ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳನ್ನು ಒಳಗೊಂಡಂತೆ ನಮ್ಮ ಜೀವನವನ್ನು ತೀವ್ರವಾಗಿ ಪ್ರಭಾವಿಸುತ್ತಿದೆ.

ಈ ಹೊಸ ಮಾಹಿತಿ ಕ್ರಾಂತಿಯ ಪ್ರಕ್ರಿಯೆ ೪-೫ ದಶಕಗಳಿಂದ ಸಾಗಿದೆಯಾದರೂ ಅದರ ಪ್ರಭಾವವನ್ನು ಆರಂಭದ ಹಂತದಲ್ಲಿ ನಿರ್ಲಕ್ಷಿಸಲಾಗಿತ್ತು ಇಲ್ಲವೇ ಕಡೆಗಣಿಸಲಾಗಿತ್ತು. ಸೋವಿಯತ್ ಒಕ್ಕೂಟ ಮತ್ತು ಕೆಲವು ಪೂರ್ವ ಯೂರೋಪ್ ರಾಷ್ಟ್ರಗಳ ಅಧಿಕಾರ ರೂಪಗಳು ತೀವ್ರವಾಗಿ ಬದಲಾಗಿದ್ದೂ ಒಳಗೊಂಡಂತೆ ಇಡೀ ವಿಶ್ವದ ಬೆಳವಣಿಗೆಯನ್ನು ಪ್ರಭಾವಿಸಿದ ಇತರೆ ಕೆಲವು ಮುಖ್ಯ ಬೆಳವಣಿಗೆಗಳು ನಮ್ಮ ಗಮನವನ್ನು ಸೆಳೆದವು. ಅವು ಹಾಗೆ ಬದಲಾಗಿದ್ದಾದರೂ ಏಕೆ ಎಂಬ ಪ್ರಶ್ನೆಗೆ ಹಲವಾರು ಕಾರಣಗಳನ್ನು ಮುಂದೊಡ್ಡಬಹುದಾದರೂ, ಅವೆಲ್ಲವನ್ನೂ ನಾವೀಗ ಚರ್ಚಿಸುತ್ತಿಲ್ಲ. ಆದರೂ, ಒಂದು ಪ್ರಮುಖ ಕಾರಣವಂತೂ ಈ ಹೊಸ ಕೈಗಾರಿಕಾ ಕ್ರಾಂತಿ.

ಸಾಮಾಜಿಕ ಭೌತವಾದದ ಕಲ್ಪನೆ ಅಥವಾ ಚಾರಿತ್ರಿಕ ಭೌತವಾದದ ನಿಯಮಗಳು ಸಮಾಜವಾದಿ ಸಮಾಜಗಳಿಗೂ ಅನ್ವಯಿಸುತ್ತವೆ, ಅಲ್ಲವೆ? ದುರದೃಷ್ಟವೆಂದರೆ, ಆ ಸಮಾಜಗಳ ಆಡಳಿತಗಾರರು ಸಮಾಜವಾದವನ್ನು ಬದಲಾಗದ ಯಾವತ್ತೂ ಅಸ್ತಿತ್ವದಲ್ಲಿರುವ ಅಂಶಗಳೆಂದು ಪರಿಗಣಿಸಿದರು. ವಾಸ್ತವದಲ್ಲಿ, ಹೊಸ ಉತ್ಪಾದನಾ ಸಾಧನಗಳ ಉಗಮ, ಆ ಸಮಾಜಗಳನ್ನೂ ಒಳಗೊಂಡಂತೆ ಇಡೀ ವಿಶ್ವದಲ್ಲಿ ರೂಪುಗೊಳ್ಳುತ್ತಿದ್ದ ಪ್ರಕ್ರಿಯೆ, ಇವನ್ನು ನಿರ್ಲಕ್ಷಿಸಲಾಯಿತು. ಇದರ ಪರಿಣಾಮವಾಗಿ,

ಮೂಲ : **ಅನಿಲ್ ರಾಜಿಮ್‌ವಾಲೆ,** ಸಂಗ್ರಹಾನುವಾದ : **ಜಿ. ನಾಗಕುಮಾರ**

ಅವರು ಉತ್ಪಾದನಾ ಸಂಬಂಧಗಳನ್ನು ಬದಲಾವಣೆ ಮತ್ತು ತನ್ಮೂಲಕ ಕೂಲಂಕಷ ಪರೀಕ್ಷೆಗೆ ಒಡ್ಡುವ ಮೂಲಕ ಪರಿಸ್ಥಿತಿಯನ್ನು ಸರಿ ಹೊಂದಿಸಲು ಒತ್ತಾಯಿಸಿದರು. ಆದರೆ ಅದನ್ನು ಗಣನೆಗೆ ತೆಗೆದುಕೊಳ್ಳದ ಆಡಳಿತ ಪಕ್ಷ ಮತ್ತು ಅಧಿಕಾರಶಾಹಿಗಳು ವರ್ಗ ಸಮಾಜದ ರಚನೆಯಲ್ಲಿ ಅಗತ್ಯ ಬದಲಾವಣೆಗಳನ್ನು ತರಲು ಅನುಮತಿಸಲಿಲ್ಲ. ಈ ನಡುವೆ ಸಮಾಜದಲ್ಲಿ ಉಂಟಾಗಿದ್ದ ಬಿಕ್ಕಟ್ಟುಗಳು – ವಿರೋಧಾಭಾಸಗಳು ಹೊರತರುತ್ತಿದ್ದ ಹೊಸ ಬೇಡಿಕೆಗಳು, ಅಗತ್ಯಗಳನ್ನು ನಿರ್ಲಕ್ಷ್ಯಕ್ಕೆ ಒಳಪಡಿಸಲಾಯಿತು. ಈ ಬಿಕ್ಕಟ್ಟು – ಸಾಮಾಜಿಕ ವಿಷಮತೆಗಳ ಪರಿಣಾಮವಾಗಿ ಆ ದೇಶಗಳಲ್ಲಿನ ಅಧಿಕಾರಶಾಹಿ ಕೇಂದ್ರಿತ ಸರಕಾರಗಳು ಕುಸಿದವು.

ಈ ಬೆಳವಣಿಗೆಯಿಂದಾಗಿ ಸಮಾಜವಾದಿಗಳು ಹಾಗೂ ಮಾರ್ಕ್ಸ್‌ವಾದಿಗಳು ಅಸ್ತಿತ್ವದಲ್ಲಿರುವ ಅಥವಾ ಪಾರಂಪರಿಕ ಮಾರ್ಕ್ಸ್‌ವಾದದ ಬಹಳಷ್ಟು ಭಾಗಗಳನ್ನು ಮರುಚಿಂತನೆಗೆ ಒಳಪಡಿಸುವ ಒತ್ತಾಯವು ತೋರಿಬಂತು. ಇದೇ ಸಂದರ್ಭದಲ್ಲಿ, ಒಂದು ಹೊಸ ವಿಶ್ವ ಮಾರುಕಟ್ಟೆಯಿಂದ ವಿಶ್ವವನ್ನು ಒಗ್ಗೂಡಿಸುವ ನಾನಾ ಪ್ರಯತ್ನಗಳು ರೂಪುಗೊಳ್ಳುತ್ತಿದ್ದವು; ಸಾಮಾಜಿಕವಾಗಿ ವರ್ಗಗಳ ಸಂಯೋಜನೆ ಬದಲಾಗುತ್ತಿತ್ತು ಮತ್ತು ಈ ಪ್ರಕ್ರಿಯೆ ಇಂದೂ ಸಾಗಿದೆ, ಹೊಸ ಸಾಮಾಜಿಕ ಶಕ್ತಿಗಳು – ವಿಭಾಗಗಳು ಹೊರಹೊಮ್ಮುತ್ತಿವೆ. ಈ ಎಲ್ಲ ಬೆಳವಣಿಗೆಗಳನ್ನು ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಹೇಗೆ ಅರ್ಥ ಮಾಡಿಕೊಳ್ಳುವುದು ಮತ್ತು ವಿವರಿಸುವುದು?

**ಹೊಸ ವಿಶ್ಲೇಷಣೆ ಬೇಕಿದೆ**

೧೯೯೦ರ ದಶಕದ ವೇಳೆಗೆ ತಮ್ಮ ಮುಂದಿರುವ ಸವಾಲುಗಳನ್ನು ಅರ್ಥೈಸಲು – ಎದುರಿಸಲು ಹೊಸ 'ಕೈಗಾರಿಕಾ' ಕ್ರಾಂತಿಯ ಲಕ್ಷಣ – ಪರಿಣಾಮಗಳನ್ನು ಇನ್ನೂ ಆಳವಾಗಿ ಮತ್ತು ಸಮಾಜವನ್ನು ಹೊಸದಾಗಿ ಅಧ್ಯಯನ ಮಾಡಬೇಕಾದುದರ ಅಗತ್ಯ ಮಾರ್ಕ್ಸ್‌ವಾದಿಗಳು ಮತ್ತು ವೈಜ್ಞಾನಿಕ ಸಮಾಜವಾದಿಗಳಿಗೆ ಸ್ಪಷ್ಟವಾಯಿತು. ಆದ್ದರಿಂದ ಮಾರ್ಕ್ಸ್‌ವಾದವನ್ನು ಸಮಕಾಲೀನಗೊಳಿಸುವ – ನವೀಕರಿಸುವ ಕೆಲಸವನ್ನು ಗಂಭೀರವಾಗಿ ಪರಿಗಣಿಸಲಾಯಿತು. ವೈಜ್ಞಾನಿಕ ಬುನಾದಿಯನ್ನು ಒದಗಿಸುವ ಚಿಂತನ – ವ್ಯವಸ್ಥೆ ಮಾರ್ಕ್ಸ್‌ವಾದ ಎಂಬುದು ನಿರ್ವಿವಾದ. ಆದರೆ ಮಾರ್ಕ್ಸ್‌ವಾದವೂ ಅಭಿವೃದ್ಧಿ ಮತ್ತು ಬದಲಾವಣೆಯ ನಿಯಮಗಳಿಗೆ ಒಳಪಟ್ಟಿರುತ್ತದೆ. ಆದ್ದರಿಂದ, ಸಹಜವಾಗಿಯೇ ಇದೂ ಬದಲಾಗಬೇಕು. ಅಂದರೆ, ಇಂದಿನ ವಾಸ್ತವ ಸನ್ನಿವೇಶಗಳ ನ್ನಾಧರಿಸಿ ವಿಶ್ಲೇಷಣೆ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಇದು ಸತ್ತ ಸೂತ್ರೀಕರಣಗಳ ಸಂತೆಯಾಗಿ ಮಾರ್ಪಾಡಾಗುವ ಅಪಾಯವಿದೆ. ಲೆನಿನ್ ಹೇಳಿದಂತೆ, ಮಾರ್ಕ್ಸ್‌ವಾದವು ಒಂದು ಮತದ ಸಿದ್ಧಾಂತವಾಗಿರದೆ ಕ್ರಿಯೆಯ ಮಾರ್ಗದರ್ಶಿಯಾಗಿದೆ; ಮಾರ್ಕ್ಸ್‌ವಾದ ವಿಜ್ಞಾನವೇ ಹೊರತು ಸ್ಥಿರ – ಧಾರ್ಮಿಕ ನಂಬಿಕೆಗಳ ಸಂಗ್ರಹವಲ್ಲ.

ವೈಜ್ಞಾನಿಕ ಮತ್ತು ತಾಂತ್ರಿಕ ಕ್ರಾಂತಿ ಹಾಗೂ ಸಮಾಜದ ಮೇಲಿನ ಅದರ ಪರಿಣಾಮಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡುವ, ತನ್ಮೂಲಕ ಮಾರ್ಕ್ಸ್‌ವಾದವನ್ನು ಪ್ರಸ್ತುತಗೊಳಿಸುವ ಉದ್ದೇಶದಿಂದ ಪ್ರೇರಿತನಾಗಿ ಪ್ರಸ್ತುತ ಲೇಖಕನು ಕಳೆದ ಕೆಲವು ದಶಕಗಳಿಂದ ಹಲವು ಲೇಖನಗಳನ್ನು, ಕಿರು – ಪುಸ್ತಕಗಳು ಮತ್ತು ಹಲವಾರು ಕೃತಿಗಳನ್ನು ರಚಿಸಿರುವುದುಂಟು. ಈ ವಿಷಯವನ್ನು ಕುರಿತಂತೆ ಇನ್ನೂ ಕೆಲವೊಂದು ಪುಸ್ತಕಗಳು ಹೊರಬರಲಿವೆ.

ಒಂದು ವಿಷಯವಂತೂ ಸ್ಪಷ್ಟ. ಅಸ್ತಿತ್ವದಲ್ಲಿರುವ ಮತ್ತು ಸಾಂಪ್ರದಾಯಿಕ ಮಾರ್ಕ್ಸ್‌ವಾದದ ಎಲ್ಲ ಪರಿಕಲ್ಪನೆಗಳು ಪ್ರಸ್ತುತತೆಯನ್ನು ಕಾಯ್ದುಕೊಂಡಿವೆ ಎನ್ನಲಾಗುವುದಿಲ್ಲ. ಏಕೆಂದರೆ ಅವನ್ನು ನಾವು ಸದಾ ನವೀಕರಿಸಿಕೊಳ್ಳುತ್ತಾ ಸಾಗಿಲ್ಲ. ಸಮಯ ಕಳೆದಂತೆ ಹಲವು ಪ್ರಸ್ತುತತೆಯನ್ನು ಕಳೆದುಕೊಂಡಿವೆ. ಹೀಗಾಗಿ, ಪ್ರತಿ ವಿಷಯಕ್ಕೂ ಮಾರ್ಕ್ಸ್‌ವಾದದತ್ತ ಹೊರಳುವುದು ಸೂಕ್ತ – ಸಾಧ್ಯವಲ್ಲ; ಮಾರ್ಕ್ಸ್‌ವಾದ ಹಿಂದೆ ಬೀಳುವ ಅಪಾಯದಿಂದ ಪಾರಾಗಲು ಅದರ ಗಂಭೀರ ಅವಲೋಕನ ಹಾಗೂ ನವೀಕರಣ ಇಂದು ಅತ್ಯಗತ್ಯವಾಗಿದೆ. ಇದರ ಭಾಗವಾಗಿ ಸಾಮಾಜಿಕ ಅಭಿವೃದ್ಧಿಯ ಕ್ಷೇತ್ರದಲ್ಲಿ ಹೊರಹೊಮ್ಮುತ್ತಿರುವ ಹೊಸ ಪ್ರವೃತ್ತಿಗಳು, ನೈಸರ್ಗಿಕ ಮತ್ತು ಸಾಮಾಜಿಕ ವಿಜ್ಞಾನಗಳಲ್ಲಿನ ಹೊಸ ಬೆಳವಣಿಗೆ – ಅನ್ವೇಷಣೆಗಳ ಅಧ್ಯಯನದ ಮೂಲಕ ಮಾರ್ಕ್ಸ್‌ವಾದವನ್ನು ಸಮೀಕರಿಸುವ, ಶ್ರೀಮಂತಗೊಳಿಸುವ ಕೆಲಸ ಆಗಬೇಕಿದೆ. ವೈಜ್ಞಾನಿಕ ಸಮಾಜವಾದದ ಪ್ರಾಥಮಿಕ ಜವಾಬ್ದಾರಿ ಇದಾಗಿದೆ, ಅಲ್ಲವೆ?

**ಹೊಸ ತಾಂತ್ರಿಕ ಕ್ರಾಂತಿ ಮತ್ತು ಸಾಮಾಜಿಕ ಅಭಿವೃದ್ಧಿಯ ಹೊಸ ಪ್ರವೃತ್ತಿ/ವಿಶಿಷ್ಟತೆಗಳು**

ವೈಜ್ಞಾನಿಕ ಮತ್ತು ತಾಂತ್ರಿಕ ಕ್ರಾಂತಿ (ಹೊಸ ತಾಂತ್ರಿಕ ಕ್ರಾಂತಿ ಎಂದೂ ಕರೆಯಲ್ಪಡುತ್ತದೆ) ಮುಖ್ಯವಾಗಿ ಎರಡನೇ ವಿಶ್ವ ಯುದ್ಧದ ತರುವಾಯದ ಸಮಯದಲ್ಲಿ ಉಂಟಾದ ಕಂಪ್ಯೂಟರ್ ಕ್ರಾಂತಿಯ ಫಲಿತಾಂಶವಾಗಿದೆ. ಕಂಪ್ಯೂಟರ್‌ಗಳ ಗಾತ್ರ, ವೇಗ ಹಾಗೂ ಅವುಗಳ ಗಣಕ ಶಕ್ತಿಯಲ್ಲಿ ಉಂಟಾದ ಅಗಾಧವಾದ ಬದಲಾವಣೆ – ಬೆಳವಣಿಗೆಗಳು; ಉತ್ಪಾದನಾ ಕ್ಷೇತ್ರವನ್ನೂ ಒಳಗೊಂಡಂತೆ ಇತರೆ ಸಾಮಾಜಿಕ–ಆರ್ಥಿಕ ಕ್ಷೇತ್ರದಲ್ಲಿನ ಅವುಗಳ ಅಳವಡಿಕೆಗಳು ಈ ಕಂಪ್ಯೂಟರ್ ಕ್ರಾಂತಿಯ ಮುಖ್ಯ ಲಕ್ಷಣಗಳು. ೧೯೫೦–೬೦ರ ದಶಕಗಳ ಕಂಪ್ಯೂಟರ್‌ಗಳ ದೈತ್ಯ ಗಾತ್ರವನ್ನು ಇಂದಿನ ಲ್ಯಾಪ್‌ಟಾಪ್, ಡೆಸ್ಕ್‌ಟಾಪ್, ಮೊಬೈಲ್ ಫೋನ್ ಮತ್ತಿತರೆ ಸಾಧನಗಳ ಜೊತೆ ಹೋಲಿಸಿ ನೋಡಿ! ೧೯೭೦ರ ಹೊತ್ತಿಗೆ ಇವು ಮೈನ್‌ಫ್ರೇಮ್ ಕಂಪ್ಯೂಟರ್‌ಗಳ ರೂಪ ತಾಳಿ, ಇಡೀ ಕಟ್ಟಡ ಇಲ್ಲವೇ ಹಲವಾರು ಕೋಣೆಗಳನ್ನು ಆಕ್ರಮಿಸಿಕೊಂಡವು. ದೊಡ್ಡ ವ್ಯವಹಾರಗಳು, ಸರಕಾರಿ ಸಂಸ್ಥೆಗಳು ಇಲ್ಲವೇ ಮಿಲಿಟರಿ ಉಪಯೋಗಗಳಿಗಾಗಿ ಬಳಕೆಯಾಗುತ್ತಿದ್ದ ದೈತ್ಯ ಕಂಪ್ಯೂಟರ್‌ಗಳ ಗಣಕ ಶಕ್ತಿಗಿಂತಲೂ ಮಿಕ್ಕಿ ಶಕ್ತಿಯುತ ಕಂಪ್ಯೂಟಿಂಗ್ ಪವರ್ ಹೊಂದಿದ್ದವು. ಇಂದು ವೈಯಕ್ತಿಕ ಬಳಕೆಯ ಸಾಧನಗಳಾಗಿವೆ.

ಗಾತ್ರದಲ್ಲಿ ಕುಸಿತ – ಕಂಪ್ಯೂಟಿಂಗ್ ಶಕ್ತಿಯಲ್ಲಿ ಹೆಚ್ಚಳ ಇಂದಿನ ಎಲೆಕ್ಟ್ರಾನಿಕ್ಸ್ ಹಾಗೂ ಕಂಪ್ಯೂಟರ್ ಕ್ಷೇತ್ರದಲ್ಲಿ ನಡೆದಿರುವ ಪ್ರತಿನಿತ್ಯದ ಬೆಳವಣಿಗೆ, ಇದು ಎಲ್ಲರಿಗೂ ತಿಳಿದ ವಿಷಯವೇ. ಇಲೆಕ್ಟ್ರಾನಿಕ್ ಚಿಪ್‌ಗಳ ವಿನ್ಯಾಸ ಮತ್ತು ಉತ್ಪಾದನಾ ವಿಧಾನದಲ್ಲಿ ಉಂಟಾಗಿರುವ ಕ್ರಾಂತಿ, ಇದಕ್ಕೆಲ್ಲಾ ನಾಂದಿ. ಒಟ್ಟಾರೆ ಈ ಕ್ಷೇತ್ರದಲ್ಲಿ ಮುಂದುವರಿಯುತ್ತಿರುವ ತ್ವರಿತ ಗತಿಯ ಪ್ರಗತಿ ಹಿಂದೆಂದೂ ಕಂಡರಿಯದ ಹೆಚ್ಚು ಗುಣಾತ್ಮಕವಾದ ಹೊಸ ಉತ್ಪಾದನೆ – ಮಾಹಿತಿ ಸಂಗ್ರಹ – ವಿನಿಮಯದ ಸಾಧನಗಳ ಆವಿಷ್ಕಾರ – ಅಳವಡಿಕೆಗೆ ಕಾರಣವಾಗಿದೆ. ಇದರ ನೇರ ಮತ್ತು ನಿರ್ಲಕ್ಷಿಸಲಾಗದ ಪರಿಣಾಮ ಸಮಾಜದ ರಚನೆ / ಸ್ವಭಾವದ ಮೇಲೆ ಕಾಣಬಹುದು.



**ಹೊಸ ಉತ್ಪಾದನಾ ವಿಧಾನಗಳು**

ಮಾನವ ಕೈಗಳು ಮತ್ತು ಬುದ್ಧಿಯ ಭಾಗವಹಿಸುವಿಕೆಯ ವಿನಾ ಅಸಾಧ್ಯವಾಗಿದ್ದ ಅದೆಷ್ಟೋ ಕೆಲಸಗಳನ್ನು ಅವುಗಳ ಕನಿಷ್ಠ ಸಹಯೋಗ/ಭಾಗವಹಿಸುವಿಕೆಯ ಮೂಲಕ ಸರಾಗವಾಗಿ ಮೊದಲಿನದರ ಜೊತೆ ಹೋಲಿಸಲು ಸಾಧ್ಯವೇ ಇಲ್ಲದಂತಹ ಋಣಾತ್ಮಕ ಮತ್ತು ಗುಣಾತ್ಮಕ ಬದಲಾವಣೆಗಳೊಂದಿಗೆ ಸಾಗುವಂತಹ ವಾತಾವರಣದ ಸೃಷ್ಟಿ ಈ ಇಲೆಕ್ಟ್ರಾನಿಕ್ ಚಿಪ್ಪುಗಳು ಮತ್ತು ಕಂಪ್ಯೂಟರ್ ಕ್ರಾಂತಿಯಿಂದ ಉಂಟಾಗಿದೆ.

ಈ ಎಲ್ಲ ಉಪಯೋಗಗಳನ್ನು ಉಂಟುಮಾಡಿರುವುದು ಅತಿ ಕಡಿಮೆ ಜಾಗದಲ್ಲಿ ವ್ಯವಸ್ಥೆಗೊಳಿಸಲಾಗುವ ಬಹಳ ಕಡಿಮೆ ಗಾತ್ರದ



ಕಂಪ್ಯೂಟರ್ ಚಾಲಿತ ಮಶೀನುಗಳು ಎಂಬುದು ಈ ಕ್ರಾಂತಿಯ ವೈಶಿಷ್ಟ್ಯ. ನಾನಾ ತರಹದ ಲೋಹಗಳನ್ನು ಒಂದು ನಿರ್ದಿಷ್ಟ ಸ್ವರೂಪದ ಉಪಯೋಗಿ ವಸ್ತುವನ್ನಾಗಿ ಪರಿವರ್ತಿಸಲು ಬಳಸಲಾಗುವ ಲೇಥ್ ಮಶೀನುಗಳಲ್ಲಿ ಉಂಟಾಗಿರುವ ಪರಿವರ್ತನೆ, ಮುದ್ರಣ ಯಂತ್ರಗಳು, ಹೀಗೆ, ಇಂತಹ ಅದೆಷ್ಟೋ ಉಪಕರಣಗಳು ಮತ್ತು ವಾತಾವರಣಗಳನ್ನು ಊಹಿಸಿಕೊಳ್ಳುವುದು ಕಷ್ಟವೇನಲ್ಲ.

ಮುಂಚಿನ ಫ್ಯಾಕ್ಟರಿ ಮತ್ತು ಮಿಲ್ಲುಗಳನ್ನು ಇಂದಿನ ಅವುಗಳ ನವೀನ ರೂಪಗಳ ಜೊತೆ ಹೋಲಿಸಿ ನೋಡಿ. ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಉದಯಿಸಿದ ಯಂತ್ರಗಳು ಮತ್ತು ತಾಂತ್ರಿಕ ಉಪಕರಣಗಳ ಹೋಲಿಕೆಯಲ್ಲಿ ಹೊಸ ಕೈಗಾರಿಕಾ ಕ್ರಾಂತಿಯ ಪ್ರತಿರೂಪಗಳು ಗಾತ್ರದಲ್ಲಿ ಕುಂಠಿತಗೊಂಡಿರುವುದು (ಇನ್ನೂ ಕಡಿಮೆಗೊಳ್ಳುತ್ತಿರುವುದು) – ಗ್ರಹಿಕೆಗೆ ಅತಿ ಸರಳವಾದ ವಿಷಯವೇ ಆದರೂ ಪ್ರತಿ ಕಾರ್ಮಿಕ ಮತ್ತು ಕಾರ್ಮಿಕ ವರ್ಗದ ರಚನೆಯ ಮೇಲೆ ಈ ಕ್ರಾಂತಿ ಪ್ರಕ್ರಿಯೆ ಅಗಾಧವಾದ ಪರಿಣಾಮವನ್ನುಂಟುಮಾಡಿದೆ.

ಹತ್ತಿಯನ್ನು ಸಂಸ್ಕರಿಸುವ, ನೂಲುವ ಮತ್ತು ಬಟ್ಟೆ ನೇಯುವ ಸಂಯುಕ್ತ ಕೈಗಾರಿಕಾ ವಾತಾವರಣ ಹೊಂದಿದ್ದ ಗಿರಣಿ ಮಿಲ್ಲುಗಳು ಮಾಯವಾಗುತ್ತಿವೆ. ಇಡೀ ಊರು – ನಗರವನ್ನೇ ಆಕ್ರಮಿಸಿಕೊಂಡಿದ್ದ ಇಂತಹ ಕೈಗಾರಿಕಾ ವಾತಾವರಣದ ಕಾಲವೊಂದಿತ್ತು ! ಇಂದು, ನೂರಾರು ಮೈಲುಗಳ ಸುತ್ತಳತೆಯಲ್ಲೆಲ್ಲೂ ಇಂತಹ ಒಂದೇ – ಒಂದು ಮಿಲ್ಲೂ ಕಾಣದಿರಬಹುದು. ಕಡಿಮೆ ಗಾತ್ರದ ವಿದ್ಯುಚ್ಛಕ್ತಿ ಚಾಲಿತ ನೇಯ್ಗೆಯ ಯಂತ್ರಗಳು ಮತ್ತು ಅಂತಹುದೇ ಮಶೀನುಗಳು ಆ ಜಾಗವನ್ನು ಆಕ್ರಮಿಸಿವೆ. ದಾವಣಗೆರೆ, ಲೂಧಿಯಾನ, ಕಾನ್ಪುರ ಅಂತಹ ಊರುಗಳನ್ನು ಬಿಡಿ, ಮುಂಬಯಿ ನಗರ ಇಂದು ಹಣಕಾಸು ವ್ಯವಹಾರದ ಕೇಂದ್ರವೇ ಹೊರತು ಕೈಗಾರಿಕಾ ನಗರವಲ್ಲ.

ಹೀಗೆ, ಫ್ಯಾಕ್ಟರಿ, ಮಿಲ್ಲುಗಳು ಮತ್ತು ಯಂತ್ರಗಳು, ಗಾತ್ರದಲ್ಲಿ ಕುಸಿತವನ್ನ ಅನುಭವಿಸಿರುವುದು ಒಂದು ಸಾರ್ವತ್ರಿಕ ಬೆಳವಣಿಗೆ. ಈ ಪ್ರಕ್ರಿಯೆಯ ಕಾರಣದಿಂದಾಗಿಯೇ ಹಿಂದೆ ಯಾವುದಾದರೊಂದು ಜಾಗದಲ್ಲಿ ಕೇಂದ್ರೀಕೃತವಾಗಿದ್ದ ಕಾರ್ಮಿಕ ವರ್ಗ ಈಗ ಚದುರಿಹೋಗಿದೆ; ಈ ರೀತಿಯ ಚದುರುವಿಕೆ ಕಾರ್ಮಿಕ ವರ್ಗದ ಸಂಘಟನೆ ಮತ್ತು ಸ್ವಭಾವದಲ್ಲಿ ಹಲವಾರು ತರಹದ ಬದಲಾವಣೆ ಉಂಟುಮಾಡಿದೆ.

ಜೊತೆ–ಜೊತೆಗೇ ಸಣ್ಣ, ಅಲ್ಪ ಪ್ರಮಾಣದ ಉತ್ಪಾದನಾ ಕ್ಷೇತ್ರಗಳು ಮತ್ತು ಗೃಹ ಕೈಗಾರಿಕೆಗಳಲ್ಲಿನ ಉತ್ಪಾದನಾ ಸಾಧನಗಳ ಗಾತ್ರದಲ್ಲಿ ಉಂಟಾಗಿರುವ ಕುಸಿತವೇ ಕಾರಣ. ಸಮಾಜದ ಸ್ವರೂಪವನ್ನೇ ಬದಲಿಸಿರುವ ಈ ಪ್ರಕ್ರಿಯೆ, ಈಗಾಗಲೇ ಬೇರುಬಿಟ್ಟಿರುವ ಸಾಮಾಜಿಕ ಗೊಂದಲ – ಸಂಕೀರ್ಣತೆಗಳ ಪಟ್ಟಿಗೆ ಮತ್ತಷ್ಟು ಅಂಶಗಳನ್ನು ಸೇರಿಸಿದೆ.

**ಬದಲಾಗುತ್ತಿರುವ ಕಾರ್ಮಿಕ ವರ್ಗದ ಸ್ವರೂಪ**

ಇಂದಿನ ಕಾರ್ಮಿಕ ವರ್ಗ ಹಲವು ಹೊಸ ವೈಶಿಷ್ಟ್ಯಗಳನ್ನು ಹೊಂದಿದ್ದು ತನ್ನ ಮುಂಚಿನ ಸ್ವರೂಪಕ್ಕಿಂತ ಬಹಳ ಭಿನ್ನವಾಗಿದೆ. ಇಂದಿನ ಕೆಲಸಗಾರನು ಉತ್ಪಾದನೆ (ಅಥವಾ ಆಯಾ ಕೆಲಸಗಳು)ಯಲ್ಲಿ ಬಳಸಲಾಗುವ ವಸ್ತುಗಳೊಂದಿಗೆ ನೇರವಾಗಿ ಕಡಿಮೆ ಕೆಲಸ ಮಾಡುವ ಬದಲಿಗೆ ಆಯಾ ವಸ್ತುವಿನ ಪ್ರತೀಕ (ಇಮೇಜ್)ದೊಂದಿಗೆ ಹೆಚ್ಚು ಹೆಚ್ಚು ವ್ಯವಹರಿಸುತ್ತಾನೆ ಮತ್ತು ಇದೇ ಆಯಾ ಕೆಲಸಗಾರನ ಕೆಲಸ ಅನ್ನಿಸಿಕೊಳ್ಳುತ್ತದೆ. ಇಡೀ ಉತ್ಪಾದನೆ ಅಥವಾ ಆಯಾ ಕೆಲಸಗಳ ಸಂಯುಕ್ತ (ಇಲ್ಲವೇ ಬಿಡಿ ಭಾಗದ ಕೆಲಸ) ಪ್ರಕ್ರಿಯೆ – ವಿಧಿ, ವಿಧಾನಗಳನ್ನು ಪ್ರತಿಬಿಂಬಿಸುವ ತಂತ್ರಾಂಶ (ಸಾಫ್ಟ್‌ವೇರ್) ಮತ್ತು ಕಸ್ಟಮೈಸ್ಡ್ ಇಂಟರ್‌ಫೇಸ್ ಪ್ಯಾನಲ್ಸ್; ಕಂಪ್ಯೂಟರ್ ಪರದೆ, ಕೀ–ಬೋರ್ಡು, ಮತ್ತಿತರ ಕಂಪ್ಯೂಟರ್ ಜೋಡಣೆಗಳ ಮೂಲಕ ಕಾರ್ಮಿಕರು ಮತ್ತು ಎಂಜಿನಿಯರ್‌ಗಳು ತಮ್ಮ–ತಮ್ಮ ಕೆಲಸ ನಿರ್ವಹಿಸುತ್ತಾರೆ. ಹೀಗೆ, ಕೈಗಾರಿಕೆಯೊಂದರ ಉತ್ಪಾದನಾ ಪ್ರಕ್ರಿಯೆಯಲ್ಲಿ ತನ್ನನ್ನು ನೇರವಾಗಿ ತೊಡಗಿಸಿಕೊಳ್ಳುತ್ತಿದ್ದ ಕಾರ್ಮಿಕ, ಪರಿಷ್ಕೃತ ಕೈಗಾರಿಕಾ ವಾತಾವರಣದಲ್ಲಿ ಮುಂಚಿನ ಸಕ್ರಿಯ ಪಾತ್ರದಿಂದ ದೂರ ಸರಿಯುತ್ತಿದ್ದಾನೆ (ಅಥವಾ ದೂರ ಸರಿಸಲ್ಪಡುತ್ತಿದ್ದಾನೆ). ಹೀಗೆ, ಕೈಗಾರಿಕಾ ಕ್ರಾಂತಿಯ ಯುಗದ ಕಾರ್ಮಿಕನಿಗಿಂತ ಇಂದಿನ ಕಾರ್ಮಿಕನು ಭಿನ್ನವಾದ ಸ್ವರೂಪವನ್ನು ಧಾರಣೆ ಮಾಡಿದ್ದಾನೆ.

ಆಧುನಿಕ ಕಾರ್ಮಿಕ ಮತ್ತು ಕಾರ್ಮಿಕ ವರ್ಗವು ಕೈಗಾರಿಕಾ ಪ್ರಕ್ರಿಯೆಗಳ ಸಾಫ್ಟ್‌ವೇರ್ / ಕಂಪ್ಯೂಟರ್ ಅಳವಡಿಕೆಗಳು ತನಗೆ ಒದಗಿಸುವ ಪ್ರತೀಕಗಳೊಂದಿಗೆ ಮತ್ತು ಪ್ರತೀಕಗಳ ಮೇಲೆ ಕೆಲಸ ಮಾಡುತ್ತದೆ. ಅಂದರೆ, ಈ ಸಾಫ್ಟ್‌ವೇರ್ / ಕಂಪ್ಯೂಟರ್ ಅಳವಡಿಕೆಗಳು ಉಪಯೋಗಕ್ಕೆ ಯೋಗ್ಯವಾದ ನಿಖರ ಮತ್ತು / ಅಥವಾ ಘನೀಭೂತವಾದ ಅಂತಿಮ ವಸ್ತುಗಳನ್ನು ತಯಾರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ, ಕಾರ್ಮಿಕರ ಪಾತ್ರ ಕುಂಠಿತಗೊಳ್ಳುತ್ತಿದೆ. ಹೀಗೆ, ಹಾರ್ಡ್‌ವೇರ್ ಗಿಂತಲೂ ಹೆಚ್ಚು ಸಾಫ್ಟ್‌ವೇರ್ ಮೂಲಕ ಕೆಲಸ ನಿರ್ವಹಿಸುವ ಕೆಲಸಗಾರನು ಕೈಗಾರಿಕಾ ಕಾರ್ಮಿಕನಿಂದ 'ಮಾಹಿತಿ' ಕೆಲಸಗಾರನಾಗಿ ಮಾರ್ಪಾಡಾಗಿದ್ದಾನೆ; ಈ ಪ್ರಕ್ರಿಯೆಯಲ್ಲಿ ಹೆಚ್ಚು ಮೆದುಳಿನ–ಕೆಲಸವೂ ಒಳಗೊಂಡಿರುತ್ತದೆ ಎಂಬುದನ್ನೂ ಗಮನಿಸಬೇಕು.

ಕಂಪ್ಯೂಟರ್ ಮತ್ತು ಕಂಪ್ಯೂಟರ್ ಚಾಲಿತ ಯಂತ್ರಗಳಿಗೆ ಮಾನಸಿಕ ಮತ್ತು ಮೆದುಳಿನ ಕೆಲಸಗಳ ವರ್ಗಾವಣೆ ಹೊಸ ಕೈಗಾರಿಕಾ ಕ್ರಾಂತಿಯ ಮುಖ್ಯ ಲಕ್ಷಣ. ವೇಗ – ಗಣನೆ ಪ್ರಾಮುಖ್ಯವಾದ ಕ್ಷೇತ್ರಗಳ (ಬ್ಯಾಂಕಿಂಗ್, ಮತಗಣನೆ ಇತ್ಯಾದಿ) ಬಗ್ಗೆ ಹೇಳಲೇಬೇಕಿಲ್ಲ. ಇದರರ್ಥ, ಯಂತ್ರವು ಕಾರ್ಮಿಕರಿಗಿಂತಲೂ ತ್ವರಿತವಾಗಿ ಕೆಲಸ ಮಾಡಬಲ್ಲವು ಎಂದು. ಈಚಿನ ದಿನಗಳಲ್ಲಿ ತಾರ್ಕಿಕ ನೆಲೆಯಲ್ಲಿ ತೀರ್ಮಾನ ಕೈಗೊಳ್ಳಬೇಕಾಗುವ ಕೆಲಸಗಳಿಗೂ ಕಂಪ್ಯೂಟರುಗಳು ಬಳಕೆಯಾಗುತ್ತಿವೆ. ಇಂದು ರೋಬೋಟ್‌ಗಳು ಮತ್ತು ಆರ್ಟಿಫ್ಷಿಯಲ್ ಇಂಟೆಲಿಜೆನ್ಸ್ ಅಥವಾ 'ಕೃತಕ ಬುದ್ಧಿಮತ್ತೆ'ಯ ತಾಂತ್ರಿಕತೆಗಳು ದೊಡ್ಡ ಮಟ್ಟದಲ್ಲಿ ಹೊರಹೊಮ್ಮುತ್ತಿವೆ.

ಹೀಗೆ, ಆಧುನಿಕ ಕಾರ್ಮಿಕನು ಹಳೆಯ ತರಹದ ಯಂತ್ರಗಳ ಮೇಲೆ ಕೆಲಸ ಮಾಡುವ ಬದಲಿಗೆ ಬಹಳಷ್ಟು ರೀತಿಗಳಲ್ಲಿ ಉತ್ಕೃಷ್ಟವಾದ ಯಂತ್ರಗಳೊಂದಿಗೆ ತನ್ನ ಕೆಲಸ ನಿರ್ವಹಿಸುತ್ತಿದ್ದಾನೆ.

**ಬಂಡವಾಳಶಾಹಿ ಉತ್ಪಾದನಾ ವಿಧಾನ**

ಬಂಡವಾಳಶಾಹಿ ಉತ್ಪಾದನಾ ವಿಧಾನಕ್ಕೆ ಸಂಬಂಧಿಸಿದ ಪ್ರಮುಖ ವಿಷಯಗಳ ಪೈಕಿ, ಉತ್ಪಾದನೆ ಮತ್ತು ಕೆಲಸದ ಸ್ವರೂಪ, ಕಾರ್ಮಿಕ ಪ್ರಕ್ರಿಯೆಯ ಸ್ವರೂಪ, ಉತ್ಪಾದನಾ ಪ್ರಕ್ರಿಯೆಯ ಸ್ವರೂಪ, ದುಡಿಮೆ – ಮೌಲ್ಯ ಸಿದ್ಧಾಂತದ ಪರೀಕ್ಷೆ, ಸರಕುಗಳ ಸ್ವರೂಪ, ಮೌಲ್ಯದ ಉತ್ಪಾದನೆ, ಉತ್ಪಾದನಾ ವಿಧಾನದ ಸ್ವರೂಪದಲ್ಲಿನ ಬದಲಾವಣೆಗಳನ್ನು ನಿಭಾಯಿಸಲು ಬಂಡವಾಳಶಾಹಿ ಎಷ್ಟರಮಟ್ಟಿಗೆ ಶಕ್ತವಾಗಿದೆ, ಇತ್ಯಾದಿ ವಿಷಯಗಳ ಬಗ್ಗೆಯೂ ಪ್ರಸ್ತುತ ಲೇಖಕನ ಪುಸ್ತಕದಲ್ಲಿ ಚರ್ಚಿಸಲಾಗಿದೆ.

ಯಾಂತ್ರಿಕತೆ ಸಂಪೂರ್ಣ ಸ್ವಯಂಚಾಲಿತ ಹಂತವನ್ನು ತಲುಪಿದಾಗ ಬಂಡವಾಳಶಾಹಿ ವ್ಯವಸ್ಥೆಯ ಆಗುಹೋಗುಗಳ ವಿಮರ್ಶೆ – ಮುನ್ನೋಟವನ್ನು ಕಾರ್ಲ್ ಮಾರ್ಕ್ಸ್ ಒದಗಿಸಿದ್ದಾರೆ. ತಮ್ಮ ಜನಪ್ರಿಯವಾದ "ಬಂಡವಾಳದ ರೂಪುರೇಷೆ" (ಔಟ್‌ಲೈನ್ ಆಫ್ ದಿ ಕ್ಯಾಪಿಟಲ್) ಎಂಬ ಬರಹದಲ್ಲಿ ಈ ಪ್ರಶ್ನೆಯನ್ನವರು ಚರ್ಚಿಸಿದ್ದಾರೆ. ಈ ಬರಹವನ್ನು ಅಧ್ಯಯನ ಮಾಡಬೇಕಾದ ಅಗತ್ಯವಿದೆ ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ,

**ಸಾಫ್ಟ್‌ವೇರ್ ಬೆಳೆಯುತ್ತಿರುವ ಪಾತ್ರ ಮತ್ತು ನಾಲ್ಕನೆ ತಾಂತ್ರಿಕತೆಯ ಕ್ರಾಂತಿ**

ನಮ್ಮ ನಡುವೆ ಇಂದು ಮೂರು ಹಾಗೂ ನಾಲ್ಕನೆಯ ಕೈಗಾರಿಕಾ ಕ್ರಾಂತಿಗಳನ್ನು ಕುರಿತ ವಿಶ್ವವ್ಯಾಪಿ ಚರ್ಚೆ ನಡೆಯುತ್ತಿದೆ. ಮಾರ್ಕ್ಸ್‌ವಾದಿಗಳು ಈ ಚರ್ಚೆಯನ್ನು ಗಮನಿಸಬೇಕು ಮತ್ತು ಅದರಲ್ಲಿ ಪಾಲ್ಗೊಳ್ಳಬೇಕು. ಸಾಫ್ಟ್‌ವೇರ್ ಕ್ಷೇತ್ರ ಇನ್ನೂ ಹೆಚ್ಚಿನ ಮಹತ್ತರ ಸಾಧನೆಗಳತ್ತ ದಾಪುಗಾಲಿಡುತ್ತಿದೆ; ಬರಲಿರುವ ದಿನಗಳಲ್ಲಿ ಭಾರಿ ಪ್ರಭಾವ

ಬೀರುವ ಸೂಚನೆಗಳನ್ನು ೩-ಡಿ ಮುದ್ರಣ ಕ್ಷೇತ್ರದ ಸಂಶೋಧನೆ – ಅಳವಡಿಕೆಗಳು ದೃಢಪಡಿಸಿವೆ. ನ್ಯಾನೋ ಮತ್ತಿತರ ಹೊಸ ತಾಂತ್ರಿಕತೆಗಳು ಉತ್ಪಾದನಾ ಕ್ಷೇತ್ರದಲ್ಲಿ ಮೂಲಭೂತ ಮತ್ತು ಮಹತ್ತರ ಬದಲಾವಣೆಗಳನ್ನು ಉಂಟುಮಾಡುವುದಿದೆ. ಹೀಗೆ, ತಾಂತ್ರಿಕ ಕ್ರಾಂತಿ ಹಿಂದೆಂದೂ ಕಂಡರಿಯದ ವೇಗದಿಂದ ಸಾಗಿದೆ.

ಈಗಾಗಲೇ, ನಮ್ಮ ಸಾಮಾಜಿಕ – ಆರ್ಥಿಕ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆದಿರುವ ಸಾಫ್ಟ್‌ವೇರ್ ಎಂಜಿನಿಯರಿಂಗ್ ಮತ್ತದರ ಅಳವಡಿಕೆಗಳು ನಮ್ಮ ಜನರ ಸಾಮಾಜಿಕ ಜೀವನದ ಯಾವುದೇ ಭಾಗವನ್ನು ಪ್ರವೇಶಿಸುವ ಸಾಮರ್ಥ್ಯ ಹೊಂದಿವೆ. ಎಷ್ಟರಮಟ್ಟಿಗೆ ಎಂದರೆ ನಮ್ಮ ದೇಹದಲ್ಲೂ ಅದಕ್ಕೆ ಜಾಗಕೊಡಬೇಕಾಗುತ್ತದೆ – ಸ್ವಾಸ್ಥ್ಯ – ಆರೋಗ್ಯ, ಇತರೆ ಕಾರಣಗಳಿಗೆ! ಇಂದಿನ ಮಕ್ಕಳಂತೂ ಹುಟ್ಟು ಮತ್ತು ಬೆಳವಣಿಗೆ ಹಂತದಿಂದಲೇ ಸಾಫ್ಟ್‌ವೇರ್ ಶಿಶುಗಳು! ಹೀಗೆ ಕಂಪ್ಯೂಟರ್ – ಸಾಫ್ಟ್‌ವೇರ್‌ಗಳು ಆಧುನಿಕ ಮನುಷ್ಯನ ಅವಿಭಾಜ್ಯ ಅಂಗಗಳಾಗಿ ರೂಪುಗೊಳ್ಳುತ್ತಿವೆ. ಜೈವಿಕ ಹಾಗೂ ಭೌತಿಕ ಪ್ರಕ್ರಿಯೆಗಳು (ಇಲೆಕ್ಟ್ರಾನಿಕ್, ಅಣು ಪ್ರಕ್ರಿಯೆ) ಸಮ್ಮಿಳಿತಗೊಳ್ಳುತ್ತಿವೆ. ಈ ಹೊಸ ಬೆಳವಣಿಗೆಗಳು ಭವಿಷ್ಯದ ಸಮಾಜದ ಮೇಲೆ ತೀವ್ರವಾದ ಪ್ರಭಾವವನ್ನು ಬೀರಲಿವೆ. ಸಾಫ್ಟ್‌ವೇರ್ ಎಷ್ಟು ಪ್ರಭಾವಶಾಲಿ ಎಂದರೆ ಬಹಳಷ್ಟು ಕಡೆ ಯಂತ್ರವೊಂದರ ಭಾಗಗಳು ಅಥವಾ ಯಂತ್ರಗಳಿಗೇ ಪರ್ಯಾಯವನ್ನೊದಗಿಸುತ್ತಿವೆ.

'ಎಇ' (ಕೃತಕ ಬುದ್ಧಿಮತ್ತೆ) ಅಂತೂ ಇಡಿ ಸಮಾಜವನ್ನೇ ಪಸರಿಸುವ ಮಟ್ಟಿಗೆ ಬೆಳೆಯುತ್ತಿರುವ ತಂತ್ರಜ್ಞಾನವಾಗಿದೆ. ಜನಜೀವನ ಮತ್ತು ಸಮಾಜದ ಭವಿಷ್ಯವನ್ನು ಪ್ರಭಾವಿಸುವ 'ಎಇ' ಗಂಭೀರವಾದ ತಾತ್ವಿಕ – ಪ್ರಾಯೋಗಿಕ ಪ್ರಶ್ನೆಗಳನ್ನು ಎತ್ತುತ್ತದೆ. ಅಂತೆಯೇ, ಹೊಸ ವಿವಾದಗಳನ್ನೂ ಸೃಷ್ಟಿ ಮಾಡುತ್ತಿದೆ.

**ಸಾಮಾಜಿಕ ಸಂಯೋಜನೆಯಲ್ಲಿ ತೀವ್ರ ಬದಲಾವಣೆ**

ಹೀಗೆ ಸಮಾಜದ ಮೂಲಭೂತ ರಚನೆಯಲ್ಲಿ ಬಹಳಷ್ಟು ಬದಲಾವಣೆಗಳನ್ನು ಕಾಣುತ್ತಿದ್ದೇವೆ. ನಗರಗಳ ಸ್ವರೂಪ ಬದಲಾಗುತ್ತಿದೆ, ಹೊಸ ನಗರಗಳು ತಲೆ ಎತ್ತುತ್ತಿವೆ. ಪ್ರಮುಖವಾಗಿ, ಕೈಗಾರಿಕೆ – ಉತ್ಪಾದನಾ ಕ್ಷೇತ್ರದ ಮೇಲಿನ ಒತ್ತು ಕಡಿಮೆಯಾಗುತ್ತಿದ್ದು, ನಾನಾ ತರಹದ ಸೇವೆ, ವಿತರಣೆ, ಅಂತೆಯೇ ಮಾಹಿತಿ ಒದಗಿಸುವ ಉದ್ಯಮಗಳು ಪ್ರಾಮುಖ್ಯತೆ ಪಡೆಯುತ್ತಿವೆ. ಈ ಎಲ್ಲ ಬದಲಾವಣೆಗಳು, ಹೊಸ ಕಾರ್ಮಿಕ ವಿಭಾಗಗಳ ಹುಟ್ಟಿಗೆ ಕಾರಣವಾಗುತ್ತಿರುವಂತೆಯೇ, ಕಾರ್ಮಿಕ ವರ್ಗದ ಸಂಯೋಜನೆ / ರಚನೆಯಲ್ಲಿ ಬಹಳಷ್ಟು ಮೂಲಭೂತ ಬದಲಾವಣೆಯನ್ನುಂಟು ಮಾಡಿದೆ. ಅಮೇರಿಕ ಮತ್ತು ಪಶ್ಚಿಮ ಯೂರೋಪ್ ರಾಷ್ಟ್ರಗಳಲ್ಲಿ ಸೇವಾಕ್ಷೇತ್ರಗಳಲ್ಲಿ ದುಡಿಯುವ ಕಾರ್ಮಿಕರ ಸಂಖ್ಯೆ ಇತರ ಕ್ಷೇತ್ರಗಳ ಹೋಲಿಕೆಯಲ್ಲಿ ಬಹಳಷ್ಟು ಹೆಚ್ಚಾಗಿದೆ. ಇದೇ ಪ್ರವೃತ್ತಿ ನಮ್ಮ ದೇಶವೂ ಒಳಗೊಂಡಂತೆ, ಇತರೆ ಏಷ್ಯಾ ಮತ್ತು ಆಫ್ರಿಕ ದೇಶಗಳಲ್ಲೂ ಕಾಣುತ್ತಿದ್ದೇವೆ. ಹೀಗೆ, ಹೋರಾಟಗಳ ಚರಿತ್ರೆ ಇರದ ಅಸಂಘಟಿತ ಹೊಸ ಕಾರ್ಮಿಕ ವರ್ಗ, ನವೀನ ಉದ್ಯಮ ಕ್ಷೇತ್ರಗಳಲ್ಲಿ ದೊಡ್ಡ ಸಂಖ್ಯೆಯಲ್ಲಿ ನಮ್ಮ ನಡುವೆ ಬೆಳೆಯುತ್ತಿದೆ, ಅಂತೆಯೇ ಮಧ್ಯಮ ವರ್ಗದ ಸ್ವರೂಪ – ಸಂಖ್ಯೆ ಸಹ. ನವೀನ ತಾಂತ್ರಿಕ ಸಾಧನಗಳ ಜೊತೆ ನಾನಾ ಬಗೆಯ ಮಾಹಿತಿಯೊಂದಿಗೆ – ಸೇವಾಕ್ಷೇತ್ರದ ಅಳವಡಿಕೆಗಳೊಂದಿಗೆ ಹೆಚ್ಚು ವ್ಯವಹರಿಸುವ ಈ ಕಾರ್ಮಿಕ ವರ್ಗ ಉತ್ಪಾದಕರೂ ಹೌದು, ಗ್ರಾಹಕರೂ ಹೌದು. ಹೊಸ ನಗರಗಳ ದೊಡ್ಡ–ದೊಡ್ಡ ಕಟ್ಟಡಗಳು, ಕ್ಯಾಂಪಸ್‌ಗಳಲ್ಲಿ ಆಧುನಿಕ ತಂತ್ರಜ್ಞಾನದ ಮೇಲೆ ಆಧಾರಿತ ಲಕ್ಷಾಂತರ–ಕೋಟ್ಯಾಂತರ ರೂಪಾಯಿಗಳ ಹೊಸ ಸಂಘಟಿತ ವ್ಯವಹಾರಗಳು ತಲೆ ಎತ್ತಿವೆ. ಕೃಷಿ ಭೂಮಿಯ ವಿಸ್ತಾರ ಮತ್ತು ಕೃಷಿಯ ಮೇಲೆ ನೇರವಾಗಿ ಅವಲಂಬಿಸಿದ ಜೀವನಗಳು ಕುಂಠಿತಗೊಳ್ಳುತ್ತಿವೆ. ಪರಿಸ್ಥಿತಿಯನ್ನು ಸಮರ್ಥವಾಗಿ ಎದುರಿಸಲು ಇದುವರೆಗಿನ ಕಾರ್ಯತಂತ್ರ, ಸಂಘಟನೆ, ಬೇಡಿಕೆ, ಸ್ಲೋಗನ್ನುಗಳಿಗಿಂತಲೂ ಭಿನ್ನವಾದ ವಿಧಿ–ವಿಧಾನಗಳ ಅಗತ್ಯ ಇದೆ. ಒಟ್ಟಾರೆ, ಕಾರ್ಮಿಕ ವರ್ಗದ ಸಿದ್ಧಾಂತ – ಹೋರಾಟದ ಸ್ವರೂಪಗಳು ಹೊಸ ಸವಾಲುಗಳನ್ನು ಎದುರಿಸಬೇಕಿದೆ, ಅಲ್ಲವೆ?

ಹೀಗೆ ಸಾಂಪ್ರದಾಯಿಕ ಸಂಘಟನಾ ವಿಧಾನಗಳ ದಿನಗಳನ್ನು ದಾಟಿ ನಮ್ಮ ಸಮಾಜ ಮುಂದುವರೆದಿದೆ. ಮಾರ್ಕ್ಸ್‌ವಾದಿಗಳು, ಸಂಘಟನೆಗಳು – ಇತರೆ ಪ್ರಗತಿಪರ ಚಳುವಳಿಗಳು ಈ ಹೊಸ ವಾಸ್ತವತೆಯೊಂದಿಗೆ ಸಮನ್ವಯತೆಯನ್ನು ಸಾಧಿಸಿ, ಇದುವರೆಗಿನ ಹೋರಾಟದ ಬುನಾದಿಯನ್ನು ಕಾಯ್ದಿರಿಸಿಕೊಂಡು ಈ ಹೊಸ ಕೈಗಾರಿಕಾ ಕಾರ್ಮಿಕ ವರ್ಗದ ಜೊತೆಗೂ ತಮ್ಮನ್ನು ತೊಡಗಿಸಿಕೊಳ್ಳಲು ಸಿದ್ಧರಿದ್ದಾರೆಯೇ? ಮಾಹಿತಿ ತಂತ್ರಜ್ಞಾನದ ಆವಿಷ್ಕಾರಗಳನ್ನು ತನ್ನ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಮುನ್ನಡೆಯುವ ಹೊಸ ಕಮ್ಯುನಿಸ್ಟ್ ಪಕ್ಷದ ರಚನೆಯೂ ಅಷ್ಟೇ ಮುಖ್ಯ, ಅಲ್ಲವೇ? ಈ ಪ್ರಶ್ನೆಗಳು ನಮ್ಮ ಎದುರಿಗಿವೆ. ಈ ಬದಲಾವಣೆಯ ಸವಾಲನ್ನು ಸ್ವೀಕರಿಸಿ ಸಮರ್ಪಕ ಕಾರ್ಯತಂತ್ರ ರೂಪಿಸಿಕೊಳ್ಳದಿದ್ದರೆ ಬರಲಿರುವ ದಿನಗಳಲ್ಲಿ ನಾವು ವಿನಾಶದ ಅಂಚನ್ನು ತಲುಪುವ ಸಾಧ್ಯತೆಯೂ ಇದೆ. ಆಧುನಿಕ ನಗರಗಳಲ್ಲಿ ಇಂದು ಕಮ್ಯುನಿಸ್ಟ್, ಪ್ರಗತಿಪರ ಮತ್ತು ಇತರೆ ಮೂಲಭೂತ ಬದಲಾವಣೆಗಳಿಗೆ ಹಾತೊರೆಯುವ ಚಳುವಳಿ – ಹೋರಾಟಗಳು ಕಣ್ಣಿಗೆ ಸ್ಪಷ್ಟವಾಗಿ ಕಾಣುವಷ್ಟು ದುರ್ಬಲವಾಗಿವೆ. ನಗರೀಕರಣ, ಹೊಸ ತಾಂತ್ರಿಕ ಅಳವಡಿಕೆಗಳ ಒಟ್ಟಾರೆ ಪರಿಣಾಮಗಳೊಂದಿಗೆ ಸಮನ್ವಯ ಸಾಧಿಸದ ಕಾರ್ಯತಂತ್ರ ಇದಕ್ಕೆ ಕಾರಣ. ವೇಗವಾಗಿ ಕರಗಿಹೋಗುತ್ತಿರುವ ಹಳೆಯ ಚೌಕಟ್ಟು – ವಾಸ್ತವತೆಗಳೊಂದಿಗೆ ಮುಂದುವರೆಯುವುದು, ಇಲ್ಲವೇ ಪ್ರಸ್ತುತ ವಾತಾವರಣದ ವಾಸ್ತವತೆ ತಂದೊಡ್ಡಿರುವ ಸವಾಲುಗಳನ್ನು ಎದುರಿಸುವುದು – ಎತ್ತಕಡೆ ನಾವಿರಬೇಕು ಎಂಬುದನ್ನು ನಿರ್ಧರಿಸಬೇಕು. ಉದಾಹರಣೆಗೆ ಆಧುನಿಕ ತಾಂತ್ರಿಕ, ಸಂಪರ್ಕ, ಮಾಹಿತಿ ಸಾಧನಗಳನ್ನು ಒಳಗೊಂಡ ಹೆಚ್ಚು ವಿದ್ಯಾರ್ಥಿ – ಯುವಜನರು ವಾಸಿಸುವ ದೊಡ್ಡ–ದೊಡ್ಡ ವಸತಿ – ಸಮುಚ್ಚಯಗಳಲ್ಲಿ ಎಡಪರ ಸಂಘಟನೆಗಳು ದೊಡ್ಡ ಪ್ರಮಾಣದಲ್ಲಿ ಬೆಳೆಯಬೇಕು. ಅದು ಸರಿ, ಆದರೆ ಅವು ಬೆಳೆಯುವುದು ಹೇಗೆ? ಇಂತಹ ಅದೆಷ್ಟೋ ಪ್ರಶ್ನೆಗಳನ್ನು ಸಮರ್ಥವಾಗಿ ಎದುರಿಸಬಲ್ಲ ಸಂಘಟನೆ ಮಾತ್ರವೇ ಆಧುನಿಕ ಕ್ರಾಂತಿಕಾರಿ ಪಕ್ಷವಾಗಿ ಹೊರಹೊಮ್ಮಬಲ್ಲುದು. ಆದ್ದರಿಂದ, ವೈಜ್ಞಾನಿಕ ತಾಂತ್ರಿಕ ಕ್ರಾಂತಿ ಮತ್ತದರ ಆಳವಾದ ಪರಿಣಾಮಗಳು ಬರಿದೆ ಸಿದ್ಧಾಂತಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿರದೆ ಸಿದ್ಧಾಂತದ ಮೂಲಕ ಹೊರಹೊಮ್ಮುವ ಸಾಮಾಜಿಕ – ರಾಜಕೀಯ ಕಾರ್ಯ ತಂತ್ರ – ಚಟುವಟಿಕೆಗಳಿಗೂ ಸಂಬಂಧಿಸಿದೆ.

ಬಂಡವಾಳಶಾಹಿತ್ವದಲ್ಲಿ ಹಲವು ಅಭಿವೃದ್ಧಿಶೀಲ ಹೊಸ ಲಕ್ಷಣಗಳು ಖಂಡಿತವಾಗಿಯೂ ಇವೆ, ಸಾಮ್ರಾಜ್ಯಶಾಹಿಯು ಏಕಸ್ವಾಮ್ಯ ಬಂಡವಾಳಶಾಹಿ ಮತ್ತು ಹಣಕಾಸಿನ ಬಂಡವಾಳವನ್ನು ಬಳಸಲು ಅಥವಾ ಹೊಂದಿಕೊಳ್ಳಲು ಸಾಧ್ಯವಾಗುವುದಿಲ್ಲ. ಇದು ಇಂದು ಸಾಮ್ರಾಜ್ಯಶಾಹಿಯ ಬಿಕ್ಕಟ್ಟಿನ ಮೂಲಗಳಲ್ಲಿ ಒಂದಾಗಿದೆ. ವೈಜ್ಞಾನಿಕ ತಾಂತ್ರಿಕ ಕ್ರಾಂತಿಯಿಂದಾಗಿ ಚಲಾವಣೆಯಲ್ಲಿರುವ ಪ್ರವೃತ್ತಿಗಳು ಸಾಮ್ರಾಜ್ಯಶಾಹಿಯ ಬಿಕ್ಕಟ್ಟಿಗೆ ಕಾರಣವಾಗುತ್ತವೆ ಮತ್ತು ಬಂಡವಾಳಶಾಹಿಯನ್ನು ಮೀರಿಹೋಗುವ ಮೂಲಕ ವ್ಯಾಪಕವಾದ ಪ್ರಜಾಪ್ರಭುತ್ವ ಚಳುವಳಿಯಾಗಿ ಇದನ್ನು ಬಳಸಿಕೊಳ್ಳಬೇಕು. ಪ್ರಸ್ತುತ ಸಂದರ್ಭದಲ್ಲಿ, ನಮ್ಮ ದೇಶದ ಪ್ರಜಾಪ್ರಭುತ್ವ ಮತ್ತದರ ಅಂಗ – ಸಂಸ್ಥೆಗಳ ಪಾತ್ರ ಹಿರಿದು. ಅವುಗಳನ್ನು ಉಳಿಸಿಕೊಳ್ಳುವ ಮತ್ತು ಇನ್ನೂ ಹೆಚ್ಚು ಸದೃಢಪಡಿಸಬೇಕಾದ ತುರ್ತು ಜವಾಬ್ದಾರಿ ನಮ್ಮೆಲ್ಲರ ಮೇಲಿದೆ.

ಮೂಲ : **ಅನಿಲ್ ರಾಜಿಮ್‌ವಾಲೆ**
ಸಂಗ್ರಹಾನುವಾದ : **ಜಿ. ನಾಗಕುಮಾರ**
ಸಿ–೨೯೩, ಕಸ್ರಾ ನಂ. ಸಿ–೭೬/೪, ಗಲ್ಲಿ ನಂ. ೧೬
ತ್ರಿಗುಣೇಶ್ವರಿ ಮಂದಿರ ಹತ್ತಿರ
ಅಜಿತ್ ವಿಹಾರ, ದೆಹಲಿ – ೧೧೦ ೦೮೪

*ಅನಿಲ್ ರಾಜಿಮ್‌ವಾಲೆ ಅವರ ಈ ಲೇಖನದ ವಿಚಾರಗಳಿಗೆ ಸಂಬಂಧಿಸಿದಂತೆ ಓದುಗರು ಚರ್ಚೆಯಲ್ಲಿ ಭಾಗವಹಿಸಬಹುದೆಂದು ಸೂಚಿಸಲಾಗಿದೆ. ಪ್ರತಿಕ್ರಿಯೆಗಳು ನಾಲ್ಕುನೂರು ಪದಗಳ ಮಿತಿಯಲ್ಲಿದ್ದರೆ ಒಳ್ಳೆಯದು. ಜೂನ್ ೧೦ರ ಒಳಗಾಗಿ ಪ್ರತಿಕ್ರಿಯೆಗಳನ್ನು ತಲುಪಿಸಬೇಕಾಗಿ ಕೋರಲಾಗಿದೆ.*

– ಸಂ.



# ವಿಶ್ವ ಪರಿಸರ ದಿನ

ನಾವಿನ್ನೂ ಪರಿಸರ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಆಗಿಲ್ಲ, ನಿಧಾನವಾಗಿ ಸಾಗಬೇಕು, ಜನಜಾಗೃತಿ, ಜನಪರಹೋರಾಟಗಳಿಂದ ಮತ್ತು ನ್ಯಾಯಾಲಯಗಳು ಅಂತಹ ಪ್ರಜಾಸತ್ತಾತ್ಮಕ ವ್ಯವಸ್ಥೆಗಳಿಂದ ಪರಿಸರವನ್ನು ಉಳಿಸಿಕೊಳ್ಳಬಹುದು, ಬೇಕು ಹಾಗೂ ಅದೇ ಯುಕ್ತವಾದ ಮಾರ್ಗ ಎಂಬ ಅರಿವೇ ಈ ಬಾರಿಯ ಪರಿಸರ ದಿನದ ತಿಳಿವಳಿಕೆಯಾಗಲಿ !

# ನಮ್ಮ ಪರಿಸರ ಸಮಸ್ಯೆಗಳಿಗೆ ವಿಜ್ಞಾನಾಧಾರಿತ ಜನಪರ ಹೋರಾಟವೇ ಪರಿಹಾರ

**ಜೂ**ನ್ ಐದನ್ನು ವಿಶ್ವ ಪರಿಸರ ದಿನವೆಂದು ಜಗತ್ತಿನಾದ್ಯಂತ ಆಚರಿಸಲಾಗುತ್ತದೆ. ಇದು ವಿಶ್ವಸಂಸ್ಥೆ ಎಲ್ಲ ದೇಶಗಳಲ್ಲಿಯೂ ಪರಿಸರ ಕುರಿತಾಗಿ ಜಾಗೃತಿ ಮೂಡಬೇಕೆಂಬ ಆಶಯದಲ್ಲಿ ನಡೆಯುವುದು. ಶಾಲಾ ಕಾಲೇಜುಗಳು ಸಂಘ ಸಂಸ್ಥೆಗಳು ಇದನ್ನು "ಅದ್ದೂರಿ"ಯಾಗಿ ಆಚರಿಸುತ್ತವೆ. ಎಷ್ಟೋ ಕಡೆ ಗಿಡ ಹಂಚಲಾಗುತ್ತದೆ. ಒಂದಿಷ್ಟು ಭಾಷಣಗಳು, ಪರಿಸರ ಪರ ಜಾಥಾ, ಘೋಷಣೆಗಳು ನಡೆದು ಪರಿಸರ ದಿನ ಮುಗಿಯುತ್ತದೆ. ಅಲ್ಲಿಷ್ಟು ಇಲ್ಲಿಷ್ಟು ಒಳ್ಳೆಯ ಕಾರ್ಯಗಳು ಆಗುವುದುಂಟು. ಆದರೆ, ಅದು ಇಂದಿನ ಅಗತ್ಯಕ್ಕೆ ಹೋಲಿಸಿದರೆ ನಗಣ್ಯ ಮತ್ತು ವಾಸ್ತವದ ಬೆಳವಣಿಗೆಗಳು ಇಂತಹ ಆಚರಣೆಗಳನ್ನು ನಗೆಗೀಡುಮಾಡುವಂಥದ್ದು! ಇದು ವಿಷಾದಕರ ಪರಿಸ್ಥಿತಿ.

ಇದೀಗ ಜನರಲ್ಲಿ ಅರಿವು ಹೆಚ್ಚಾಗಿದೆ. ಪರಿಸರ ಸಂರಕ್ಷಣೆ ಏಕೆ? ಹೇಗೆ? ಎಂಬುದನ್ನು ಹೇಳಲು ಶ್ರಮಪಡಬೇಕಿಲ್ಲ. ಇದು ಸಕಾರಾತ್ಮಕ ಅಂಶ ಮತ್ತು ಇದುವರೆಗೂ ನಡೆದಿರುವ ಹೋರಾಟಗಳಿಗೆ ಸಂದ ಜಯ ಸಹ. ಆದರೆ, ನಾವು ಹಾಕಿಕೊಳ್ಳುತ್ತಿರುವ ಯೋಜನೆಗಳು ಎಲ್ಲ ಸಕಾರಾತ್ಮಕ ಕಾರ್ಯಗಳು ಹೊಳೆಯಲ್ಲಿ ಹುಣಸೇಹಣ್ಣು ಕಿವಿಚಿದಂತೆ ಎಂದಾಗುತ್ತಿದೆ. ನಮ್ಮ ಮುಂದೆ ದೊಡ್ಡ ದೊಡ್ಡ ವಿಚಾರಗಳಿವೆ. ಪರಿಸರದ ಮೇಲೆ ಮಾನವನ ಚಟುವಟಿಕೆಯ ಪರಿಣಾಮವನ್ನು ಗುರುತಿಸುವ ಕಾರ್ಬನ್ ಫುಟ್‌ನಂತಹ ಸೂಚ್ಯಂಕಗಳು ದುರಂತವನ್ನು ಸೂಚಿಸುತ್ತಿವೆ. ಇದಕ್ಕೆ ಜಾಗತಿಕವಾಗಿ ಬಹುದೊಡ್ಡ ಕೊಡುಗೆ ಕೊಡುತ್ತಿರುವುದು ಕಾಡ್ಗಿಚ್ಚು ಎಂಬುದು ಇನ್ನೂ ಆತಂಕಕಾರಿ ವಿಷಯ. ಜಾಗತೀಕರಣ, ಕೊಳ್ಳುಬಾಕ ಸಂಸ್ಕೃತಿಯ ಹಬ್ಬುವಿಕೆ, ಸ್ಥಳೀಯ ಸಂಸ್ಕೃತಿಗಳ ನಾಶ ಈ ಎಲ್ಲವೂ ಬಹುದೊಡ್ಡ ಸವಾಲುಗಳು. ಮುಂದಿನ ದಿನಗಳಲ್ಲಿ ಮಾನವನ ನೆಮ್ಮದಿ ನಾವು ಈ ಸಮಸ್ಯೆಗಳಿಗೆ ಎಷ್ಟು ಕ್ರಿಯಾಶೀಲವಾಗಿ (ಭಾವನಾತ್ಮಕವಾಗಿ ಅಲ್ಲ!) ಸ್ಪಂದಿಸುತ್ತೇವೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ.

ಕೆಲವೇ ದಶಕಗಳಲ್ಲಿ ಬೆಂಗಳೂರಿನಂತಹ ನಗರಗಳು ಜನವಸತಿಗೆ ಅರ್ಹವಲ್ಲ ಎಂಬ ಪಟ್ಟಿಗೆ ಸೇರ್ಪಡೆಯಾಗಲಿವೆ. ವಾಯುಮಾಲಿನ್ಯ ಹೆಚ್ಚಾಗಲಿದೆ. ಈ ವಿಷಯವನ್ನು ಮತ್ತು ಇತರ ದೊಡ್ಡ ಸಮಸ್ಯೆಗಳನ್ನು ಬದಿಗಿಟ್ಟು, ಮಾನವನ ಮೂಲಭೂತ ಅವಶ್ಯಕತೆಯಾದ ನೀರನ್ನೇ ತೆಗೆದುಕೊಳ್ಳೋಣ. ನಮ್ಮ ದೇಶದ ನೀರಿನ ಸುರಕ್ಷತೆಯ ಮೇಲೆ ನದಿ ಜೋಡಣೆ, ತಿರುಗಣೆ ಎಂಬ ಎರಡು ಅಲುಗಿನ ಕತ್ತಿ ತೂಗುತ್ತಿದೆ. ಈ ಕತ್ತಿಯ ಮೊನಚೆಂದರೆ ನಮ್ಮ ಪಥ್ಯ ವ್ಯವಸ್ಥೆಯಲ್ಲಿನ ದೋಷ. ಇದನ್ನು ವಿವರವಾಗಿ ತಿಳಿದುಕೊಳ್ಳೋಣ.

**ನದಿ ತಿರುಗಣೆಗಳು:**

ಸದ್ಯ ನಮ್ಮದೇ ರಾಜ್ಯ ಕರ್ನಾಟಕದಲ್ಲಿ ನೇತ್ರಾವತಿ ನದಿಯನ್ನು ತಿರುಗಿಸಿ "ನೀರು ಹೆಚ್ಚಿರುವ" ಭಾಗದಿಂದ "ಜಲಕ್ಷಾಮ"ವಿರುವ ಉತ್ತರದ ಭಾಗಗಳಿಗೆ "ಕುಡಿಯುವ ನೀರನ್ನು ಸರಬರಾಜು" ಮಾಡಲಾಗುವುದು! ಇದನ್ನು ವಿರೋಧಿಸುವವರು ಮಾನವವಿರೋಧಿಗಳೇ ಸೈ ಎನ್ನುವ ಮಟ್ಟಕ್ಕೆ ಅಪಪ್ರಚಾರ ಸಾಗಿದೆ. ಇದನ್ನು ವೈಜ್ಞಾನಿಕವಾಗಿ ನೋಡಬೇಕಾದ ಅವಶ್ಯಕತೆ



**ಕಲ್ಗುಂಡಿ ನವೀನ್ (ಕೆ ಎಸ್ ನವೀನ್)**

ಎಂದಿಗಿಂತಲೂ ಇಂದು ಹೆಚ್ಚಿದೆ. ದೇಶದ ಭೂವಿಜ್ಞಾನ ಬಹುತೇಕ ನೀರಿನ ಲಭ್ಯತೆಯನ್ನು ನಿರ್ಧರಿಸುತ್ತದೆ. ಅದು ಮಳೆಯಿರಬಹುದು, ಅಂತರ್ಜಲವಿರಬಹುದು. ಇನ್ನು ಕಾಡುಗಳು ಇದಕ್ಕೆ ಪೂರಕವಾದ ಮತ್ತು ಒಳಗೊಂಡ ಒಂದು ಬಹುದೊಡ್ಡ ವ್ಯವಸ್ಥೆ. ನದಿಗಳು ಹರಿಯಲೇಬೇಕು. ಇವು ಖನಿಜಗಳು ಮತ್ತು ಪೋಷಕಾಂಶಗಳನ್ನು ಸಾಗರಕ್ಕೆ ಸಾಗಿಸುತ್ತವೆ. ಪರಿಸರದ ಮೂಲ ಚಕ್ರಗಳಿಗೆ ಇದೇ ಮೊದಲ ಗುಂಡಿ. ಹೀಗಿರುವಾಗ ಅವೈಜ್ಞಾನಿಕವಾದ "ವ್ಯರ್ಥವಾಗಿ ಸಾಗರಕ್ಕೆ ಹರಿದುಹೋಗುವ ನೀರನ್ನು ಬಳಸಲಾಗುತ್ತದೆ" ಎಂದು ಬೊಬ್ಬಿರಿಯಲಾಗುತ್ತಿದೆ. ನಿಸರ್ಗದಲ್ಲಿ ಯಾವುದೂ ವ್ಯರ್ಥವಿಲ್ಲ. ಇನ್ನು ಈ ನದಿಗಳನ್ನು ತಿರುಗಿಸಿ ಇನ್ನೆಲ್ಲಿಗೋ ನೀರು ಒದಗಿಸುವ ಕಾರ್ಯ ಮೊದಮೊದಲು ಯಶಸ್ಸನ್ನು ನೀಡಬಹುದಾದರೂ ಶಾಶ್ವತವಾದ ಕೊರತೆಯನ್ನು ಉಂಟುಮಾಡುತ್ತದೆ. ಚಿನ್ನದ ಮೊಟ್ಟೆಯಿಡುವ ಕೋಳಿಯ ಹೊಟ್ಟೆಯನ್ನು ಕುಯ್ದ ಪ್ರಸಂಗವಾಗುತ್ತದೆ. ಜಲಕ್ಷಾಮದ ಪ್ರದೇಶಗಳೆಂದು ಹೇಳಲಾದ ಕೋಲಾರ ಮತ್ತಿತರ ಪ್ರದೇಶಗಳಲ್ಲಿ ಈ ಹಿಂದೆಯಿದ್ದ ಕೆರೆಕಟ್ಟೆಗಳನ್ನು (ಹಾಗೆಯೇ ಬೆಂಗಳೂರಿನಲ್ಲಿದ್ದ ಕೆರೆ, ನದಿಗಳನ್ನು ಸಹ) ಪಟ್ಟಭದ್ರ ಹಿತಾಸಕ್ತಿಗಳಿಗೆ ಒಪ್ಪವಿಟ್ಟು ನಗದನ್ನಾಗಿಸಿ ಪರಿವರ್ತಿಸಲಾಯಿತು. ಈಗ ಕೋಲಾರಕ್ಕೆ ನೇತ್ರಾವತಿ, ಬೆಂಗಳೂರಿಗೆ ಕಾವೇರಿ, ಹೇಮಾವತಿ, ಬಂದರೆ ಕೃಷ್ಣೆ, ಗಂಗೆ ಸಹ! ಮುಂದೆ ಇಂದು ಜಲಸಮೃದ್ಧ ಎಂದು ಈಗ ಅಂದು ಕೊಳ್ಳಲಾಗುತ್ತಿರುವ ನಗರಗಳೂ ನಮ್ಮ ಅವೈಜ್ಞಾನಿಕ ವ್ಯವಸ್ಥೆಯಿಂದಾಗಿ ಜಲಕ್ಷಾಮ ನಗರಗಳಾಗುತ್ತವೆ. ಆಗ ಯಾವ ಯಾವ ನದಿಗಳನ್ನು ತಿರುಗಿಸಬಹುದು? ಜೋಡಿಸಬಹುದು?

ಮೇಲಿನದು ನಮ್ಮ ರಾಜ್ಯದ ಸಮಸ್ಯೆಯಾದರೆ, ಇಡೀ ರಾಷ್ಟ್ರದ ಕ್ಷಾಮವನ್ನು ತೊಲಗಿಸಲು ದೇಶದ ಬಹುತೇಕ ನದಿಗಳನ್ನು ಜೋಡಿಸುವ ಯೋಜನೆಯೊಂದು ದಶಕಗಳ ಹಿಂದೆಯೇ ಸಿದ್ಧವಾಗಿ ಕೂತಿದೆ. ಅದೇ ಭಾರತದ ನದಿಗಳ ಜೋಡಣೆ. ಈ ಯೋಜನೆಯ ಅಂದಾಜು ವೆಚ್ಚ ಎಷ್ಟು ಗೊತ್ತೆ? ಹನ್ನೊಂದುವರೆ ಸಾವಿರ ಲಕ್ಷ ಕೋಟಿ ರೂಪಾಯಿಗಳು! ಇದನ್ನು ವಿದೇಶಿ ಸಂಸ್ಥೆಗಳಿಂದ ಸಾಲ ತಂದು ನಿರ್ವಹಿಸಲಾಗುವುದು! ಬಹುಶಃ ಇಷ್ಟು ಹೇಳಿದರೆ ಸಾಕು ಎನಿಸುತ್ತದೆ, ಈ ಯೋಜನೆ ಎಷ್ಟು ಅಸಮರ್ಥನೀಯ ಎನ್ನಲು, ಇದರ ಹಿಂದಿರುವ ಹುನ್ನಾರಗಳನ್ನು ಅರಿಯಲು! ಜೊತೆಗೆ, ಇದುವರೆಗೂ ಒಂದೇ ಒಂದು ವೈಜ್ಞಾನಿಕ ವರದಿ ನದಿ ಜೋಡಣೆಯ ಪರವಾಗಿಲ್ಲ. ವಿರುದ್ಧವಾಗಿ ಮಾತನಾಡುವ ವಿಜ್ಞಾನಿ, ಸಂಸ್ಥೆಗಳನ್ನು ಸಲಹಾ ಸಮಿತಿಗಳಿಂದ ದೂರವಿಡುವ ಕಾರ್ಯ ವ್ಯವಸ್ಥಿತವಾಗಿ ನಡೆಯುತ್ತಿದೆ. ಬದಲಾಗಿ, ನಿಂತು ಅವರ ಆಕ್ಷೇಪಗಳಿಗೆ ಉತ್ತರಿಸ ಬಹುದಲ್ಲವೆ? ಇನ್ನೊಂದು ವಿಷಯವನ್ನು ಪರಿಶೀಲಿಸಿ ಪರಿಹಾರಗಳಿಗೆ ಹೋಗೋಣ. ಈ ತಿರುಗಣೆ, ಜೋಡಣೆಗಳು ಪರಿಸರದ ಮೇಲೆ



ಅಗಾಧ ದುಷ್ಪರಿಣಾಮಗಳನ್ನು ಬೀರುತ್ತದೆ. ಗಣನೀಯ ಪ್ರಮಾಣದ ಕಾಡುಗಳನ್ನು ಕಡಿಯ ಬೇಕಾಗುತ್ತದೆ. ಇದರಿಂದ ಅಲ್ಲಿನ ಜೀವಿಗಳು ಹಾಗೂ ಪರಿಸರದ ಮೇಲೆ ಉಂಟಾಗುವ ಪರಿಣಾಮಗಳನ್ನು ಅರಣ್ಯ ಇಲಾಖೆ ಅಧ್ಯಯನ ಮಾಡಿದೆಯೇ? ಮಾಡುವ ಯೋಜನೆಯಿದೆಯೇ ಎಂದು ನಾನು ಮಾಹಿತಿ ಹಕ್ಕು ಕಾಯಿದೆ ಅನ್ವಯ ಬರೆದು ಕೇಳಿದೆ. ಇಲಾಖೆಯ ಉತ್ತರ: "ಅಂತಹ ಯಾವ ಅಧ್ಯಯನಗಳನ್ನೂ ಇಲಾಖೆ ಮಾಡಿಲ್ಲ, ಮಾಡುವ ಪ್ರಸ್ತಾವವಿಲ್ಲ"! ಜೈ ಕಿಸಾನ್, ಜೈ ವಿಜ್ಞಾನ್!

**ಪರಿಹಾರಗಳೇನು**?

ಜಾಗತಿಕ ಹಾಗೂ ಸ್ಥಳೀಯ ಜೀವಪರಿಸ್ಥಿತಿ ವಿಜ್ಞಾನ ಬಹಳ ಸೂಕ್ಷ್ಮವಾದದ್ದು. ಇನ್ನೂ ಸಂಪೂರ್ಣವಾಗಿ ನಮಗೆ ತಿಳಿಯದ್ದು. ಹವಾಮಾನ ಬದಲಾವಣೆಯ ಈ ದಿನಮಾನಗಳಲ್ಲಿ ನಾವು ಇಡುವ ಒಂದೊಂದು ಹೆಜ್ಜೆಯೂ ನಮ್ಮ ಅಳಿವು ಉಳಿವಿನ ಕುರಿತಾಗಿ ನಿರ್ಣಾಯಕವಾಗುವಂತಹದ್ದು. ಇಂತಹ ಪರಿಸ್ಥಿತಿಯಲ್ಲಿ ನಾವು ಎಚ್ಚರಿಕೆಯಿಂದ ಹೆಜ್ಜೆಯಿಡಬೇಕಾಗಿದೆ.




ಜಲಸಮಸ್ಯೆಯನ್ನು ಸ್ಥಳೀಯವಾಗಿಯೇ ಪರಿಹರಿಸಿಕೊಳ್ಳುವುದೇ ಪರಿಹಾರಗಳ ಕೇಂದ್ರ. ಹೆಚ್ಚು ಮಳೆಯಾಗುವ ಕರ್ನಾಟಕ, ಕೇರಳ ಮತ್ತಿತರ ರಾಜ್ಯಗಳನ್ನು ಬಿಡಿ, ಅತಿ ಕಡಿಮೆ ಮಳೆಯಾಗುವ ಮರಳುಗಾಡಿನ ಪ್ರದೇಶವಾದ ರಾಜಸ್ಥಾನದಲ್ಲಿ ರಾಜೇಂದರ್ ಸಿಂಗ್‌ರ ತರುಣ್ ಭಾರತ್ ಸಂಘ್ ಐದು ನದಿಗಳನ್ನು ಮತ್ತೆ ಹರಿಯುವಂತೆ ಮಾಡಲು ಸಾಧ್ಯವಿದೆ ಎಂದಾಗ ದೇಶದ ಚುಕ್ಕಾಣಿ ಹಿಡಿದಿರುವ ಕೇಂದ್ರ ಸರ್ಕಾರಗಳು, ರಾಜ್ಯ ಸರ್ಕಾರಗಳು ಮಾಡಲು ಸಾಧ್ಯವಿಲ್ಲವೆ? ತಮಿಳುನಾಡು ಮತ್ತು ಕರ್ನಾಟಕದಲ್ಲಿ ಕೆಲವು ನದಿಗಳನ್ನು ಕೆಲವು ಧಾರ್ಮಿಕ ಸಂಸ್ಥೆಗಳು ಕಾರ್ಪೋರೇಟ್ ನೆರವಿನಿಂದ ಪುನರುಜ್ಜೀವನಗೊಳಿಸಿ ಯಶಸ್ವಿಯಾಗಿವೆ. ಸರ್ಕಾರ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡರೆ ನಿಸ್ಸಂದೇಹವಾಗಿ ಯಾವ ತಿರುಗಣೆ, ಜೋಡಣೆಗಳ ಅಗತ್ಯವಿಲ್ಲದೆ, ಲಕ್ಷಕೋಟಿಗಳ ಸಾಲವಿಲ್ಲದೆ ಜಲಕ್ಷಾಮವನ್ನು ಹೊಡೆದೋಡಿಸಬಹುದು! ಇಂತಹ ಇನ್ನೂ ಅನೇಕ ಪರಿಹಾರಗಳಿವೆ.

ನಾವಿನ್ನೂ ಪರಿಸರ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಲು ಆಗಿಲ್ಲ, ನಿಧಾನವಾಗಿ ಸಾಗಬೇಕು, ಜನಜಾಗೃತಿ, ಜನಪರಹೋರಾಟಗಳಿಂದ ಮತ್ತು ನ್ಯಾಯಾಲಯಗಳು ಅಂತಹ ಪ್ರಜಾಸತ್ತಾತ್ಮಕ ವ್ಯವಸ್ಥೆಗಳಿಂದ ಪರಿಸರವನ್ನು ಉಳಿಸಿಕೊಳ್ಳಬಹುದು, ಬೇಕು ಹಾಗೂ ಅದೇ ಯುಕ್ತವಾದ ಮಾರ್ಗ ಎಂಬ ಅರಿವೇ ಈ ಬಾರಿಯ ಪರಿಸರ ದಿನದ ತಿಳಿವಳಿಕೆಯಾಗಲಿ!

**ಕಲ್ಗುಂಡಿ ನವೀನ್ (ಕೆ ಎಸ್ ನವೀನ್)**
೫/೧, ಶ್ಯಾನುಭೋಗ ನಂಜುಂಡಪ್ಪ ಗಲ್ಲಿ
ಚಿಕ್ಕಮಾವಳ್ಳಿ ಅಂಚೆ, ಉಪ್ಪಾರಹಳ್ಳಿ, ಬೆಂಗಳೂರು – ೪

# ದಿಟ್ಟ ಸ್ತ್ರೀ ಧ್ವನಿಯ ಪ್ರಬುದ್ಧ ಕವಿತೆಗಳು




ಕೃತಿ : **ಹಲಗೆ ಮತ್ತು ಮೆದುಬೆರಳು**
ಪುಟ : ೩೮೪ ಬೆಲೆ : ರೂ. ೩೦೦
ಪ್ರಕಾಶಕರು : **ಗೀತಾಂಜಲಿ ಪುಸ್ತಕ ಪ್ರಕಾಶನ**
ಕಂದಾಯ ಭವನ, ನೂರಡಿ ರಸ್ತೆ
ರಾಜೇಂದ್ರ ನಗರ, ಶಿವಮೊಗ್ಗ – ೫೭೭೨೦೧




‘ಹಲಗೆ ಮತ್ತು ಮೆದುಬೆರಳು’ ಎಂಬ ಶೀರ್ಷಿಕೆಯನ್ನು ಹೊತ್ತ ಕವನವು ಇಂದು ಸರ್ವೇಸಾಮಾನ್ಯವಾಗಿರುವ ಸ್ತ್ರೀ ಶೋಷಣೆಯ ಕುರಿತಾದ ಕವನಗಳಿಗೆ ತದ್ವಿರುದ್ಧ ದಿಕ್ಕಿನಲ್ಲಿ ಹೋಗುತ್ತದೆ. ಸ್ತ್ರೀಯರು ಒಟ್ಟಾಗಿ ಒಬ್ಬ ಮೃದುಹೃದಯದ ಪುರುಷನ ಮೆದುಬೆರಳನ್ನು ಜಜ್ಜುವುದೂ ಸಾಧ್ಯವಿದೆ ಎನ್ನುತ್ತದೆ ಈ ಕವನ. ಈ ಶೀರ್ಷಿಕೆಯ ಅರ್ಥ ವ್ಯಾಪ್ತಿಯು ಒಂದು ಕವನಕ್ಕೆ ಸೀಮಿತವಾಗಿಲ್ಲ. ಕಠಿಣ ಮೇಲ್ಮೈಯುಳ್ಳ ಹಲಗೆ ಮತ್ತು ಮನುಷ್ಯನ ಸಂವೇದನಾಶೀಲ ಮನಸ್ಸುಗಳ ನಡುವಣ ಸಂಘರ್ಷವಾಗಿ ವಿಶಾಲಾರ್ಥವನ್ನು ಧ್ವನಿಸುತ್ತದೆ.

ಸಮಕಾಲೀನ ಕನ್ನಡ ಕಾವ್ಯದ ಹೊಸ ತಲೆಮಾರಿನ ಕವಿಗಳಲ್ಲಿ ಇಷ್ಟೊಂದು ಪ್ರಬುದ್ಧ ಹಾಗೂ ದಿಟ್ಟ ಸ್ತ್ರೀಧ್ವನಿ ಕೇಳುತ್ತಿರುವುದು ಇದೇ ಮೊದಲು. ಕಾದಂಬಿನಿ ಎಂಬ ಕಾವ್ಯನಾಮದಲ್ಲಿ ನೂರಾರು ಸತ್ವಯುತ ಕವನಗಳನ್ನು ಫೇಸ್ ಬುಕ್ಕಿನಲ್ಲಿ ಹಾಕಿ, ಇದೀಗ ಪುಸ್ತಕರೂಪದಲ್ಲಿ ಪ್ರಕಟಿಸಿರುವ ಅವರ ಕವಿತಾ ಸಂಕಲನದ ಹೆಸರು ‘ಹಲಗೆ ಮತ್ತು ಮೆದುಬೆರಳು’. ತನ್ನ ಶೀರ್ಷಿಕೆ ಸ್ಫುರಿಸುವ ಭಿನ್ನ ಧ್ವನಿಯಿಂದಲೇ ಕಾವ್ಯಲೋಕದ ಗಮನ ಸೆಳೆಯುವ ಈ ಸಂಕಲನದ ಕವಿತೆಗಳಲ್ಲಿ ಅದ್ಭುತ ಭಾಷಾ ಸೌಂದರ್ಯದ ಜತೆಗೆ ತಾನು ಕಂಡ ಸತ್ಯಗಳನ್ನು ನೇರವಾಗಿ ಹೇಳುವ ಎದೆಗಾರಿಕೆಯೂ ಇದೆ. ಇಷ್ಟೊಂದು ವೈಚಾರಿಕ ಚಿಂತನೆಗಳು ಮತ್ತು ನಿರೂಪಣಾ ಸಾಮರ್ಥ್ಯವಿದ್ದೂ ಇವರು ಇಷ್ಟು ದೀರ್ಘಕಾಲ ಅಜ್ಞಾತವಾಗಿಯೇ ಯಾಕೆ ಉಳಿದರು ಎಂಬ ಪ್ರಶ್ನೆಯನ್ನು ಒತ್ತಟ್ಟಿಗಿಟ್ಟುಕೊಂಡೇ ಅವರ ಸಂಕಲನದತ್ತ ಒಂದು ಪಕ್ಷಿನೋಟ ಹರಿಯಿಸುವುದು ಈ ಲೇಖನದ ಉದ್ದೇಶ.

ಕಾದಂಬಿನಿಯವರ ಭರ್ತಿ ೩೭೬ ಪುಟಗಳ ಈ ಸಂಕಲನದಲ್ಲಿ ಒಟ್ಟು ೧೬೨ ಕವನಗಳಿವೆ. ಒಮ್ಮೆ ಕೈಗೆತ್ತಿಕೊಂಡರೆ ಮುಗಿಸುವ ತನಕ ಕೆಳಗಿಡಲು ಮನಸ್ಸಾಗದಷ್ಟು ಸೆಳೆಯುವ ಸೂಜಿಗಲ್ಲಿನ ಶಕ್ತಿ ಇಲ್ಲಿನ ಕವನಗಳಿಗಿವೆ ಅನ್ನುವುದು ಈ ಕೃತಿಯ ಹೆಚ್ಚುಗಾರಿಕೆ. ಬದುಕಿನಲ್ಲಿ ತಮ್ಮ ಸುತ್ತ ಕಂಡದ್ದು–ಕೇಳಿದ್ದು ಮತ್ತು ಓದಿ ತಿಳಿದುಕೊಂಡದ್ದೆಲ್ಲವನ್ನೂ ಇಲ್ಲಿ ಕವಯಿತ್ರಿ ತಮ್ಮ ಕಾವ್ಯದ ವಸ್ತುವಾಗಿಸಿದ್ದಾರೆ. ಮನುಷ್ಯನ ಸ್ವಾರ್ಥ, ಅಹಂಕಾರ, ಅಸೂಯೆಗಳಿಂದಾಗಿ ಸಂಬಂಧಗಳಲ್ಲಿ ಉಂಟಾಗುವ ಬಿರುಕುಗಳು, ಧರ್ಮದ ಹೆಸರಿನಲ್ಲಿ ಪ್ರದರ್ಶಿಸುವ ಸೋಗಲಾಡಿತನ, ಪರಿಸರ ನಾಶ, ಬಡವರಿಗೂ ಕೆಳವರ್ಗದ ಮುಗ್ಧರಿಗೂ ಆಗುವ ಅನ್ಯಾಯಗಳು, ಲಿಂಗ ತಾರತಮ್ಯ, ರಾಜಕೀಯ ಡೊಂಬರಾಟಗಳು, ಅಧಿಕಾರಕ್ಕಾಗಿ ನಡೆಸುವ ಕಸರತ್ತುಗಳು, ಪ್ರಗತಿಯ ಹೆಸರಿನಲ್ಲಿ ಪರಿಸರವನ್ನು ಕಬಳಿಸುವ ಹುನ್ನಾರಗಳು, ಮಾನವೀಯತೆಯನ್ನು ಮರೆಯುವ ಮತೀಯ ಕಲಹಗಳು ಮತ್ತು ನೂರಾರು ವೇಷಗಳಲ್ಲಿ ಸಮಾಜವನ್ನು ಕಾಡುವ ಸಮಸ್ಯೆಗಳು ಕವಯಿತ್ರಿಯನ್ನು ತೀವ್ರವಾಗಿ ಕಾಡಿವೆ. ಅಷ್ಟೇ ಸಶಕ್ತವಾಗಿ ಕೆಲವು ಮನುಷ್ಯ ಸಂಬಂಧಗಳು : ಗಂಡು–ಹೆಣ್ಣು, ತಾಯಿ–ಮಕ್ಕಳು, ತಂದೆ–ಮಕ್ಕಳ ನಡುವಣ ನಿರ್ವ್ಯಾಜ ಪ್ರೀತಿ–ವಾತ್ಸಲ್ಯಗಳ ಆರ್ದ್ರತೆ ಇವು ಅವರ ಮನಸ್ಸನ್ನು ಧನ್ಯಭಾವದಿಂದ ತುಂಬುತ್ತವೆ. ಇಲ್ಲಿನ ಕವನಗಳಲ್ಲಿ ಅಡಗಿರುವ ಚಿತ್ರಕ ಮತ್ತು ರೂಪಕ ಶಕ್ತಿಗಳು, ಪ್ರತಿಮೆ ಮತ್ತು ಅಲಂಕಾರಗಳು ಓದುಗನ ಮೇಲೆ ಅಗಾಧವಾದ ಪರಿಣಾಮ ಬೀರುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಕಾದಂಬಿನಿಯವರ ಭಾಷಾ ಶೈಲಿ ಮತ್ತು ಶಬ್ದ ಸಂಪತ್ತು ಅಚ್ಚರಿ ಹುಟ್ಟಿಸುತ್ತವೆ. ಸಾಹಿತ್ಯ, ಇತಿಹಾಸ ಮತ್ತು ಜನಪದ ಬದುಕುಗಳ ಬಗ್ಗೆ ಸಾಕಷ್ಟು ಓದಿ ತಿಳಿದುಕೊಂಡಿರುವ ಇವರು ತಮ್ಮ ಅಷ್ಟೂ ಅನುಭವಗಳನ್ನು ಸಂದರ್ಭೋಚಿತವಾಗಿ ಬಳಸುವ ಪರಿ ಅದ್ಭುತವಾದುದು. ಕವನದುದ್ದಕ್ಕೂ ಹಬ್ಬಿಕೊಳ್ಳುವ ಪ್ರಾಸಾನುಪ್ರಾಸಗಳು ಮತ್ತು ಆವರ್ತನೆಗೊಳ್ಳುವ ಪದಗಳು ನಾಲಿಗೆಯಲ್ಲಿ ಉರುಳುರುಳಿ ಹೊರಳುವಾಗ ಕರುಳು ಜುಮ್ಮೆನ್ನಿಸುವ ಅನುಭವ ಅವರ್ಣನೀಯ. ಹೀಗೆ ಪದಗಳೊಂದಿಗೆ ತುಂಟಾಟವಾಡುವ ಕಸರತ್ತು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಆಗಿಹೋದ ಕವಿದಿಗ್ಗಜರನ್ನು ನೆನಪಿಸಿದರೆ ಆಶ್ಚರ್ಯವಿಲ್ಲ. ಉದಾಹರಣೆಗಳನ್ನು ಕೊಡಹೋದರೆ ಇಲ್ಲಿ ಅನೇಕ ಕವನಗಳನ್ನು ಉಲ್ಲೇಖಿಸಬೇಕಾಗುತ್ತದೆ. ಆದ್ದರಿಂದ ಕೆಲವೇ ಕೆಲವು ಕವನಗಳ ಕೆಲವು ಚರಣಗಳನ್ನು ಮಾತ್ರ ಉಲ್ಲೇಖಿಸುತ್ತೇನೆ :

‘ಹಳೆ ಮುದುಕಿ’ ಎಂಬ ಒಂದು ಕವನ. ಇದು ಹಿರಿಯರನ್ನು ಗೌರವಿಸಬೇಕು ಎಂಬ ಭಾರತೀಯ ಸಂಸ್ಕೃತಿಯ ಪಾಠಕ್ಕೆ ಸವಾಲಾಗಿ ನಿಲ್ಲುವ ಕವನ.

**ಡಾ॥ ಪಾರ್ವತಿ ಜಿ. ಐತಾಳ್**

ಇಲ್ಲಿನ ಹಳೆಯ ಮುದುಕಿ ತನ್ನೆಲ್ಲ ದುರ್ಗುಣ–ದುರ್ನಡತೆಗಳಿಂದ ಜುಗುಪ್ಸೆ ಹುಟ್ಟಿಸುವ ವ್ಯಕ್ತಿತ್ವವುಳ್ಳವಳು. ಇಂಥವರನ್ನು ಬೆಂಬಲಿಸುವವರ ಸಂಖ್ಯೆಯೂ ನಮ್ಮಲ್ಲಿ ಕಡಿಮೆಯಿಲ್ಲ. ಇದು ನಮ್ಮ ಸಾಂಸ್ಕೃತಿಕ ಸಂದರ್ಭದ ಒಂದು ವ್ಯಂಗ್ಯವೂ ಹೌದು. ಕಿರಿಯರನ್ನು ಹಸನಾಗಿ ಹರಸಬೇಕಾದ ಹಿರಿತನದ ಹಿರಿಯಬ್ಬೆ, ನಂಜುನಾಲಗೆಯ ಆ ಮುದುಕಿಯ ವರ್ಣನೆ ಇಲ್ಲಿ ಗಮನ ಸೆಳೆಯುವಂಥದ್ದು :

*ಮುಪ್ಪಾದ ಚರ್ಮದೊಳಗೋ ಮುಕ್ಕೋಟಿ ಸುಕ್ಕುಗಳು / ಮಾಸಿದ ಮುದಿ ತಲೆಯೊಳಗೋ ಬಿಡಿಸಲಾಗದ ಸಿಕ್ಕುಗಳು*

*ಸಿಕ್ಕು ಸುಕ್ಕಿನೊಳಗೆ ಹೊಕ್ಕಿರುವ ಹೇನು ಕೂರೆಗಳ ಹೆಕ್ಕಲರಿಯದ / ದಿಕ್ಕು ತಪ್ಪಿದ ಹಳೆ ಮುದುಕಿ ಕೆಮ್ಮಿ ಕ್ಯಾಕರಿಸಿ ಕಕ್ಕಿದ್ದೆಲ್ಲವ*

*ಕಜ್ಜಿಪುಳ್ಳೆ ನಾಯಿಗಳು ಕಕ್ಕುಲತೆಯಲಿ ನೆಕ್ಕುವವು !*

(ಪು. ೨೬೬)

– ಇಲ್ಲಿ ಹಳೆ ಮುದುಕಿಯನ್ನು ಸಮಾಜದ ಪ್ರಗತಿಗೆ ಕಂಟಕವಾಗಿ ಅಡ್ಡ ಬರುವ ಗೊಡ್ಡು ಸಂಪ್ರದಾಯಗಳ ಪ್ರತೀಕವಾಗಿಯೂ ನಾವು ಅರ್ಥೈಸಿಕೊಳ್ಳಬಹುದು.

ಸಾಮಾನ್ಯರ ಗಮನವನ್ನೂ ಸೆಳೆಯುವ ಸರಳ ವಸ್ತುಗಳಲ್ಲಿ ಕವಯಿತ್ರಿ ಕಾಣುವ ವೈಶಿಷ್ಟ್ಯವು 'ಸೆರೆಯಾಳು' ಎಂಬ ಕವನದ ರಚನೆಗೆ ಪ್ರೇರೇಪಿಸುತ್ತದೆ. ಚೆಲುವಾದ ಇನಿದು ಇರುಳುಗಳು ಕವಿಮನಸ್ಸಿನ ದೃಷ್ಟಿಯಲ್ಲಿ ಪ್ರಕೃತಿಯ ಸುಂದರ ಕೊಡುಗೆ. ತಂಗಾಳಿ ತರುವ ಹಿತವಾದ ಪರಿಮಳದ ಮೋಹನ ಮುರಲಿ ನಾದಕ್ಕೆ ಮರುಳಾಗಿ ಮತ್ತೇರಿದಾಗ ಆಕೆಗರಿವಿಲ್ಲದಂತೆ ಆಕೆ ಜಾರಿದ್ದು ಕೃಷ್ಣಪಕ್ಷದ ಕೂಪದೊಳಗೆ... ಆಳದವರೆಗೆ ಕಾವಳ ತುಂಬಿದ ತಳವಿರದ, ಕಾಳೋರಗಗಳು ಬುಸುಗುಟ್ಟುವ ಪಾತಾಳಕ್ಕೆ... ಅಲ್ಲಿ...

*ತಿವಿದ ನಿಶಿತ ಕಾಳ್ಗತ್ತಿಗಳೆಷ್ಟೋ / ಮಸೆಮಸೆದು ಇರಿವ ಕೂರ್ದಸಿಗಳೆಷ್ಟೋ / ಹೊತ್ತಿಹೊತ್ತಿ ಉರಿವ ಕೆಂಡಗಣ್ಣುಗಳೆಷ್ಟೋ*

*ಎದೆಯ ಬಗೆವ ಕೊಂಬು ಕೋಡುಗಳೆಷ್ಟೋ / ಎಡವಿದೆಡೆ ಎಡೆಗಳಲಿ ಎಡವಿಗಲ್ಲು / ತಡವಿದೆಡೆ ಎಡೆಗಳಲಿ ಮೊನಚು ಹಲ್ಲು ನಂಜುಗುರು !* (ಪು. ೬೭)

ಎಲ್ಲ ಮೃಗಗಳಿಗಿಂತ ಅತ್ಯಂತ ಹೆಚ್ಚು ಕ್ರೂರಿಯಾದವನು ಮನುಷ್ಯನೇ ಎಂದು ಸಾಧಿಸುವ 'ಒಂದು ಮಾಯಾಮೃಗ' ಎಂಬ ಕವನದಲ್ಲಿ ಬೀಭತ್ಸ ರಸವಿದೆ. ಅಂಥ ಅಪಾಯಕಾರಿ ಮೃಗದ ಬಗ್ಗೆ ಎಚ್ಚರಿಕೆ ನೀಡುವ ಸಾಲುಗಳನ್ನು ಓದುವಾಗ ರೋಮಗಳು ನಿಮಿರುತ್ತವೆ :

*ಅಕ್ಟೋಪಸ್ಸನ್ನು ಹೋಲುವ ಈ ಮೃಗಕ್ಕೆ / ನಾಲ್ಕು ಸಾವಿರದಿನ್ನೂರು ಕಾಲುಗಳು*

*ಕಾಲಿನ ರೋಮ ರೋಮಕ್ಕೂ ಲಕ್ಷಾಂತರ ಕಣ್ಣು / ನೆತ್ತರು ಹೀರುವ ಬಾಯಿ* (ಪು. ೯೪–೯೫)

ಕವಿತೆಯನ್ನು ನದಿಗೆ ಹೋಲಿಸುತ್ತ ಕವಿತೆಗೆ ನೆಪಮಾತ್ರವಾಗುವ ಕವಿ ಜಂಭಪಡುವುದು ಅರ್ಥಹೀನವೆನ್ನುವ 'ನದಿ ಮತ್ತು ಕವಿತೆ', ತನ್ನ ಮೇಲೆ ದೌರ್ಜನ್ಯವೆಸಗಿ ವಂಚಿಸಿ ಅಸಹಾಯಕಳನ್ನಾಗಿ ಮಾಡಿದ ಸಮಾಜದ ವಿರುದ್ಧ ಬಂಡೇಳುವ ಹೆಣ್ಣನ್ನು ಹುಚ್ಚಿಯೆಂದು ಗೇಲಿ ಮಾಡುವುದರತ್ತ ಬೊಟ್ಟು ಮಾಡುವ 'ಹುಚ್ಚಿಯೆನ್ನುತಿದೆ', ಅರ್ಥಹೀನ ಸಂಪ್ರದಾಯಗಳಲ್ಲಿ ಕಾಣುವ ಕೃತಕ ನಾಟಕೀಯ ವರ್ತನೆಯನ್ನು ಟೀಕಿಸುವ 'ಆಪ್ತರು ತೀರಿ ಹೋದಾಗ', ಅಡುಗೆ ಮನೆಗೇ ಸೀಮಿತಗೊಳ್ಳುವ ಹೆಣ್ಣಿನ ಬದುಕನ್ನು ಚಿತ್ರಿಸುವ 'ಅವಳು ಅಡುಗೆ ಮಾಡುತ್ತಾಳೆ', ಸಾಮಾಜಿಕ ಕ್ರೌರ್ಯವು ಸಮಷ್ಟಿ ಪ್ರಜ್ಞೆಯಲ್ಲಿ ಮಡುಗಟ್ಟಿದ ರೀತಿಯನ್ನು ಬಯಲುಮಾಡುವ 'ಕುಡಿಯಲು ನೀರು ಕೇಳಿದರೆಂದು' ಆಧುನಿಕತೆ ಮತ್ತು ಪ್ರಗತಿಗಳು ಕೆರೆಗಳನ್ನು ಬತ್ತಿಸಿ ಕಟ್ಟಡಗಳನ್ನು ಕಟ್ಟಿ ಹಣ ಮಾಡುವ 'ತಾವರೆಕೆರೆ ಅಪಾರ್ಟ್‌ಮೆಂಟ್ಸ್', 'ನಿರಾಶ್ರಿತರ ಕ್ಯಾಂಪು' ಎಂಬ ನಾಟಕದಲ್ಲಿ ಜನಸಾಮಾನ್ಯರಿಗೆ ಆಶ್ರಯ ಸಿಗುತ್ತದೋ ಅಥವಾ ಅವರ ಸ್ವಾತಂತ್ರ್ಯ ಹರಣಮಾಡುವ ಯಾತನಾ ಶಿಬಿರವಾಗುತ್ತದೋ ಎಂಬುದರ ಕುರಿತು ಸೂಕ್ಷ್ಮ ಒಳನೋಟವಿರುವ 'ನಿರಾಶ್ರಿತರ ಕ್ಯಾಂಪು', ಮನುಷ್ಯರ ನಡುವಣ ಸಂಬಂಧಗಳನ್ನು ನಾಶಮಾಡುವ ಗೋಡೆಗಳ ನಿರ್ಮಾಣಕ್ಕೆ ತಡೆಯೊಡ್ಡಬೇಕು ಎನ್ನುವ 'ಗೋಡೆಗಳು ಮಾತನಾಡುತ್ತವೆ', ಒಂದೊಮ್ಮೆ ಹೆಣ್ಣಿನ ಸೌಂದರ್ಯಮಾಪಕವಾಗಿದ್ದ ನೀಳಕೂದಲು ಇಂದು ಹೇಗೆ ಆಕೆಯನ್ನು ಹಿಂಸಿಸುವ ಸಾಧನವಾಗಿ ಮಾರ್ಪಟ್ಟಿದೆ ಎನ್ನುವ 'ಅವಳ ಹೆರಳ ಸಿಕ್ಕುಗಳಲಿ ಅವನು', ಹೆಣ್ಣಿನ ಮೇಲೆ ಸಂಪ್ರದಾಯವು ಹೊರಿಸಿದ ಜವಾಬ್ದಾರಿಯನ್ನು ಪೊರಕೆಯ ಪ್ರತಿಮೆಯ ಮೂಲಕ ವ್ಯಂಗ್ಯವಾಗಿ ಚಿತ್ರಿಸುವ 'ಕೆಲಸ ಸಿಕ್ಕಿದೆ'. ಹೀಗೆ ವಿಶ್ಲೇಷಿಸುತ್ತ ಹೋದರೆ ಸಂಕಲನದಲ್ಲಿರುವ ಸೀಮಿತ ಸಂಖ್ಯೆಯ ಕೆಲವು ಕವನಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಕವನಗಳ ಬಗ್ಗೆ ಮಾತನಾಡಬೇಕಾದೀತು. ಹಾಗೆಂದು ಸಂಕಲನವು ಪೂರ್ತಿಯಾಗಿ ದೋಷರಹಿತ ಎನ್ನುವಂತಿಲ್ಲ. ಕೆಲವು ಕವನಗಳು ವಾಚ್ಯವಾಗಿ ತೋರುತ್ತವೆ. ಇನ್ನು ಕೆಲವು ಕವನಗಳಲ್ಲಿ ಅನಗತ್ಯವಾಗಿ ಆವರ್ತನಗೊಳ್ಳುವ ಪದಪುಂಜಗಳಿವೆ. ಆದರೆ ಭಾಷೆ ಮತ್ತು ನಿರೂಪಣೆಗಳಲ್ಲಿ ಕಾಣುವ ನೈಪುಣ್ಯವು ಈ ದೋಷಗಳನ್ನು ಮುಚ್ಚಿಹಾಕುತ್ತದೆ ಕೂಡ.

'ಹಲಗೆ ಮತ್ತು ಮೆದುಬೆರಳು' ಎಂಬ ಶೀರ್ಷಿಕೆಯನ್ನು ಹೊತ್ತ ಕವನವು ಇಂದು ಸರ್ವೇಸಾಮಾನ್ಯವಾಗಿರುವ ಸ್ತ್ರೀ ಶೋಷಣೆಯ ಕುರಿತಾದ ಕವನಗಳಿಗೆ ತದ್ವಿರುದ್ಧ ದಿಕ್ಕಿನಲ್ಲಿ ಹೋಗುತ್ತದೆ. ಸ್ತ್ರೀಯರು ಒಟ್ಟಾಗಿ ಒಬ್ಬ ಮೃದುಹೃದಯದ ಪುರುಷನ ಮೆದುಬೆರಳನ್ನು ಜಜ್ಜುವುದೂ ಸಾಧ್ಯವಿದೆ ಎನ್ನುತ್ತದೆ ಈ ಕವನ. ಈ ಶೀರ್ಷಿಕೆಯ ಅರ್ಥವ್ಯಾಪ್ತಿಯು ಒಂದು ಕವನಕ್ಕೆ ಸೀಮಿತವಾಗಿಲ್ಲ. ಕಠಿಣ ಮೇಲ್ಮೈಯುಳ್ಳ ಹಲಗೆ ಮತ್ತು ಮನುಷ್ಯನ ಸಂವೇದನಾಶೀಲ ಮನಸ್ಸುಗಳ ನಡುವಣ ಸಂಘರ್ಷವಾಗಿ ವಿಶಾಲಾರ್ಥವನ್ನು ಧ್ವನಿಸುತ್ತದೆ.

**ಡಾ॥ ಪಾರ್ವತಿ ಜಿ. ಐತಾಳ್**
"ಸುರಗಂಗಾ", ಬಸ್ರೂರು ಕ್ರಾಸ್ ರಸ್ತೆ
ಕುಂದಾಪುರ – ೫೭೬ ೨೦೧, ಉಡುಪಿ ಜಿಲ್ಲೆ

## ಜೋಕಾಲಿ




**ಯಾ**ರೋ ಜೀಕಿಬಿಟ್ಟ
ಜೋಕಾಲಿ
ಅದೃಶ್ಯ ಬಿಂದುಗಳಲಿ
ಗಾಳಿಯಲಿ ತೇಲಿ
ಹೊರಟಿದೆ ಸವಾರಿ
ಆಂದೋಲನವೂ
ಆನಂದವೂ
ಮೇಳೈಸಿದ ಪರಿ
ಉತ್ತುಂಗಕ್ಕೆ ಏರುವಾಗ
ಖುಷಿಯಲ್ಲಿನ ಗಾಬರಿ
ಕಿವಿಯಲ್ಲಿ ವಾಯು
ಹೊಕ್ಕು ತಲೆತಿರುಗಿದಂತಾಗಿ
ಹಲಗೆಯಿಂದ ಅಂಡು
ಜಾರಿದಂತಾದರೂ
ಹೋಯ್ ಎಂದು ಅರಚುತ್ತಾ
ಸಂಭ್ರಮದ ಭ್ರಮೆ ಹುಟ್ಟಿಸುವ
ಆಟದ ವೈಖರಿ !

ಎತ್ತರದ ಅಂಚುವಿನಿಂದ
ಯಥಾಸ್ಥಿತಿಗೆ ಜಾರಿ
ಮತ್ತೆ ಆ ತುದಿಗೆ ಹಾತೊರೆದು
ಡೋಲಾಯಮಾನದಾರಿ
ಹಿತವೋ ಅಹಿತವೋ;
ಅಂಚುಗಳ ಅಂತರ
ಇಂಚಿಂಚು ಕಡಿಮೆಯಾಗಿ
ಆಟದ ಕೊನೆ ಕ್ರಮೇಣ
ಸನ್ನಿಹಿತವಾಗಿ
ನಿಂತು ಹೋಗುವುದು
ಜೀವನ ಜೋಕಾಲಿ

**ವಿ. ನರಸಿಂಹ ವರ್ಮ, ವಿಟ್ಲ**
ಕಾನೂನು ಅಧಿಕಾರಿ, ಕ. ರಾ. ರ. ಸಾ. ಸಂಸ್ಥೆ, ಕೇಂದ್ರ ಕಛೇರಿ, ಶಾಂತಿ ನಗರ, ಬೆಂಗಳೂರು – ೫೬೦ ೦೨೭

# ಮಾರ್ಕ್ಸೀಯ ಮಾನವತಾವಾದದ ಶ್ರೀಸಾಮಾನ್ಯ ಮಾದರಿ
# ಶೇಷಗಿರಿರಾವ್ ಹವಲ್ದಾರ್ ಸ್ಮೃತಿಬರೆಹ



ಶೇಷಗಿರಿ ಸೈದ್ಧಾಂತಿಕವಾಗಿ ಮಾರ್ಕ್ಸ್‌ವಾದಿಯೇ ಆಗಿದ್ದರೂ ಅವರ ಬದುಕಿನ ಮಿತಿಗಳು ಅವರನ್ನು ವರ್ಗಸಂಘರ್ಷಕ್ಕೆ ತೆರೆದುಕೊಳ್ಳುವುದನ್ನು ನಿಯಂತ್ರಿಸಿದವು. ಕುಟುಂಬದಲ್ಲಿ ತಾಯಿ, ಪತ್ನಿ ಇವರೊಂದಿಗೆ ನಾಲ್ವರು ಕಿರಿಯ ಸಹೋದರರು ಒಬ್ಬ ಸಹೋದರಿಯನ್ನು ಸಲಹುವ ಜವಾಬ್ದಾರಿ ಚಿಕ್ಕ ಸಂಬಳದ ಶೇಷಗಿರಿಯವರದಾಗಿತ್ತು. ತಾವಾಗಿಯೇ ಯಾವ ಸಂಘಟನೆಯಲ್ಲಿಯೂ ಪ್ರಧಾನ ಜವಾಬ್ದಾರಿ ನಿರ್ವಹಿಸದೇ ಹೋದರೂ ಇಡೀ ಕುಟುಂಬವನ್ನೇ ಮಾರ್ಕ್ಸ್‌ವಾದಿ ಚಿಂತನೆ ಮತ್ತು ಸಂಘಟನಾ ಸಂಬಂಧಕ್ಕೆ ಪರಿವರ್ತಿಸಿದರು. ಹಾಗೆ ನೋಡಿದರೆ ಇವರ ಬಡತನದ ಅನುಭವವೇ ಇವರನ್ನು ಬಡತನವನ್ನು ವಿರೋಧಿಸುವ ಮತ್ತು ಬಡವರನ್ನು ಪ್ರೀತಿಸುವ ಸಿದ್ಧಾಂತಕ್ಕೆ ಬದ್ಧತೆ ಮೂಡಿಸುವಲ್ಲಿ ಪ್ರಧಾನಪಾತ್ರ ವಹಿಸಿತ್ತು.

**ಬಿ. ಪೀರ್ ಬಾಷ**

"ಶೇಷಗಿರಿರಾವ್ ಹವಲ್ದಾರ್, ಹೂವಿನಹಡಗಲಿ ಎಂದು ಬರೆದರೆ ಸಾಕು, ಸೀದಾ ಪೋಸ್ಟ್ ಕೈ ತಲುಪುತ್ತದೆ. ಎಂ. ಕೆ. ಗಾಂಧಿ ಇಂಡಿಯಾ ಎಂದು ಬ್ರಿಟನ್ನಿನಿಂದ ಪತ್ರ ಬರೆದರೂ ಗಾಂಧೀಜಿಗೆ ತಲುಪುತ್ತಂತೆ ಹಾಗೆ..." ಎಂದೆನ್ನುತ್ತಾ ಹೆಮ್ಮೆಯಿಂದ ಅರಳಿ, ಮಲ್ಲಿಗೆಯಂತೆ ನಗು ಚೆಲ್ಲುತ್ತಿದ್ದರು ಶೇಷಗಿರಿ. ಅಷ್ಟೇ ಸಾಕು ಎಂದರೂ ಅವರ ವಿಳಾಸದಲ್ಲಿ ಕೇಶವ ದೇವಸ್ಥಾನದ ಎದಿರು, ಕೋಟೆ ಎಂದು ಇದ್ದೇ ಇರುತ್ತಿತ್ತು, ಸುಮಾರು ಎರಡು ದಶಕಗಳ ಕಾಲ.

ಅದೊಂದು ಪುಟ್ಟ ಮನೆ. ಸುಮಾರು ಹದಿನೆಂಟು ಇಪ್ಪತ್ತು ಅಡಿಗಳ ನಾಲ್ಕು ಗೋಡೆಗಳ ಆಯತಾಕಾರದ ಪೆಟ್ಟಿಗೆಯ ಹಾಗೆ. ಬಣ್ಣ ಕಳೆದುಕೊಂಡ ಹೊಸ್ತಿಲ ಒಳಗೆ ಕಾಲಿಟ್ಟರೆ ಅದೊಂದು ಎಂಟಡಿ ಚೌಕಾಕಾರದ ಕೋಣೆ. ಸತು ಕಳೆದುಕೊಂಡ ಸಿಮೆಂಟು ಹರಳುದುರಿಸದಂತೆ ವರ್ಷಕ್ಕೊಂದು ಬಾರಿ ಸುಣ್ಣ ಬಳಿದುಕೊಂಡಿರುತ್ತಿದ್ದ ಗೋಡೆಗಳು. ಎಂದೂ ಬಣ್ಣ ಬಳಿದುಕೊಂಡಿರದ ಬಾಗಿಲು ಕಿಟಕಿಗಳು. ಪತ್ರಿಕೆಯೊಂದರಿಂದ ಕತ್ತರಿಸಿ ಗೋಡೆಗಂಟಿಸಿದ ಭೀಮಸೇನ್ ಜೋಷಿ ಚಿತ್ರ, ಬಾಗಿಲ ಮೇಲೆ ತಂದೆ ದಿವಂಗತ ವಿರೂಪಾಕ್ಷ ಮೂರ್ತಿರಾಯರ ಪುಟ್ಟ ಫ್ರೇಮಿನ ಭಾವಚಿತ್ರ.

ಮೂಲೆಯಲ್ಲಿ ಸದಾ ತಂತಿ ಬಿಗಿದುಕೊಂಡು ನಾದಕ್ಕೆ ಸಿದ್ಧವಾಗಿ ನಿಂತಿರುತ್ತಿದ್ದ ತಂಬೂರಿ. ಹಳೆ ಬಟ್ಟೆಯ ಕರ್ಟನ್ನಿನಿಂದ ಮುಚ್ಚಲ್ಪಟ್ಟ ಎರಡು ಮಾಡುಗಳಲ್ಲಿ ಬೈಂಡ್ ಮಾಡಿದ ಐಕ್ಯರಂಗ ಪತ್ರಿಕೆಯ ಬೃಹತ್ ಹೊತ್ತಿಗೆಗಳು, ಎಸ್.ಎಫ್.ಐ, ಸಮುದಾಯಗಳ ಫೈಲುಗಳು, ಸ್ಟೂಡೆಂಟ್ ಸ್ಟ್ರಗಲ್, ವಿದ್ಯಾರ್ಥಿ ವೇದಿಕೆ, ಸಮುದಾಯ ವಾರ್ತಾಪತ್ರ, ಸಂಕ್ರಮಣ ಪತ್ರಿಕೆಗಳು, ಕಪಾಟಿನ ಮಧ್ಯದ ಹಲಗೆಯ ಮೇಲೆ ರೇಡಿಯೋ ಕಮ್ ಟೇಪ್ ರೆಕಾರ್ಡರ್, ಅದರ ಪಕ್ಕದಲ್ಲಿ ಹದಿನೈದಿಪ್ಪತ್ತು ಕ್ಯಾಸೆಟ್ಟುಗಳು, ಅದೇ ಹಲಗೆಯ ಕೆಳ ಮಧ್ಯಭಾಗದಲ್ಲಿ ಹಾಲು, ಮೊಸರಿನ ಪುಟ್ಟ ಪಾತ್ರೆಗಳು,

ಒಳ ಕೋಣೆಯ ಒಂದು ಮೂಲೆಯಲ್ಲಿ ಕಬ್ಬಿಣದ ತಂತಿಗಳ ಒಂದು ಪುಟ್ಟ ಸ್ಟ್ಯಾಂಡಿನ ತುಂಬ ಜೋಡಿಸಿದ ಪುಸ್ತಕಗಳು. ಅದೇ ಕೋಣೆಯ ಇನ್ನೊಂದು ಬದಿಗೆ ಒಂದು ಸೀಮೆ ಎಣ್ಣೆಯ ಸ್ಟೌ, ಹಳೆಯದಾದ ಕಟ್ಟಿಗೆಯ ಕಪಾಟಿನಲ್ಲಿ ಒಂದಿಷ್ಟು ಪಾತ್ರೆಗಳು, ಮೂಲೆಯ ಇನ್ನೊಂದು ಕೋಣೆಯೇ ಬಚ್ಚಲು ಮನೆ. ಒಂದೆಡೆ ಒಟ್ಟಿದ ಒಣ ಕಟ್ಟಿಗೆಗಳು, ಇನ್ನೊಂದೆಡೆ ಹೊಟ್ಟಿನ ಒಲೆ, ಸ್ನಾನಕ್ಕೆ ನೀರು ಕಾಯಿಸಲು.

ಇಂತಹದ್ದೊಂದು ಆ ಪುಟ್ಟ ಕೋಣೆ, ಹೂವಿನ ಹಡಗಲಿಯ ಎಡ ಚಳುವಳಿಗಳನ್ನು ದಶಕಗಳ ಕಾಲ ನಿರೂಪಿಸಿತು. ಸಾಂಸ್ಕೃತಿಕ ಪರಿಸರವನ್ನೂ ಪ್ರಭಾವಿಸಿತು. ಆ ಮನೆಯ ಮಾಲೀಕನೂ ಒಬ್ಬ ಬಡ ಬ್ರಾಹ್ಮಣ. ಆತನೂ ದೂರದಲ್ಲಿದ್ದ. ಮನೆಯಲ್ಲಿ ವಾಸಿಸುತ್ತಿದ್ದ ಬಾಡಿಗೆದಾರ ವಿಚಾರದಲ್ಲಿ ಕಮ್ಯುನಿಸ್ಟನಾಗಿದ್ದ, ವೃತ್ತಿಯಲ್ಲಿ ಎರಡನೇ ದರ್ಜೆಯ ಗುಮಾಸ್ತನಷ್ಟೇ. ಮನೆಯ ಎದಿರು ಕೇಶವ ದೇವಸ್ಥಾನ, ಮನೆಯ ಪಕ್ಕಕ್ಕೆ ಪಾತಾಳಲಿಂಗ ದೇವಸ್ಥಾನ. ಈ ಮನೆಯೋ ಊರು ಮಾತ್ರವಲ್ಲ, ಹೆಚ್ಚೂ ಕಡಿಮೆ ತಾಲೂಕು, ಜಿಲ್ಲೆಗಳ ವರ್ಗಹೋರಾಟಗಳ ಚರ್ಚೆಯ ತಾಣ. ಮನೆ ಮುಂದಿನ ದೇವಸ್ಥಾನದಲ್ಲಿ ಶಂಖ ಜಾಗಟೆಗಳ ಅಬ್ಬರದ ಪೂಜೆ ನಡೆಯುತ್ತಿದ್ದರೆ ಅದೇ ಹೊತ್ತಿನಲ್ಲಿ ಹೋರಾಟದ ಹಾಡುಗಳು ಸಮೂಹಧ್ವನಿಯಲ್ಲಿ ಸಿಡಿಯುತ್ತಿದ್ದವು. ಗುಡಿಯಲ್ಲಿ ಮಡಿಯಿಂದ ಪೂಜೆ ನಡೆಯುತ್ತಿದ್ದರೆ ಶೇಷಗಿರಿಯ ಮನೆಯ ಖಾಯಂ ಅತಿಥಿಯಾಗಿದ್ದ 'ಮುಸ್ಲಿಂ ಕಾಮ್ರೇಡ್' 'ಹೋಂಗೇ ಕಾಮಿಯಾಬ್' ಹಾಡುತ್ತಿದ್ದ.

ಶೇಷಗಿರಿರಾವ್, ಮೂಲತಃ ಬಳ್ಳಾರಿಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಗ್ರಾಮದವರು. ಕಾಲೇಜು ವಿದ್ಯಾಭ್ಯಾಸಕ್ಕೆಂದು ಹೊಸಪೇಟೆಯ ವಿಜಯನಗರ ಕಾಲೇಜು ಸೇರಿದ್ದರು. ಇವರು ಕಾಲೇಜು ಮೆಟ್ಟಿಲೇರುತ್ತಿದ್ದಂತೆಯೇ ಆಗಷ್ಟೇ ಬಂಗಾರದ ಪದಕದ ಕೀರ್ತಿಯ ಮೂಲಕ ಬಂದು ಸುಪ್ರಸಿದ್ಧರಾಗಿದ್ದ ಎಸ್.ಎಸ್. ಹಿರೇಮಠ ಇವರ ಉಪನ್ಯಾಸಕರು. ಆ ಐದು ವರ್ಷಗಳಲ್ಲಿ ಹಿರೇಮಠರು ಕಟ್ಟಿದ ಕಮ್ಯುನಿಸ್ಟ್ ವಿದ್ಯಾರ್ಥಿದಂಡಿನಲ್ಲಿ ಬೆಳೆದವರು ಶೇಷಗಿರಿ. ಇವರ ತಂದೆ ಶುದ್ಧ ಧಾರ್ಮಿಕರೂ, ಜನಾನುರಾಗಿ ಪ್ರಾಥಮಿಕ ಶಾಲಾ ಶಿಕ್ಷಕರೂ ಆಗಿದ್ದ ತಂದೆ

ವಿರೂಪಾಕ್ಷಮೂರ್ತಿರಾವ್ ಇನ್ನೂ ಸೇವೆಯಲ್ಲಿದ್ದಾಗಲೇ ಇದ್ದಕ್ಕಿದಂತೆ ನಿಧನರಾದ ಸುದ್ದಿ ಬಂದಾಗ ಶೇಷಗಿರಿ ಅಂತಿಮ ಬಿ.ಎ. ಪರೀಕ್ಷೆ ಬರೆಯುವುದೊಂದೇ ಬಾಕಿ ಇತ್ತು. ತಂದೆಯ ಅಂತ್ಯ ಸಂಸ್ಕಾರ ಮುಗಿಸಿ ಬಂದು ಪರೀಕ್ಷೆ ಬರೆದು ಪಾಸಾದರು. ಆದರೆ ಅನುಕಂಪದ ಆಧಾರದಲ್ಲಿ ನೌಕರಿ ಪಡೆಯುವಲ್ಲಿ ಬಿ.ಎ. ಪದವಿ ಸರಕಾರದ ಲೆಕ್ಕಕ್ಕೇ ಸಿಕ್ಕಲಿಲ್ಲ. ತಂದೆ ನಿಧನರಾದ ಹೊತ್ತಿನಲ್ಲಿನ್ನೂ ಅಂತಿಮ ಬಿ.ಎ. ಫಲಿತಾಂಶ ಬಂದಿರಲಿಲ್ಲವೆಂಬ ತಾಂತ್ರಿಕ ತೊಡಕಿನಿಂದ ಪಿ.ಯು.ಸಿ. ವಿದ್ಯಾರ್ಹತೆಯಷ್ಟೇ ಪರಿಗಣಿಸಿ ದ್ವಿತೀಯ ದರ್ಜೆ ಗುಮಾಸ್ತ ಹುದ್ದೆ ದೊರಕಿತು. ಒಂದೆರಡು ತಿಂಗಳ ವ್ಯತ್ಯಾಸದಿಂದ ಕೈ ತಪ್ಪಿದ್ದ ಪ್ರಥಮ ದರ್ಜೆ ಗುಮಾಸ್ತ ಹುದ್ದೆ ಪಡೆಯಲು ಆನಂತರ ಶೇಷಗಿರಿ ೨೨ ವರ್ಷ ಸವೆಸಬೇಕಾಯಿತು. ಹೀಗೆ, ಕಮ್ಯುನಿಸ್ಟ್ ಯುವಕನಾಗಿದ್ದ ಶೇಷಗಿರಿ ವೃತ್ತಿ ಜೀವನದ ಆರಂಭಕ್ಕೆಂದು ಬಂದು ಹೂವಿನ ಹಡಗಲಿ ಸೇರಿದ್ದರು. ಕೊನೆಗೆ ವೃತ್ತಿ ಪೂರ್ಣಗೊಳ್ಳುವ ಮೊದಲೇ ಹೂವಿನ ಹಡಗಲಿಯಲ್ಲಿಯೇ ತೀರಿದರು.

ಇವರು ಬಂದ ವರ್ಷೊಪ್ಪತ್ತಿನಲ್ಲಿ ಇವರ ಗುರುಗಳಾದ ಹಿರೇಮಠರೂ ಹಡಗಲಿ ಸೇರಬೇಕಾಯಿತು. ಹೊಸಪೇಟೆಯಲ್ಲಿ ಇವರ ಹೋರಾಟದ ಅಟಾಟೋಪ ಸಹಿಸದ ಊರು ಕಾಲೇಜುಗಳ ಆಡಳಿತ ವರ್ಗ ಉಪಟಳವಿಟ್ಟರೂ ತಳಮಳಗೊಳ್ಳದ ಹಿರೇಮಠನೆಂಬ ಉಪದ್ರವಿ ಉಪನ್ಯಾಸಕನನ್ನು ವರ್ಗಾವಣೆಯ ಶಿಕ್ಷೆ ನೀಡಬೇಕೆಂದು ಹೂವಿನಹಡಗಲಿಗೆ ಎತ್ತಿಹಾಕಿತ್ತು. ಆದರೆ ಹೂವಿನಹಡಗಲಿ ಹಿರೇಮಠರ ಪಾಲಿಗೆ ಮತ್ತೊಂದು ಅನುಭವದ ನೆಲೆಯಾಯಿತು. ಇಲ್ಲಿ ಅವರಿಗೆ ಶೇಷಗಿರಿ ಜೊತೆಯಾದರು. ಶೇಷಗಿರಿಯ ಪಾಲಿಗೆ ಸ್ವತಃ ಗುರುಗಳೇ ತಾವು ಬಂದ ಊರಲ್ಲಿ ದೊರೆತರು. ಗುರುಶಿಷ್ಯ ಜೋಡಿ ಮತ್ತೆ ಹೊಸ ಹುರುಪುನಿಂದ ಎಸ್.ಎಫ್.ಐ. ಸಮುದಾಯ ಗಳೆಂದು ಗುಂಪು ಕಟ್ಟಲಾರಂಭಿಸಿತು. ಸಭೆಗಳು ನಡೆಯತೊಡಗಿದವು. ಬಿಳಿ ಬಣ್ಣದ ಗೋಡೆಗಳು ಮೊದಲ ಬಾರಿಗೆ ಕೆಂಪು ಬಣ್ಣದ ಘೋಷಣೆ ಹೊತ್ತು ನಿಂತವು. ಆ ತನಕ ಯಾರೂ ಕೇಳಿರದಿದ್ದ ಹೋರಾಟದ ಹಾಡುಗಳನ್ನು ಜನ ಕೇಳತೊಡಗಿದರು. ಬೀದಿಯಲ್ಲಿ ಮೆರವಣಿಗೆ, ರಸ್ತೆಬದಿಗೆ ಭಾಷಣ ಶುರುವಾದವು. ಮೊದ ಮೊದಲಿಗೆ ಹೊಸದೆಂಬಂತೆ ಕುತೂಹಲದಿಂದ ಗಮನಿಸುತ್ತಿದ್ದ ಊರ ದೊಡ್ಡವರು ಈ ಹಿರೇಮಠ, ಶೇಷಗಿರಿಯರ ಹಿಂದಿನ ಹುಡುಗರ ಭಾಷಣ ಕೇಳಿದ ಬಳಿಕ ನಿದ್ದೆಯಲ್ಲಿದ್ದವರು ಧಿಗ್ಗನೆದ್ದಂತೆ ತಿರುಗಿಬಿದ್ದರು. ಊರು ಕೆಡಿಸಲು ಬಂದವರೆಂಬ ಬಿರುದನ್ನಿತ್ತರು.

ಆ ಕಾಲಕ್ಕೆ ಹೂವಿನಹಡಗಲಿ ಎಂ. ಪಿ. ಪ್ರಕಾಶರ ಭಾಷಣಗಳಿಗೂ, ಅವರ ತಂಡದ ನಾಟಕಗಳ ಹಾಡುಗಳಿಗೂ ಮನಸೋತು ಮೈ ಮರೆತಿತ್ತು. ಸಮಾಜವಾದಿ ಪ್ರಕಾಶರಿಗೆ ಮಾರ್ಕ್ಸ್‌ವಾದಿ ವಿಚಾರ ಮತ್ತದರ ಪರಿಣಾಮಗಳ ಬಗ್ಗೆ ಚೆನ್ನಾಗೇ ಗೊತ್ತಿತ್ತು. ಆಗಷ್ಟೇ ಪ್ರಕಾಶ್ ಜನತಾಪಕ್ಷದ ಸರಕಾರದ ಸಚಿವ ಸಂಪುಟದಲ್ಲಿದ್ದು ರಾಜ್ಯ ರಾಜಕಾರಣದಲ್ಲಿ ಜನಪ್ರಿಯರಾಗಿದ್ದರು. ಇದೇ ಹೊತ್ತಿನಲ್ಲಿ ಹಿರೇಮಠ ಶೇಷಗಿರಿಯವರೊಂದಿಗೆ ಶಿವಮೊಗ್ಗದಲ್ಲಿ ಬಿ. ಎ. ಪದವಿ ಪಡೆದು ಊರಿಗೆಂದು ಮರಳಿ ಬಂದಿದ್ದ ಯುವಕ ಪಿ. ಆರ್. ವೆಂಕಟೇಶ್ ಜೊತೆಗೂಡಿದ್ದರು. ಅಷ್ಟು ಮಾತ್ರವಲ್ಲ, ಕೊಮಾರ್‍ನಹಳ್ಳಿ ತಾಂಡ ಎಂಬಲ್ಲಿ ಲಂಬಾಣಿ ಕೃಷಿ ಕೂಲಿಕಾರರನ್ನು ಸಂಘಟಿಸಿ ಭೂ ಹೋರಾಟ ಶುರು ಮಾಡಿದ್ದರು. ಈ ಹೋರಾಟದ ತೀವ್ರತೆ ಎಷ್ಟಿತ್ತೆಂದರೆ ಮಹಿಳೆಯರೂ ಸೇರಿದಂತೆ ಗ್ರಾಮದ ನೂರಾರು ಜನ ತಿಂಗಳುಗಳ ಕಾಲ ಬಳ್ಳಾರಿಯ ಕೇಂದ್ರ ಕಾರಾಗೃಹ ಸೇರಿದ್ದರು. ಲಂಕೇಶ್ ಪತ್ರಿಕೆ ಹೋರಾಟ ಕುರಿತಂತೆ ಪ್ರಮುಖ ಲೇಖನ ಬರೆದ ಪರಿಣಾಮವಾಗಿ ಎಂ. ಪಿ. ಪ್ರಕಾಶ್ ತಮ್ಮ ಸ್ವ ಕ್ಷೇತ್ರದಲ್ಲಿಯೇ ನಡೆಯುತ್ತಿದ್ದ ಈ ಹೋರಾಟದ ಬಗ್ಗೆ ವಿಧಾನ ಸಭೆಯಲ್ಲಿ ಉತ್ತರಿಸ ಬೇಕಾಗಿ ಬಂದಿತ್ತು. ಈ ಕಮ್ಯುನಿಸ್ಟ್ ಹೋರಾಟದ 'ಕೇಂದ್ರ'ವಾಗಿದ್ದ ಹಿರೇಮಠ, ವೆಂಕಟೇಶ್, ಅವರನ್ನೊಳಗೊಂಡ ಮೂವರಲ್ಲಿ ಶೇಷಗಿರಿಯೂ ಒಬ್ಬರಾಗಿದ್ದರು. ಹುದ್ದೆಯಲ್ಲಿ ಅವರು ಒಬ್ಬ ಸಾಧಾರಣ ಸರಕಾರಿ ನೌಕರ ಮಾತ್ರವಾಗಿದ್ದರು.

ಇದೇ ಕಾಲಕ್ಕೆ ಹಿರೇಮಠರು 'ಹರಿಜನ' ಕೇರಿಗೆ ಹೋಗಿ ಅಲ್ಲಿನ ಭಜನಾ ತಂಡದ ಹುಡುಗರನ್ನು ಕೂಡಿಸಿ ಹೋರಾಟದ ಹಾಡುಗಳನ್ನು ಕಲಿಸತೊಡಗಿದ್ದರು. ಹಾಸ್ಟೆಲ್ ಹುಡುಗರನ್ನು ಕೂಡಿಸಿ ಎಸ್.ಎಫ್.ಐ. ಘಟಕವನ್ನೂ ಕೇರಿಯಲ್ಲಿ ದಲಿತ ಸಂಘರ್ಷ ಸಮಿತಿಯ ಘಟಕವನ್ನೂ ಊರಿನಲ್ಲಿ ಸರಕಾರಿ ನೌಕರರ ನಡುವೆ ಸಮುದಾಯ ಘಟಕವನ್ನೂ ಕಟ್ಟಿದ್ದರು. ಹೋರಾಟದ ಸಂಘಟನೆಗಳ ಹುಮ್ಮಸ್ಸು ಹೆಚ್ಚಾಗಿ ಅಸ್ಪೃಶ್ಯತೆಯನ್ನು ವಿರೋಧಿಸಲೆಂದು 'ಹರಿಜನ'ರ ಮೆರವಣಿಗೆ ಹೊರಟಿತು. ಚಿಕ್ಕ ಹೋಟೆಲ್‌ಗಳಲ್ಲಿದ್ದ ಪ್ರತ್ಯೇಕ ಕಪ್ಪುಗಳನ್ನು ತೆಗೆದು ಬಿಸಾಡಲಾಯ್ತು. ಊರಲ್ಲಿ ದೊಡ್ಡಜಾತಿಯ ಮುಖಂಡರ ಕಣ್ಣು ಕೆಂಪಾದವು. ಇದೇ ಹೊತ್ತಿಗೆ ಸರಿಯಾಗಿ ಊರ ದೇವಸ್ಥಾನದ ಮೇಲೆ ಈ ಹೋರಾಟಗಾರರ ಗುಂಪು ದೇವರ ವಿರುದ್ಧ ಘೋಷಣೆ ಬರೆದಿರುವುದಲ್ಲದೇ, ಊರ ದೈವಕ್ಕೂ ಅಪಚಾರ ಮಾಡಿದ ಪುಕಾರು ಉಳ್ಳವರ ಬೀದಿಗಳಲ್ಲಿ ಹಬ್ಬಿಸಲಾಯಿತು. ಈ ಕುರಿತಂತೆ ವಿಚಾರಣೆಗೆಂದು ಕರೆಸಿ, ತಹಸೀಲ್ದಾರ್, ಇನ್‌ಸ್ಪೆಕ್ಟರರ ಸಮ್ಮುಖದಲ್ಲೇ 'ಜಾತಿ ಕೆಡಿಸುವ ತಲೆ ಹೊಯ್ಕ'ನೆಂಬ ಆರೋಪ ಹೊತ್ತಿದ್ದ ಹಿರೇಮಠರಿಗೆ 'ಪೆಟ್ಟು' ನೀಡಲಾಯಿತು. ಊರು ನಿಗಿ ನಿಗಿ ಉರಿಯತೊಡಗಿದಂತೆಲ್ಲ ಹೊಟ್ಟೆಪಾಡಿಗೆಂದು ಪುಟ್ಟ ಸರಕಾರಿ ನೌಕರಿಯನ್ನು ಅವಲಂಬಿಸಿ ದೊಡ್ಡ ಕುಟುಂಬದ ಜವಾಬ್ದಾರಿಯನ್ನು ಹೊತ್ತಿದ್ದ ಯುವಕ ಶೇಷಗಿರಿಯವರ ಮನಸ್ಸಿನಲ್ಲಿ ತಲ್ಲಣ ಮನೆ ಮಾಡಿತ್ತು. ಕೊನೆಗೆ ಕ್ರಾಂತಿಕಾರಿ ಗುರು ಹಿರೇಮಠರಿಗೆ ಮತ್ತೊಮ್ಮೆ ಶಿಕ್ಷಾರ್ಹ ವರ್ಗಾವಣೆಯಾದ ಬಳಿಕ ಹೂವಿನಹಡಗಲಿ ಶೇಷಗಿರಿಯವರ ಪಾಲಿನ ಸಾಮಾಜಿಕ ಪ್ರಯೋಗಶಾಲೆಯಾಗಿ ಪರಿಣಮಿಸಿತು.

## ಸಾದರ ಸ್ವೀಕಾರ

**ನುಡಿಮಿಂಚು** ಅನು : ಕೆ. ಎಸ್. ಪಾರ್ಥಸಾರಥಿ
**ಪುಟ : ೬೪** **ಬೆಲೆ : ರೂ. ೫೦**

**ಫ್ರಾನ್ಸ್‌ನಲ್ಲಿ ಅಂತರ್ಯುದ್ಧ** ಅನು : ವಿಶ್ವ ಕುಂದಾಪುರ
**ಪುಟ : ೧೦೮** **ಬೆಲೆ : ರೂ. ೧೦೦**

**ತತ್ತ್ವಶಾಸ್ತ್ರದ ದಾರಿದ್ರ್ಯ** ಅನು : ಕೆ. ಪಿ. ವಾಸುದೇವನ್
**ಪುಟ : ೨೦೮** **ಬೆಲೆ : ರೂ. ೨೦೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ನೀರು ತಂದವರು** (ನಾಟಕ) ಡಾ॥ ಪ್ರಸಾದಸ್ವಾಮಿ ಎಸ್.
**ಪುಟ : xviii+ ೬೨ = ೮೦** **ಬೆಲೆ : ರೂ. ೬೦**
**ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿ.,** ನಂ. ೭೭೭, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು – ೪೦

**ಯುರೋಪ್ ಕಥನ** ಡಾ॥ ಅಶೋಕ ನರೋಡೆ
**ಪುಟ : xvi+ ೪೪೦=೪೫೬** **ಬೆಲೆ : ರೂ. ೪೦೦**
**ನಿವೇದಿತ ಪ್ರಕಾಶನ,** ನಂ. ೩೪೩೭, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ, ೨ನೇ ಹಂತ, ಬೆಂಗಳೂರು–೫೬೦೦೨೮

**ಚಿಟ್ಟೆ** (ಕವಿತೆಗಳು) ನಭಾ ಒಕ್ಕುಂದ
**ಪುಟ : ೧೬+೪೬** **ಬೆಲೆ : ರೂ. ೬೦**
**ಚಿಲಿಪಿಲಿ ಪ್ರಕಾಶನ,** ೪ನೇ ಕ್ರಾಸ್, ಶಿವಾನಂದ ನಗರ, ಧಾರವಾಡ–೫೮೦ ೦೦೧

**ಕ್ಷಮಿಸು ಹೆಣ್ಣೆ ಕ್ಷಮಿಸು** ಸಿ.ಪಿ.ಕೆ.
**ಪುಟ : ೮೦** **ಬೆಲೆ : ರೂ. ೫೦**
**ಚಿತ್ರಭಾನು ಪ್ರಕಾಶನ,** ೨೨೬೫/೧೯, 'ಭಾರತಿ', ೬ನೇ ಕ್ರಾಸ್, ವಿನಾಯಕನಗರ, ಮೈಸೂರು – ೫೭೦ ೦೧೨

**ತೊದಲ್ನುಡಿ**(ಕವನ ಸಂಕಲನ)ಆರ್. ಫಾಲಾಕ್ಷ ಹಾಗಲವಾಡಿ
**ಪುಟ : ೬೮+೧೨=೮೦** **ಬೆಲೆ : ರೂ. ೭೫**
**ನೃಪ ಪಕಾಶನ,** ಹಾಗಲವಾಡಿ, ಗುಬ್ಬಿ ತಾಲ್ಲೂಕು

**ತ್ಯಾಗಿ** (ಕವನ ಸಂಕಲನ) ಎಂ. ವಿ. ನಂಜಪ್ಪ
**ಪುಟ : xxii+ ೫೨=೭೪** **ಬೆಲೆ : ರೂ. ೬೦**
**ಶ್ರೀ ವೆಂಕಟಾದ್ರಿ ಪ್ರಕಾಶನ,** ನಂ. ೯೩೬, ೧೫ನೇ ಅಡ್ಡರಸ್ತೆ, ಗಂಗೋತ್ರಿ ನಗರ, ತುಮಕೂರು – ೫೭೨೧೦೨

**ಕತೆಯಲ್ಲದ ಕತೆ** ಸುನಂದಾ ಪ್ರಕಾಶ ಕಡಮೆ
**ಪುಟ : ೧೨೦+iv= ೧೨೪** **ಬೆಲೆ : ರೂ. ೧೦೦**
**ಅಪರಂಜಿ ಪ್ರಕಾಶನ,** ಅಪರಂಜಿ ನಿಲಯ, ನರಿಗುಡ್ಡೇನಹಳ್ಳಿ, ಕಲ್ಯಾಣ ನಗರ, ಜ್ಯೋತಿನಗರ ಪೋಸ್ಟ್, ಚಿಕ್ಕಮಗಳೂರು – ೫೭೭ ೧೦೨

**ಸವೆಯದ ದಾರಿ** ಆತ್ಮ ವೃತ್ತಾಂತ
ಡಾ॥ ರಮಾನಂದ ಬನಾರಿ
**ಪುಟ : ೧೪+೨೪+೨೮೮+೮=೩೨೪** **ಬೆಲೆ : ರೂ. ೨೫೦**
**ತಾರಾ ಪ್ರಿಂಟ್ಸ್,** ೧೮೫/೨೮೫/ಎಫ್೬, ೫ನೇ ವೆಸ್ಟ್ ಕ್ರಾಸ್, ಮೈಸೂರು – ೫೭೦ ೦೦೪

**ದಲಿತತತ್ವ** ಅನು: ಬಿ. ಸುಜ್ಞಾನಮೂರ್ತಿ
**ಪುಟ : xx+೧೨೦** **ಬೆಲೆ : ರೂ. ೬೦**

**ಲಿಂಗಾಯತರು ಹಿಂದೂಗಳಲ್ಲ**
ಮತ್ತು ಇತರ ಲೇಖನಗಳು ಡಾ॥ ಎನ್. ಜಿ. ಮಹಾದೇವಪ್ಪ
**ಪುಟ : ೧೦೪** **ಬೆಲೆ : ರೂ. ೮೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ಪ್ರಸಾದ್ ಹಾಸ್ಟೆಲ್ ಗದಗ – ೫೮೨೧೦೧

ಮೇಲ್ಜಾತಿಗಳು ಆರ್ಥಿಕವಾಗಿಯೂ ಅಧಿಕಾರದಲ್ಲಿಯೂ ಬಲಿಷ್ಠವಾಗಿವೆ ಎಂಬುದನ್ನು ಶೇಷಗಿರಿ ಅನುಭವದಿಂದಲೇ ಕಂಡುಕೊಂಡಿದ್ದರು. ದಲಿತ ಸಂಘಟನೆಗಳ ಯುವಕ ಕಾರ್ಯಕರ್ತರೊಟ್ಟಿಗೆ ಸಂಬಂಧವನ್ನಿಟ್ಟುಕೊಂಡರು. ಆದರೆ ಸಂಘಟಿಸುವ ಹೊಣೆಯನ್ನು ಅವರಿಗೇ ಬಿಟ್ಟುಕೊಟ್ಟರು. ಕೊಮಾರ್ನಹಳ್ಳಿ ತಾಂಡಾದ ಹೋರಾಟದ ಬಳಿಕ ಕರ್ನಾಟಕ ಪ್ರಾಂತ ರೈತ ಸಂಘದ ಕ್ರಿಯಾಶೀಲತೆ ಚಿಕ್ಕಚಿಕ್ಕ ಹೋರಾಟಗಳಿಗಷ್ಟೇ ಸೀಮಿತವಾಯಿತು. ಆ ಹೊತ್ತು ಇವರೊಂದಿಗೆ ಚಂದ್ರಶೇಖರ್ ಬೆನ್ನೂರು ಜೊತೆಯಾದರು. ಸಮುದಾಯ, ಎಸ್.ಎಫ್.ಐ. ಚಟುವಟಿಕೆಗಳು ಊರಿನ ಮಧ್ಯಮವರ್ಗದ ಕೆಲವೇ ಯುವಕ ನೌಕರರ ನಡುವೆ ಚಿಂತನ ಸಭೆ, ವಿಚಾರಸಂಕಿರಣಗಳ ಮೂಲಕ ಅಸ್ತಿತ್ವವನ್ನು ಉಳಿಸಿಕೊಂಡವು.

ಶೇಷಗಿರಿರಾವ್ ವಿದ್ಯಾರ್ಥಿಯಾಗಿದ್ದಾಗಲೇ ಸಮುದಾಯದ ಜಾಥಾದಲ್ಲಿ ಭಾಗವಹಿಸಿ ಬೆಲ್ಚಿ, ಪತ್ರೆ ಸಂಗಪ್ಪನ ಕೊಲೆ ಮೊದಲಾದ ನಾಟಕಗಳಲ್ಲಿ ಪಾತ್ರ ಮಾಡಿದ್ದರು. ನಾಟಕ ಹಾಡುಗಳ ಆಸಕ್ತಿ ಈ ಮೂಲಕ ಕೊನೆಯವರೆಗೂ ಅವರಲ್ಲಿ ಉಳಿದುಕೊಂಡಿತು. ಹೂವಿನಹಡಗಲಿಯಲ್ಲಿ ಸಮುದಾಯದ ತಂಡಗಳನ್ನು ಕರೆಯಿಸಿ 'ಅಲ್ಲಮನ ಅದ್ಭುತ ನ್ಯಾಯ', 'ಸತಿಯೊಡನೆ ಸಹಗಮನ' ಮುಂತಾದ ನಾಟಕಗಳನ್ನು ಆಡಿಸಿದ್ದರು. ಆ ಬಳಿಕ ಸಾಂಸ್ಕೃತಿಕ ವಾತಾವರಣದ ನಿರ್ಮಾಣಕ್ಕೆಂದು ಆಸಕ್ತರನ್ನು ಕೂಡಿಸಿ ವಾರದ 'ಚಿಂತನೆ'ಸಭೆಗಳನ್ನು ಸಂಘಟಿಸಿದರು. ಈ ಮೂಲಕ ವಿದ್ಯಾರ್ಥಿ ಚಳುವಳಿಯ ಸಂಘಟನೆಗೆ ಹೊಸ ತಲೆಮಾರೊಂದು ದೊರಕಿತು. ಈ ಚಿಂತನ ಸಭೆಗಳು ವೈಚಾರಿಕವಾದ ಸಾಹಿತ್ಯಕ ಪರಿಸರದ ಸೃಷ್ಟಿಗೆ ಕಾರಣವಾದವು. ೧೯೮೪ರಿಂದ ಹೂವಿನಹಡಗಲಿಯಲ್ಲಿ ಜನ ಸಂಘಟನೆಗಳಲ್ಲಿ ತೊಡಗಿಸಿಕೊಂಡ ಶೇಷಗಿರಿಯವರ ಪ್ರಯತ್ನಗಳು ೧೯೯೨ರ ಬಳಿಕ ಹೊಸ ಸ್ವರೂಪವನ್ನು ಪಡೆದುಕೊಂಡವು.

ಶೇಷಗಿರಿ ಸೈದ್ಧಾಂತಿಕವಾಗಿ ಮಾರ್ಕ್ಸ್‌ವಾದಿಯೇ ಆಗಿದ್ದರೂ ಅವರ ಬದುಕಿನ ಮಿತಿಗಳು ಅವರನ್ನು ವರ್ಗಸಂಘರ್ಷಕ್ಕೆ ತೆರೆದುಕೊಳ್ಳುವುದನ್ನು ನಿಯಂತ್ರಿಸಿದವು. ಕುಟುಂಬದಲ್ಲಿ ತಾಯಿ, ಪತ್ನಿ ಇವರೊಂದಿಗೆ ನಾಲ್ವರು ಕಿರಿಯ ಸಹೋದರರು ಒಬ್ಬ ಸಹೋದರಿಯನ್ನು ಸಲಹುವ ಜವಾಬ್ದಾರಿ ಚಿಕ್ಕ ಸಂಬಳದ ಶೇಷಗಿರಿಯವರದಾಗಿತ್ತು. ತಾವಾಗಿಯೇ ಯಾವ ಸಂಘಟನೆಯಲ್ಲಿಯೂ ಪ್ರಧಾನ ಜವಾಬ್ದಾರಿ ನಿರ್ವಹಿಸದೇ ಹೋದರೂ ಇಡೀ ಕುಟುಂಬವನ್ನೇ ಮಾರ್ಕ್ಸ್‌ವಾದಿ ಚಿಂತನೆ ಮತ್ತು ಸಂಘಟನಾ ಸಂಬಂಧಕ್ಕೆ ಪರಿವರ್ತಿಸಿದರು. ಹಾಗೆ ನೋಡಿದರೆ ಇವರ ಬಡತನದ ಅನುಭವವೇ ಇವರನ್ನು ಬಡತನವನ್ನು ವಿರೋಧಿಸುವ ಮತ್ತು ಬಡವರನ್ನು ಪ್ರೀತಿಸುವ ಸಿದ್ಧಾಂತಕ್ಕೆ ಬದ್ಧತೆ ಮೂಡಿಸುವಲ್ಲಿ ಪ್ರಧಾನಪಾತ್ರ ವಹಿಸಿತ್ತು. ಸೈದ್ಧಾಂತಿಕ ನೆಲೆಯಲ್ಲಷ್ಟೇ ಮಾರ್ಕ್ಸ್ ಮುಖ್ಯವಾಗಿದ್ದರೂ ಆಚರಣಾತ್ಮಕವಾಗಿ ಗಾಂಧಿ ಇವರ ಹೃದಯವನ್ನು ಆವರಿಸಿಕೊಂಡಂತಿತ್ತು. 'ಮನುಷ್ಯತ್ವಕ್ಕಿಂತ ದೊಡ್ಡದು ಯಾವ ಸಿದ್ಧಾಂತವೂ ಇಲ್ಲ' ಎನ್ನುವ ಹಂತದಲ್ಲಿ ಶೇಷಗಿರಿ ಒಬ್ಬ ಉದಾರ ಮಾನವತಾವಾದಿಯಾಗಿ ಪರಿವರ್ತಿತರಾಗಿದ್ದರು. ವರ್ಗ ಚಳುವಳಿಯ ಸಂಪರ್ಕದಲ್ಲಿದ್ದ ದಿನಗಳಲ್ಲಿ ಹುಟ್ಟಿದ ಮಗಳಿಗೆ 'ಸಮತಾ' ಎಂದು ಹೆಸರಿಟ್ಟಿದ್ದ ಇವರು ದೇಶದಲ್ಲಿ ಕೋಮು ಸಂಘರ್ಷ ಜಾರಿಯಲ್ಲಿದ್ದ ಸಂದರ್ಭದಲ್ಲಿ ಹುಟ್ಟಿದ ಮಗಳಿಗೆ 'ಮಮತಾ' ಎಂದು ಹೆಸರಿಟ್ಟರು.

ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಸೈದ್ಧಾಂತಿಕ ವಲಯದಲ್ಲಿದ್ದು 'ಸಮುದಾಯ' ಸಂಘಟನೆಯ ಜವಾಬ್ದಾರಿ ಹೊತ್ತಿದ್ದ ಸಂದರ್ಭದಲ್ಲಿ ಸರಕಾರಿ ನೌಕರರ ಸಂಘದ ತಾಲೂಕು ಕಾರ್ಯದರ್ಶಿಯಾಗಿ, ಉಚಿತ ನೇತ್ರ ಚಿಕಿತ್ಸಾ ಶಿಬಿರವನ್ನು ಸಂಘಟಿಸಿದರು. ದೇಶ ರಾಜ್ಯದಲ್ಲಿ ರಥಯಾತ್ರೆ, ಮಂದಿರ ಮಸೀದಿ ವಿವಾದ ಕಾವೇರಿದ ಹೊತ್ತಿನಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೂಲಕ ಪರಿಸರ ಶಿಬಿರಗಳನ್ನು ಸಂಘಟಿಸಿ ಸಾಮೂಹಿಕವಾಗಿ ಗಿಡ ನೆಡುವ




ಎಲೆಗೆ ರೂ.500 ರಂತೇ ಯಜಮಾನ ಕೊಟ್ಟು ಹೋಗಿದ್ದಾನಂತೆ! ಹಾಗಾಗಿ ಸ್ವಲ್ಪವೂ ವ್ಯರ್ಥ ಮಾಡದೇ ನಾವಾದ್ರೂ ತಿಂದು ಮುಗಿಸೋಣ!

ಕಾರ್ಯಕ್ರಮಗಳನ್ನು ನಡೆಸಿದರು. ಬಾಬರೀ ಮಸೀದಿ ಪತನದ ಬಳಿಕ ಕೋಮು ಗಲಭೆಗಳು ನಡೆಯುತ್ತಿದ್ದ ಕಾಲಕ್ಕೆ ಜ್ಞಾನ ವಿಜ್ಞಾನ ಜಾಥಾ ನಡೆಸಿ ಸಾಕ್ಷರತೆಯ ಪ್ರಚಾರ ಮಾಡಿದರು. ಮುಂದುವರಿದ ಹಂತದಲ್ಲಿ ಸರಕಾರವೇ ಮುಂದಾಗಿ ಸಾಕ್ಷರತಾ ಆಂದೋಲನವನ್ನು ರೂಪಿಸಿದಾಗ ಇವರು ಈ ಆಂದೋಲನದಲ್ಲಿ ಜಿಲ್ಲಾ ಸಂಪನ್ಮೂಲ ವ್ಯಕ್ತಿಯಾಗಿ ಅದೆಷ್ಟು ಸಂಭ್ರಮಿಸಿದರೆಂದರೆ, ಇದೊಂದು ಬದುಕಿನ ಸಾರ್ಥಕತೆಯ ಅವಕಾಶ ಎಂಬಂತಹ ರೋಮಾಂಚನ ಅವರಲ್ಲಿ ಸ್ಥಾಯಿಯಾಗಿತ್ತು.

ಶೇಷಗಿರಿರಾವ್ ಹವಲ್ದಾರ್, ಹಾಗೆಂದು ಕೋಮುವಾದವನ್ನು ವಿರೋಧಿಸುವಲ್ಲಿ ಬೆನ್ನು ತಿರುಗಿಸಿರಲಿಲ್ಲ. ಆದರೆ ಅವರ ಪ್ರತಿರೋಧದ ಮಾದರಿ ಬೇರೆಯೇ ಆಗಿತ್ತು. ಸೌಹಾರ್ದ ಪರಂಪರೆ ಕುರಿತು ವಿಚಾರ ಸಂಕಿರಣಗಳನ್ನು ಆಯೋಜಿಸಿದರು. 'ಭಾವೈಕ್ಯ'ದ ಹೆಸರಿನಲ್ಲಿ ಕವನ ಸಂಕಲನವನ್ನು ಪ್ರಕಟಿಸಿದರು. 'ಮಲ್ಲಿಗೆ ಪ್ರಕಾಶನ' ಎಂಬ ಪುಟ್ಟ ವೇದಿಕೆಯ ಮೂಲಕ ತಾವು ಬದುಕುತ್ತಿದ್ದ ಪರಿಸರದ ಯುವ ಕವಿಗಳನ್ನು ಕೂಡಿಸಿ ವಿಚಾರ ಸಂಕಿರಣ, ಕವಿಗೋಷ್ಠಿಗಳ ಹೆಸರಿನಲ್ಲಿ ಜೀವಪರ ಸಂವಾದ ನಿರಂತರ ಜಾಗೃತವಾಗಿಡಲು ತೊಡಗಿಸಿಕೊಂಡರು. ಶೇಷಗಿರಿ, ಹೂವಿನ ಹಡಗಲಿ ಪಟ್ಟಣದ ಪುಟ್ಟ ಭೌಗೋಳಿಕ ಚೌಕಟ್ಟಿನಲ್ಲಿ ಸ್ವಯಂ ಬಂಧಿಸಿಕೊಂಡಂತಿದ್ದು ಜಿಲ್ಲೆಯ ಪ್ರಗತಿಪರ ಸಾಹಿತಿ ಮಿತ್ರರೊಂದಿಗೆ ಸಂಪರ್ಕವನ್ನಿರಿಸಿಕೊಂಡು ನಿರಂತರ ನಲಿದರು. ವೈಯಕ್ತಿಕ ಮಹತ್ವಾಕಾಂಕ್ಷಿಯಾಗಿರದೇ, ಸಾಹಿತ್ಯಕವಾಗಿಯೂ 'ಶ್ರೇಷ್ಠತೆ'ಯನ್ನು ಬಳಿ ಸುಳಿಯಗೊಡದೇ ಸರಳ ಕವಿತೆ ಬರೆದರು. ವಾಚಿಸಿದರು. ಪುಟ್ಟಪುಟ್ಟ ಪುಸ್ತಕಗಳನ್ನು ಕಿರಿಯ ಮಿತ್ರರೊಡಗೂಡಿ ಪ್ರಕಟಿಸಿ ಹಂಚಿದರು.

ಸದಾ ಸರಳ, ಸಭ್ಯತೆಯ ಸಾಕಾರ ಮೂರ್ತಿಯಂತಿದ್ದ ಶೇಷಗಿರಿಯವರಿಗೆ ಕೂಡಿದ ಸಕ್ಕರೆ ಕಾಯಿಲೆ ಅವರ ಮೂತ್ರಪಿಂಡಗಳನ್ನು ಹಾನಿಗೊಳಿಸುವಷ್ಟು ಕಾಡಿತು. ಇವರ ವೈವಾಹಿಕ ಬಾಳಿನ ಆರಂಭದಿಂದಲೂ ಹೋರಾಟದ ಹಾಡುಗಳಿಗೂ ಧ್ವನಿಯಾಗಿದ್ದ, ಶಾಸ್ತ್ರೀಯ ಸಂಗೀತದ ವಿದ್ವತ್ತನ್ನು ಹೊಂದಿದ ಇವರ ನೈಜ ಸಂಗಾತಿ ಕಲಾವತಿ ತಮ್ಮ ದೇಹದ ಅಂಗವನ್ನೇ ತಮ್ಮ ಪತಿಗೆ ತೊಡಿಸಿ ಮರುಜನ್ಮ ನೀಡಿದರು. ಪತ್ನಿ ನೀಡಿದ 'ಜೀವದಾನ'ದ ಪ್ರೇಮದ ಕೊಡುಗೆಯನ್ನು ತಮ್ಮ ಒಡಲೊಳಗಿಟ್ಟುಕೊಂಡು ಅಷ್ಟೇ ನಾಜೂಕಾಗಿ, ಕೆಡದಂತೆ ಕಾಪಾಡಿಕೊಂಡರು. ಆದರೆ ಸೋಲೊಪ್ಪದ ಸಾವು ಅವರ ಹೃದಯದ ಮೇಲೆ ಆಘಾತಕೊಟ್ಟು ಜೀವವನ್ನು ಕಸಿಯಿತು. ಕಸಿ ಮಾಡಿದ ಕಿಡ್ನಿ ಕೆಡದಂತೆ ಉಳಿದಿತ್ತು. ೨೦೧೭ರ ಏಪ್ರಿಲ್ ೫ನೇ ತಾರೀಖು ಅವರ ಜೀವಿತದ ಕೊನೆಯ ದಿನವಾಗಿತ್ತು.

ಬಾಳಿನುದ್ದಕ್ಕೂ ಪರೋಪಕಾರಿಯಾಗಿದ್ದ ಶೇಷಗಿರಿ ಸಾಯುವ ಮೊದಲೇ ತಮ್ಮ ಕಣ್ಣುಗಳನ್ನು ದಾನ ಮಾಡುವ ಕರಾರಿಗೆ ಸಹಿ ಮಾಡಿಟ್ಟಿದ್ದರು. ಶುದ್ಧ ಲೌಕಿಕರೂ ಆಗಿದ್ದ ಇವರು ತಮ್ಮ ದೇಹವನ್ನೂ ಚಿತೆಗಿಟ್ಟು ಉರಿಸಲು ಬಿಡದೇ ವೈದ್ಯಕೀಯ ವಿದ್ಯಾರ್ಥಿಗಳ ಅಧ್ಯಯನಕ್ಕೆ ಬಳಕೆಯಾಗಲಿ ಎಂದು ಬಯಸಿದರು. ಅಂತೆಯೇ ಅವರ ಬಯಕೆಗಳು ಈಡೇರಿದವು ಕೂಡ. ಶೇಷಗಿರಿರಾವ್ ಹವಲ್ದಾರ್, ಸದಾ ಮಾನವೀಯ ಮೌಲ್ಯಗಳಿಗೆ ಮಿಡಿಯುವ ಒಬ್ಬ ಶ್ರೀಸಾಮಾನ್ಯ. ಲೋಕದ ಒಳಿತಿನ ಬಗ್ಗೆ ಚಿಂತಿಸಿದರು. ಅದಕ್ಕಾಗಿ ತಮ್ಮ ಬಾಳುವೆಯ ಪರಿಸರದಲ್ಲಿ ದುಡಿದರು. ಬಾಳಿನುದ್ದಕ್ಕೂ ಸಾಮಾಜಿಕ ಪ್ರಯೋಗಗಳೆಂಬಂತೆ ಪುಟ್ಟ ಪಟ್ಟಣವನ್ನು ಪ್ರಯೋಗ ಶಾಲೆಯಾಗಿಸಿದರು. ಕೊನೆಗೆ ತಮ್ಮ ದೇಹವನ್ನೂ ವೈದ್ಯಕೀಯ ವಿದ್ಯಾರ್ಥಿಗಳ ಪ್ರಯೋಗಕ್ಕೆ ನೀಡಿದರು. ನಡೆದಷ್ಟೇ ನುಡಿದರು. ನುಡಿದಷ್ಟೂ ನಡೆದರು.

**ಬಿ. ಪೀರ್ ಬಾಷ**
ಜೆ. ಪಿ. ನಗರ, ಕಾರಟಗಿ ಪೋಸ್ಟ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ – ೫೮೩೨೨೯

# ಎರಡು ಶೃಂಗ ಸಭೆಗಳು – ವಿಭಿನ್ನ ಫಲಿತಾಂಶಗಳು



**೨೦೧೮ರ** ಏಪ್ರಿಲ್ ತಿಂಗಳ ಅಂತ್ಯದಲ್ಲಿ ಏಶಿಯಾ ಖಂಡದಲ್ಲಿ ಎರಡು ಮುಖ್ಯವಾದ ಶೃಂಗಸಭೆಗಳು ಜರುಗಿದವು. ಒಂದು ಔಪಚಾರಿಕ, ನಿಶ್ಚಿತ. ಇನ್ನೊಂದು ಅನೌಪಚಾರಿಕ, ಅನಿಶ್ಚಿತ. ಒಂದು ಹೊಸ ಇತಿಹಾಸಕ್ಕೆ ನಾಂದಿಯಾದರೆ, ಇನ್ನೊಂದು ಎರಡು ಭಿನ್ನ ಮಿತ್ರರಾಷ್ಟ್ರಗಳು ಸಮಸ್ಯೆ ಬಗೆಹರಿಸುವ ಕುರಿತಾಗಿತ್ತು. ರಾಷ್ಟ್ರಗಳ ಅಧಿಪತಿಗಳು ಗಂಭೀರ ವಿಷಯಗಳ ಕುರಿತು ನಡೆಸುವ ಮಾತುಕತೆಗಳೇ ಶೃಂಗ ಸಭೆ. ಎರಡನೇ ಮಹಾಯುದ್ಧ ಕಾಲದಲ್ಲಿ ಪ್ರಯೋಗಕ್ಕೆ ಬಂದ ನುಡಿಕಟ್ಟು ಇದು. ಶೀತಯುದ್ಧ ಕಾಲದಲ್ಲಿ ಹೆಚ್ಚು ಬಳಕೆಯಲ್ಲಿತ್ತು. ಉತ್ತರ ಕೊರಿಯಾದ ಸರ್ವಾಧಿಕಾರಿ ಕಿಮ್ ಜೋಂಗ್–ಉನ್ ಮತ್ತು ದಕ್ಷಿಣ ಕೊರಿಯಾದ ಅಧ್ಯಕ್ಷ ಮೂನ್ ಜೇ–ಇನ್ ನಡೆಸಿದ ಮಾತುಕತೆಗಳು ಅತ್ಯಂತ ಮಹತ್ವಪೂರ್ಣದ್ದಾಗಿತ್ತು. ಹೆಚ್ಚು ಕಡಿಮೆ ಏಳು ದಶಕಗಳ ದ್ವೇಷವನ್ನು ಅಂತ್ಯಗೊಳಿಸುವ ದಿಶೆಯಲ್ಲಿ ಇರಿಸಿದ ಮೊದಲ ಹೆಜ್ಜೆ ಅದು. ಇದಕ್ಕೆ ಮುನ್ನ ಎರಡೂ ದೇಶಗಳು ನ್ಯೂಕ್ಲಿಯರ್ ಯುದ್ಧದ ಭೀತಿಯ ಕಾರ್ಮೋಡದಲ್ಲಿದ್ದವು.

ಉತ್ತರ ಕೊರಿಯ ನ್ಯೂಕ್ಲಿಯರ್ ಅಸ್ತ್ರಗಳು, ಕ್ಷಿಪಣಿಗಳನ್ನೂ ಒಳಗೊಂಡಂತೆ ಮಿಲಿಟರಿ ಪ್ರಾಬಲ್ಯದಲ್ಲಿ ಮೆರೆದರೆ, ದಕ್ಷಿಣ ಕೊರಿಯಾದಲ್ಲಿ ಅಮೆರಿಕದ ಬಂಡವಾಳ ಹರಿದು ಆರ್ಥಿಕ ಪ್ರಗತಿಯಾಯಿತು. ಕಡಿದಾದ ಆರ್ಥಿಕ ದಿಗ್ಬಂಧನದಿಂದಾಗಿ ಉತ್ತರದ ಜನ ಪರಿತಪಿಸಿದರೆ, ದಕ್ಷಿಣದ ಜನಜೀವನ ಉತ್ತಮ ಗತಿಗೇರಿತು. ಮುಂಬರುವ ಅಮೆರಿಕ–ಉತ್ತರ ಕೊರಿಯ ಶೃಂಗ ಸಭೆಯಿಂದ ಕಳೆದ ಆರು ದಶಕಗಳಿಗೂ ಹೆಚ್ಚು ಕಾಲದಿಂದ ಚಾಲ್ತಿಯಲ್ಲಿರುವ ಆರ್ಥಿಕ ದಿಗ್ಬಂಧನಕ್ಕೆ ಮುಕ್ತಿ ದೊರಕುವುದೇನೋ ನೋಡಬೇಕು. ಏನೇ ಆಗಲಿ ಉತ್ತರ ಕೊರಿಯದ ನಾಯಕ ಕಿಮ್ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಗೆ ಬದ್ಧತೆಯನ್ನು ಪ್ರಕಟಿಸಿರುವುದು ಸ್ವಾಗತಾರ್ಹ. ಕೊರಿಯದಂಥ ಪುಟ್ಟ ದೇಶ ಅತ್ಯಂತ ದುಬಾರಿ ವ್ಯಯದ ನ್ಯೂಕ್ಲಿಯರ್ ಅಸ್ತ್ರ, ಕ್ಷಿಪಣಿಗಳ ತಯಾರಿಕೆಯಲ್ಲಿ ತೊಡಗಿಕೊಳ್ಳುವುದು ಆರ್ಥಿಕ ಪ್ರಗತಿಗೆ ಮಾರಕ. ಹಾಗಾಗಿ, ಅದು ಜನೋಪಯೋಗಕ್ಕೆ ವಿನಿಯೋಗ ವಾಗುವುದೆಂದು ಭಾವಿಸೋಣ. ಯಾವ ಬಗೆಯಿಂದ ನೋಡಿದಾಗ್ಯೂ ಇದೊಂದು ಅಪೂರ್ವವಾದ ಮಹತ್ತರದ ಬೆಳವಣಿಗೆ.

ಇದಕ್ಕೆ ಪೂರ್ವಸಿದ್ಧತೆಯಾಗಿ ಜರುಗಿದ ವಿದ್ಯಮಾನಗಳನ್ನು ಗಮನಿಸೋಣ. ಅಮೆರಿಕ–ಉತ್ತರ ಕೊರಿಯ ಕೆಲವೇ ದಿನಗಳ ಹಿಂದೆ ವಾಕ್ಸಮರದಲ್ಲಿ ನಿರತವಾಗಿದ್ದು, ಪರಸ್ಪರರ ಮೇಲೆ ಕ್ಷಿಪಣಿಗಳ ಹಾರಾಟದ ಮಟ್ಟಕ್ಕೆ ಹೋಗಿತ್ತು. ಅದೇ ಸಮಯದಲ್ಲಿ ದಕ್ಷಿಣ ಕೊರಿಯ ಚಳಿಗಾಲದ ಒಲಂಪಿಕ್ ಪಂದ್ಯಗಳನ್ನು ನಡೆಸಲು ಸಿದ್ಧವಾಗಿತ್ತು. ಅನಿರೀಕ್ಷಿತವಾಗಿ ಉತ್ತರ ಕೊರಿಯ ಸ್ನೇಹ ಹಸ್ತ ಚಾಚಿತಲ್ಲದೆ, ಸಕ್ರಿಯವಾಗಿ ಭಾಗವಹಿಸಲು ಮುಂದಾಯಿತು. ಇಲ್ಲಿಂದ ಪ್ರಾರಂಭವಾದ ಉತ್ತರ–ದಕ್ಷಿಣ ಕೊರಿಯಾಗಳ ಸೌಹಾರ್ದ, ಅಧಿಕಾರಿಗಳ ಮಟ್ಟದ ಸಭೆಗಳಿಂದ ಶೃಂಗ ಸಭೆಯವರೆಗೆ ತಲಪಿದ್ದು ರೋಚಕ ಕತೆ. ಎರಡೂ ದೇಶಗಳ ನಾಯಕರು ಪರಸ್ಪರ ಭೇಟಿಯಾಗಿ ವರ್ಷಾಂತ್ಯದೊಳಗೆ ಶಾಂತಿ ಸ್ಥಾಪನೆ ಒಪ್ಪಂದಕ್ಕೆ ಬರಲು ನಿರ್ಧರಿಸಿರುವುದು ಮಹತ್ವಪೂರ್ಣ ಬೆಳವಣಿಗೆ. ೧೯೪೫ರಲ್ಲಿ ಎರಡನೇ ಮಹಾಯುದ್ಧ ಅಂತ್ಯದಲ್ಲಿ ಇಬ್ಭಾಗವಾದ ಕೊರಿಯ ಶೀತಯುದ್ಧದ ಮೊದಲ ಸಶಸ್ತ್ರ ಹಣಾಹಣಿಗೆ ನಾಂದಿಯಾಗಿದ್ದು ಇತಿಹಾಸ. ಆಗಿನಿಂದ ಇಂದಿನವರೆಗೆ ಇಬ್ಭಾಗವಾಗಿರುವ ಈ ದೇಶ ಮುಂದೆ ಕೂಡ ಒಂದಾಗುವ ಸೂಚನೆ ಇಲ್ಲ.

ಈ ಎಲ್ಲ ಹಿನ್ನೆಲೆಯಲ್ಲಿ ಜೂನ್ ೧೨ರಂದು ಸಿಂಗಪೂರ್‌ನಲ್ಲಿ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಮತ್ತು ಉತ್ತರ ಕೊರಿಯಾದ ನಾಯಕ ಕಿಮ್ ಜೋಂಗ್–ಉನ್ ನಡೆಸಲಿರುವ ಶೃಂಗ ಸಮಾವೇಶ ಒಂದು ಅಭೂತಪೂರ್ವ ಘಟನೆ. ಪೂರ್ವ ಸಿದ್ಧತೆಗಾಗಿ ಕಿಮ್ ಈಗಾಗಲೇ ಚೀಣೀ ಗಣರಾಜ್ಯದ ಅಧ್ಯಕ್ಷ ಕ್ಸಿಯವರನ್ನು ಭೇಟಿ ಮಾಡಿದ್ದಾರೆ. ನ್ಯೂಕ್ಲಿಯರ್ ಅಸ್ತ್ರರಾಹಿತ್ಯದ ತಮ್ಮ ನಿರ್ಧಾರವನ್ನು ಕಿಮ್ ಪುನರುಚ್ಚರಿಸಿದ್ದಾರೆ. ಯರ್‍ರಾಬಿರ್‍ರಿ ನಡವಳಿಕೆಗೆ ಹೆಸರಾಗಿರುವ ಡೊನಾಲ್ಡ್ ಟ್ರಂಪ್ ಜವಾಬ್ದಾರಿಯುತವಾಗಿ ನಡೆದುಕೊಂಡು ಶೃಂಗ ಸಭೆಯನ್ನು ಯಶಸ್ವಿಗೊಳಿಸುವರೆಂದು ಹಾರೈಸೋಣ. ಉತ್ತರ ಕೊರಿಯ–ಅಮೆರಿಕಗಳ ನಡುವೆ ಸೌಹಾರ್ದತೆ ಕುದುರಿ ಹೊಸ ಯುಗಕ್ಕೆ ನಾಂದಿಯಾಗಲಿ. ಇಪ್ಪತ್ತೊಂದನೆ ಶತಮಾನದಲ್ಲಿ ಇಂಥದೊಂದು ಅಪೂರ್ವ ಅವಕಾಶ ಒದಗಿಬಂದಿರುವುದು ಸಂತಸದ ಸಂಗತಿ.

ಇದು ಒಂದು ನಿರ್ದಿಷ್ಟ ಉದ್ದೇಶದಿಂದ ಕೂಡಿದ ಶೃಂಗ ಸಭೆಯಾದರೆ, ಇನ್ನೊಂದು ಅನೌಪಚಾರಿಕ ಅನಿರ್ದಿಷ್ಟ. ಒಂದೆರಡು ದಿನಗಳ ವ್ಯತ್ಯಾಸದಲ್ಲಿ ಏಪ್ರಿಲ್ ತಿಂಗಳ ಅಂತ್ಯದಲ್ಲಿ ಚೀಣಾದ ವುಹಾನ್ ಪ್ರಾಂತದಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿ ಚೀಣಾದ ಅಧ್ಯಕ್ಷ ಕ್ಸಿ ಜಿನ್‌ಪಿಂಗ್ ಅವರೊಂದಿಗೆ ಎರಡು ದಿನಗಳು ಮಾತುಕತೆ ನಡೆಸಿದರು. ಇದೊಂದು ಅನೌಪಚಾರಿಕ ಶೃಂಗ ಸಭೆ. ಎರಡು ಮಿತ್ರರಾಷ್ಟ್ರಗಳು ವಿವಾದಾತ್ಮಕ ವಿಷಯಗಳ ಕುರಿತು ನಡೆಸಿದ ಚರ್ಚೆಯಾಗಿತ್ತು. ೧೯೬೨ರಲ್ಲಿ ಗಡಿವಿವಾದದಿಂದಾಗಿ ಜರುಗಿದ ಸಶಸ್ತ್ರ ಸಮರವನ್ನು ಬಿಟ್ಟರೆ ಉಳಿದಂತೆ ಎರಡೂ ಮಿತ್ರರಾಷ್ಟ್ರಗಳೇ. ಎರಡೂ ಏಶಿಯ ಖಂಡದಲ್ಲಿ ಪ್ರಭಾವೀ ದೇಶಗಳು, ಆರ್ಥಿಕಾಭಿವೃದ್ಧಿಯ ಗುರಿ ಹೊಂದಿರುವ, ಪ್ರಪಂಚದ ಜನಸಂಖ್ಯೆಯಲ್ಲಿ ಮೂರನೇ ಒಂದು ಭಾಗವನ್ನು ಪ್ರತಿನಿಧಿಸುವ ರಾಷ್ಟ್ರಗಳು. ಭಿನ್ನ ವ್ಯವಸ್ಥೆಯನ್ನು ಹೊಂದಿರುವ ಭಾರತ–ಚೀಣಾ ಗಡಿ ನಿಷ್ಕರ್ಷೆ ಇರುಸು–ಮುರುಸು, ಸುಮಾರು ಅರ್ಧ ಶತಮಾನದಿಂದ ಇತ್ಯರ್ಥ ಕಾಣದೆ ನೆನೆಗುದಿಗೆ ಬಿದ್ದಿದೆ. ಇದಕ್ಕೊಂದು ಪರಿಹಾರ ಮಾರ್ಗ ಹುಡುಕುವುದಕ್ಕೆ ಇರುವ ಬಹು ದೊಡ್ಡ ಅಡ್ಡಿ ಎಂದರೆ ಪರಸ್ಪರ ಉದ್ದೇಶಗಳ ಕುರಿತ ಅಪನಂಬಿಕೆ ಹಾಗೂ ಮೇಲಾಟ.

ಈಚೆಗೆ ಭಾರತ–ಚೀಣಾ–ಭೂತಾನ ಗಡಿಯಲ್ಲಿರುವ ದೋಕ್ಲಾಮ ಎಂಬ ವಿವಾದಾತ್ಮಕ ಪ್ರದೇಶ ಸೇನೆಗಳ ಮುಖಾಮುಖಿಗೆ ಕೇಂದ್ರವಾಗಿತ್ತು. ಪರಸ್ಪರ ಸಂಘರ್ಷದ ಘಟ್ಟ ತಲಪಿತ್ತು. ಈ ಹಿನ್ನೆಲೆಯಲ್ಲೇ ಮೋದಿ–ಕ್ಸಿ ಶೃಂಗ ಸಭೆ ನಡೆದದ್ದು ಕೂಡ. ಎರಡು ದಿನಗಳು ಮಾತುಕತೆಗಳು ನಡೆದಾಗ್ಯೂ ಗಡಿವಿವಾದ ಕುರಿತು ನಿಶ್ಚಿತ ಪರಿಣಾಮವೇನೂ ಹೊರಬೀಳಲಿಲ್ಲ. ಉದ್ರಿಕ್ತ ವಾತಾವರಣ ಉಪಶಮನ ವಾಗಿದ್ದರೂ ಅನಿರ್ದಿಷ್ಟತೆ ಮುಂದುವರಿದಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಸಂತೆಯೊಳಗೊಂದು ಸುತ್ತು

**ಜ್ಯೋತಿ ಚೇಳ್ಯಾರು**

**ಸಂ**ಜೆ ದೂರದ ಮಂಗಳೂರಿನ ಕಾಲೇಜಿನಿಂದ ಮನೆಗೆ ಬಂದವಳೇ ಮಗಳು ಕೇಳಿದಳು, "ಅಮ್ಮಾ ಮಂಗಳೂರಲ್ಲಿ ಸಂತೆ ಯಾವಾಗ?" ಯಾಕೆ ಮಗಳೇ ಎಂದರೆ "ನೋಡು ನಮ್ಮ ಕಾಲೇಜಿನಲ್ಲಿ ವೆರೈಟಿ ಕಾಂಪಿಟಿಶನ್ ಆರಂಭವಾಗಿದೆ. ನಮ್ಮ ಗೆಳತಿಯರ ಗುಂಪಲ್ಲಿ ದಿವ್ಯಾ ಇದ್ದಾಳಲ್ಲ, ಚಿಕ್ಕಮಗಳೂರಿನಿಂದ ಬಂದವಳು, ಅವಳಿಗೆ ರಂಗೋಲಿ ಸ್ಪರ್ಧೆಗೆ ರಂಗೋಲಿ ಪುಡಿ ಬೇಕಂತೆ, ಅಮ್ಮ, ಅವರ ಊರಲ್ಲಿ ವಾರಕೊಮ್ಮೆ ಸಂತೆಗೆ ರಂಗೋಲಿ ಪುಡಿ ಬರುತ್ತಂತೆ, ಅಲ್ಲಿಯೇ ಅವರು ಅದನ್ನೆಲ್ಲಾ ತಕೋಳ್ತಾರಂತೆ. ನಮ್ಮಲ್ಲಿ ಯಾವಾಗ ಸಂತೇ" ಅಂತ ಕೇಳಿದಳು. ಮಗಳ ಮಾತಿನ ಧಾಟಿಯ ಹುಮ್ಮಸ್ಸು, ಹೂಂಗುಡುತ್ತಿದ್ದವಳು ಅಲ್ಲಿಯೇ ತೆಪ್ಪಗಾದೆ. ಮಗಳ ಪ್ರಶ್ನೆ ಸಹಜವಾದುದೇ, ಹೌದಲ್ಲ ಮಂಗಳೂರಲ್ಲಿ ಯಾವಾಗ ಸಂತೆ? ಪ್ರಶ್ನೆ ಧುತ್ತನೆ ಎದುರಾಯಿತು. ಮಂಗಳೂರಿನ ಸಂತೆಯನ್ನು ಎಲ್ಲಿ ಹುಡುಕೋಣ? ಹಳೆಬಂದರಿನ ಧಕ್ಕೆಯಲ್ಲೋ? ಬಂದರ್ ರಸ್ತೆಯಲ್ಲೋ ಹಂಪನ ಕಟ್ಟೆಯಲ್ಲೋ? ಮಾರುಕಟ್ಟೆ ಬಂದು ತಳವೂರಿದ ಈಚೆಗೆ ಆರಂಭವಾದ ಮಾಲ್‌ಗಳ ಅಂಗಳದಲ್ಲೋ? ಎಲ್ಲಿ ಹುಡುಕೋದು ಸಂತೆಯನ್ನು. ವರ್ತಮಾನದ ವಾಣಿಜ್ಯ ನಗರಿ ಮಂಗಳೂರು ಬಂದರು, ವಿಮಾನ ನಿಲ್ದಾಣ, ರೈಲು ನಿಲ್ದಾಣಗಳಲ್ಲೋ ಇದ್ದು ರಾಜ್ಯದ ನಕಾಶೆಯಲ್ಲಿ ಪ್ರಮುಖ ಪಾತ್ರ ವಹಿಸಿದ ನಗರವಿದು. ತಾಲೂಕು ಕೇಂದ್ರದಿಂದ ದೂರವಿರುವ ಹಳ್ಳಿಗಳಲ್ಲೋ, ಪ್ರತಿ ಹಳ್ಳಿಯ ಮೂಲೆ ಮೂಲೆಯಲ್ಲೋ ಇಂದಿಗೂ ವಾರಕೊಮ್ಮೆ ಸಂತೆ ನಡೆಯುತ್ತಿರುವ ಈ ಕಾಲದಲ್ಲೂ ಮಂಗಳೂರು ನಗರದ ಸಂತೆ ಎಲ್ಲಿ ಹೋಯಿತಪ್ಪ ಎಂದು ಯೋಚಿಸುವ ಸರದಿ ನನ್ನದಾಯಿತು. ಯಾವ ಸಂತೆಯಲ್ಲಿ ಏನನ್ನು ಹುಡುಕೋದು? ಕಳೆದ ನಿನ್ನೆಯ ಪುಟಗಳ ಉತ್ತರವನ್ನೇ ಹುಡುಕುತ್ತಾ ಸಾಗಿದೆ.

ತಕ್ಷಣ ನನ್ನ ಬಾಲ್ಯ ನೆನಪಾಯಿತು. ಆ ಕಾಲದಲ್ಲಿ ನನ್ನ ಪುಟ್ಟ ಹಳ್ಳಿ ಬಾಳದಿಂದ ವಾರದ ಸಂತೆಗೆ ತೆರಳ ಬೇಕಾದರೆ ದೂರದ ಬಜಪೆಗೆ ತೆರಳಬೇಕಿತ್ತು. ಈಗಿನಂತೆ ಮನೆ ಮುಂದೆ ಬಸ್ ನಿಲ್ಲುವ ಊರು ಅದಾಗಿರಲಿಲ್ಲ. ಕಲ್ಲರಕೋಡೊಯ ಕೋಡಿ ಮೂಲೆಯ ಮನೆಯಿಂದ ಬಸ್ಸು ಬರುವ ಸ್ಥಳಕ್ಕೆ ಬರಬೇಕಾದರೆ ಎರಡು ಮೈಲು ನಡೆಯಬೇಕು. ಬಸ್ಸೋ ಒಂದು ಗಂಟೆಗೋ ಎರಡು ಗಂಟೆಗೊಮ್ಮೆಗೋ ಪುರುಸೊತ್ತಾದರೆ ಬರುತ್ತಿತ್ತು. ಸಮಯಕ್ಕೂ ಬಾರದಿರುವ ಬಸ್ಸು ಬರದೇ ಇದ್ದರೆ ಅಜ್ಜಿಯ ಕತೆ ಪರ್ಸಂಗದೊಂದಿಗೆ ಮುಂದಿನ ದಾರಿ ಕ್ರಮಿಸಬೇಕಿತ್ತು. ಮನೆಯಂಗಳದಿಂದ ಹೊರಟು ಮುಂದೆ ಸಾಗಿದರೆ ಇಳಿಜಾರಿನ ಕೊರಕಲಾದ ಹಾದಿ, ಏದುಸಿರು ಬಿಡುತ್ತ ಮುಂದಿನ ಗುಡ್ಡ ಏರಬೇಕು. ಸಂತೆಗೆ ಹೋಗೋದೆಂದರೆ ಬರಿಯ ಕೈ ಬೀಸಿಕೊಂಡು ಹೋಗೋದಲ್ಲ ಮನೆಯಿಂದ ಹೆಣೆದ ಚಾಪೆಯೋ, ಮೂಟೆ ಕಟ್ಟಿದ ಗೇರುಬೀಜವೋ ತಲೆಯ ಮೇಲಿರುತ್ತಿತ್ತು. ಇನ್ನೊಂದು ಕೈಯಲ್ಲಿ ಸಂತೆಯಿಂದ ತರಬೇಕಾದ ವಸ್ತುಗಳಿಗಾಗಿ ಒಂದು ಗೋಣಿಯೋ, ಚೀಲವೋ ಇರುತ್ತಿತ್ತು. ಅಜ್ಜಿ ಮತ್ತು ತಮ್ಮನ ಜತೆಗೆ ಕಂಬಳವನ್ನೇ ಹೊತ್ತು ತಂದ ಅಗೋಳಿ ಮಂಜಣ್ಣನಂತೆ ಸಂತೆಯನ್ನೇ ಹೊತ್ತು ತರಲು ನಾವು ಹೊರಟಿದ್ದೆವು. ನಮ್ಮ ತಲೆಯ ಮೇಲೆ ಹೆಣೆದ ಚಾಪೆ ಸುರುಳಿ ಸುತ್ತಿಕೊಂಡಿತ್ತು. ತಲೆಯ ಮೇಲಿನ ಭಾರ ಹಗುರವಾಗಿದ್ದರಿಂದ ಬಿಡುಬೀಸಾಗಿ ಹೆಜ್ಜೆ ಸಾಗುತ್ತಿತ್ತು. ಮನೆ ಮುಂದಿನ ಹಟ್ಟಿ ದಾಟಿ ಪಡ್ಡುವನ್ನು ಏರಿ ಹರಿಯುತ್ತಿದ್ದ ತೋಡು ಇಳಿದು ರಕ್ಕಸಾಕಾರದ ಹುಳಿಮಾವಿನ ಮರ ದಾಟಿ



ಮುಂದೆ ಹೊರಟಿದ್ದೆವು. ಇದ್ದಕ್ಕಿದ್ದಂತೆ ಬೀಸಿದ ಗಾಳಿಗೆ ಒಂದು ಕೆಂಜಿರುವೆ ಗೂಡು ಮಾವಿನ ಹಣ್ಣಿನೊಂದಿಗೆ ಕೆಳಕ್ಕೆ ಬಿತ್ತು. ಎಲೆ ಮಡಚಿ ಕಟ್ಟಿದ ಕೆಂಜಿರುವೆ ಗೂಡು ತಲೆಯ ಮೇಲಿನ ಚಾಪೆಗೆ ಬಿದ್ದು ಕೆಳಗೆ ಬೀಳಲು ನಾನು ಥಕಥೈ ಕುಣಿಯಲಾರಂಭಿಸಿದೆ, ಇರುವೆ ಕೆಳಕ್ಕೆ ಬಿದ್ದ ಸಿಟ್ಟು ಆಕ್ರೋಶಗಳಿಂದ ಬಟ್ಟೆಯೊಳಗೆ ಎಲ್ಲೆಲ್ಲೋ ಹೊಕ್ಕಿತು. ಚಾಪೆ ನೀರ ಬದುವನ್ನು ದಾಟಿ ಆಚೆ ಬಿತ್ತು. ನಾನು ಬಟ್ಟೆಯೊಳಗಿನ ಇರುವೆ ಹೊರ ತೆಗೆಯಲು ನೃತ್ಯ ಮಾಡಲಾರಂಭಿಸಿದ್ದೆ. ಗೆಜ್ಜೆಯ ತಾಳಕ್ಕೆ ಹಾಕುವ ಹೆಜ್ಜೆಯ ಮೇಳ ನನ್ನದು. ಬೆನ್ನ ಹಿಂದಿದ್ದ ನನ್ನಜ್ಜಿ ಕೇಪಳದ ಮೂರು ಕಬೆಯ ಗೆಲ್ಲು ಮುರಿದು ಚಾಪೆ ಎಸೆದುದಕ್ಕಾಗಿ ಛಟೀರೆಂದು ಬೆನ್ನಗೆ ಕೊಟ್ಟರು. ನನ್ನ ನೃತ್ಯದೊಂದಿಗೆ ಸಂಗೀತವೂ ಜೋರಾಯಿತು. ನನ್ನ ತಮ್ಮ ನಿಂತು ಹಲ್ಲು ಕಿಸಿಯುತ್ತಿದ್ದ. ಅವನನ್ನು ನುಂಗುವಷ್ಟು ಸಿಟ್ಟು ಬಂದಿತ್ತು. ಏನು ಮಾಡೋದು, ಹೊಟ್ಟೆಯ ಸಿಟ್ಟು ರಟ್ಟೆಯಲ್ಲಿಲ್ಲವೇ? ರಟ್ಟೆಗೆ ಬಲ ಬಂದರೂ ಬಟ್ಟೆ ಒದ್ದೆಯಾಗುವಂತಹ ಪರಿಸ್ಥಿತಿ. ನನ್ನ ಸಂತೆಯ ಆ ದಿನದ ಪ್ರಯಾಣ ಅಲ್ಲಿಗೇ ನಿಂತು ಅಜ್ಜಿ ಮೊಮ್ಮಗನ ಪ್ರಯಾಣ ಮುಂದುವರಿಯಿತು. 'ನೀನು ಪೆದ್ದಗುಂಡ ನಾನು ಬೋರಮ್ಮ' ಎನ್ನುವ ಅಜ್ಜಿ ಮೊಮ್ಮಗನೊಂದಿಗೆ ಸಂತೆಗೆ ತೆರಳಿದರು. ನನ್ನ ಸ್ಥಿತಿಯೋ ಅಯೋಮಯ. ಮನೆ ಹಿಂದಿದ್ದ ಹರಿವ ತೋಡಿಗೆ ಓಡಿ ನೀರಲ್ಲಿ ಧುಮುಕಿದೆ. ಒಂದೆಡೆ ಕಚ್ಚಿಸಿಕೊಂಡ ಇರುವೆಗಳಿಂದಾದ ದಡಿಕೆ, ಮತ್ತೊಂದೆಡೆ ಪೆಟ್ಟು ತಿಂದ ಅವಮಾನ, ಎಲ್ಲ ಮರೆಯಾದ ಮೇಲೆ ಹಿತ್ತಲ ಬಾಗಿಲಿನಿಂದ ಮೆಲ್ಲ ಒಳ ಬಂದೆ. ಸಂತೆಗೆ ಹೋದವಳು ಅರ್ಧ ಬಿಟ್ಟು, ಏನು ಬಂದದ್ದು? ನಿನ್ನ 'ಸಂತೆ' ಏನು ಬಂದದ್ದೆ? ಎಂದು ತಂಗಿ ಛೇಡಿಸಿದಳು. ಉರಿಯುತ್ತಿರುವ ಮೈ ಮನಗಳ ಮಧ್ಯೆ ಏನೇನೋ ಗೊಣಗುತ್ತ ಸುಮ್ಮಗಾದೆ.

ಆ ದಿನದ ಸಂತೆಯ ರಾಮಾಯಣ ಅಲ್ಲಿಗೇ ಮುಗಿಯಲಿಲ್ಲ. ಅಜ್ಜಿ ಸಂತೆಯಿಂದ ಮನೆಗೆ ಬಂದವಳೇ ತಾನು ತಂದ ತಿಂಡಿಗಳಾದ ಗೋಳಿಬಜೆ, ಸುಕುನುಂಡೆಯ ಕಟ್ಟು ಬಿಡಿಸಿ ಎಲ್ಲ ಮೊಮ್ಮಕ್ಕಳನ್ನು ಹತ್ತಿರ ಕರೆದುಕೊಂಡಳು. ನನ್ನ ಬೆನ್ನು ಸವರಿ, "ದೊಡ್ಡವಳಲ್ವ ನೀನು ಇಕೋ ನಿನಗೆ ನನ್ನ ತಿಂಡಿಯ ಪಾಲು" ಎಂದು ಬಾಯಿಗಿಟ್ಟಾಗ ಅವಳ ಸೆರಗಿನೊಳಗೆ ನಾನಿದ್ದೆ. ತಾನು ತಂದ ಒಣಮೀನು, ಹಸಿಮೀನು, ಕತ್ತಿ, ಪನೋಲಿ, ಮಣ್ಣಿನ ಬಿಸಲೆ ಎಲ್ಲದರ ಪ್ರದರ್ಶನವೂ ಆಯಿತು. ಚಾಪೆಗೆಷ್ಟು ರೇಟು ಬಂತು? ಕೊಂಡುಹೋದ ಹಣ ಎಷ್ಟು ಖರ್ಚಾಯಿತು? ಎಲ್ಲವೂ ಬಟಾಬಯಲು. ಮುಚ್ಚುಮರೆಯಿಲ್ಲದೆ ಬದುಕಿನ ಲೆಕ್ಕ, ಸಂತೆಯ ಲೆಕ್ಕ, ಕಣ್ಣ ಮುಂದಿನ ಬಯಲು ! ಸಂತೆಯಲ್ಲಿ ಸಿಕ್ಕ ಬಂಧುಗಳು, ಪರಿಚಿತರು, ಅಪರಿಚಿತರು, ಎಲ್ಲದರ ವರದಿ ಒಪ್ಪಿಸಿ, ತಾನು ನಡೆಸಿದ ವ್ಯಾಪಾರ ಲಾಭ–ನಷ್ಟ ಎಲ್ಲವನ್ನು ಹೂ ದಂಡೆ ಹೆಣೆದು ಮುಡಿದಂತೆ ನಮ್ಮ ಮುಂದಿಡುತ್ತಿದ್ದಳು. ಯಾವಾಗ ಸಂತೆಗೆ ಹೋದರೂ ಅವಳು ಬಜಪೆಯ ಚಿನ್ನದ ವ್ಯಾಪಾರಿ ರಮೇಶಾಚಾರಿಯ ಅಂಗಡಿಗೆ ಹೋಗದೆ ಬಂದವಳಲ್ಲ. ಮಕ್ಕಳು–ಮೊಮ್ಮಕ್ಕಳ ಮೂಗಿನ ನತ್ತೋ, ಕಿವಿಯೋಲೆಯೋ, ಕಾಲಿನ ಗೆಜ್ಜೆಯೋ ಏನನ್ನಾದರೂ ಮಾಡಿಸಲೋ, ತರಲೋ ಇರುತ್ತಿತ್ತು. ತಾನು ಮಾಡಿಸುತ್ತಿರುವ ಪದ್ದೆಯಿ ಹಾಕಿ ಕರಗಿಸಿ ಪನೋರು ಮಾಡಿಸುವ ಕಾಯಕೆನ್ನುವ ಲೋಕೋಕ್ತಿ ಆಕೆಯದು. ಬೆಳೆದದ್ದು ಗಳಿಸಿದ್ದನ್ನೆಲ್ಲಾ ತಿಂದು ಮುಗಿಸದೆ ಏನಾದರೂ ಉಳಿಸುತ್ತಿದ್ದಳು. ಅವಳ ಬದುಕು ಹಾರೆ ಪನೋರು ಮಧ್ಯೆ ಸವೆಯುತ್ತಲೇ ಎಲ್ಲರಿಗೂ 'ಸಂತೆ'ಯಾಗದೆಯೇ ಹೊರಟುಹೋದಳು.

ಮೊನ್ನೆ ಬಹಳ ವರ್ಷಗಳ ನಂತರ ಬಜಪೆ ಸಂತೆಗೆ ಹೋಗಿದ್ದೆ. ಸಂತೆಯ ಅಂಗಳ ಹಾಗೆಯೇ ಇತ್ತು. ತರಕಾರಿ ಮಾರಲು ಬರುತ್ತಿದ್ದ ಎವೆಲಿನ್ ಬಾಯಿ, ಕೆರ್ಮಿನ ಬಾಯಿ ಕಾಣಲಿಲ್ಲ. ಕುಮೇರಿ ಕೃಷಿಯಿಂದ ಅವರು ತರುತ್ತಿದ್ದ ಶುಂಠಿ, ಮೆಣಸುಗಳೊಂದಿಗೆ ಗೆಣಸಿನದ್ದೇ ವೈಶಿಷ್ಟ್ಯ. ರೋಮ ಕೆರೆಂಗ್, ತುಪ್ಪೆ ಕೆರೆಂಗ್, ಮರಕೆರೆಂಗ್, ಬೂನಕೆರೆಂಗ್, ಪತಾಳ ಕೆರೆಂಗ್, ಒಂದೇ ಎರಡೇ! ಅದರೊಂದಿಗೆ ಗರ್ಭಿಜ ಇಬ್ಬುಲಿ, ಕಾರಂಡೆ, ಸಕ್ಕರೆ ಕಂಚಿ, ಜೊತೆಗೆ ಗೊಂಡೆಹೂ, ಅಬ್ಬಮಲ್ಲಿಗೆ ಎಲ್ಲವೂ ಲಭ್ಯ. ಎಷ್ಟು ವೈವಿಧ್ಯಗಳ ತರಕಾರಿ, ಗೆಣಸು, ಹೂ, ಹಣ್ಣು ತರುತ್ತಿದ್ದ ಅವರಾದರೂ ಎಲ್ಲಿ ಹೋದರೋ? ಬಾಳ, ಕಳವಾರು, ಪೆರ್ಮುದೆ–ಬಜಪೆಯ ಭೂಮಿ ಎಲ್ಲ ಎಂ.ಆರ್.ಪಿ.ಎಲ್, ಎಸ್.ಇ.ಜೆಡ್.ಗೆ ಹೋದ ಮೇಲೆ ಅವರಾದರೂ ಎಲ್ಲಿ ತರಕಾರಿ ಬೆಳೆದಾರು? ಬಸಳೆಯ ಚಪ್ಪರ, ಹರಿವೆಯ ಕಳವನ್ನೇ ಗೋಣಿ ಚೀಲದಲ್ಲಿ ಸುರುಳಿ ಸುತ್ತಿ ತರುತ್ತಿದ್ದ ಮಿರ್ಸಿನ್ ಬಾಯಿ ಇಳಿ ವಯಸ್ಸಿನಲ್ಲೂ ನಾಲ್ಕು ದಂಟು ಹರಿವೆ, ಬಸಳೆಯ ಕಟ್ಟು ಕಟ್ಟಿ ಕೂತಿದ್ದರು. ಕಚ್ಚೆಯ ಮೇಲೆ ಕೂತಿದ್ದ ಹುಣ್ಣೆ ಕಟ್ಟೆಯ ಕುಡುಬಿ ಹೆಂಗ್ಸು ಯಮುನಕ್ಕನ ಬುಟ್ಟಿಯಲ್ಲಿ ತೊಂಡೆ, ಅಲಸಂಡೆ, ಹಾಗಲದೊಂದಿಗೆ ಅಂಬಡೆಯೂ ಇತ್ತು. ಜಾಜಿ ಕೆಂಡ ಸಂಪಿಗೆಯ ದಂಡೆಯೂ ಅಲ್ಲೇ ಎಡೆಯಲ್ಲಿತ್ತು. ಅವರ ಮುಖವಂತೂ ಕೆಂಡದಂತೆ ಸುಡುತ್ತಿತ್ತು, ಕಾರಣ ಕೇಳಿದೆ. "ಗಿರಾಕಿಗಳೇ ಇಲ್ಲ ಮಾರಾಯ್ತಿ ಎಲ್ಲಾ ಈ ಹಿಂದಿಯವರು, ಉತ್ತರದವರು, ತುಂಬಿದ್ದಾರೆ. ಅವರಿಗೆ ಮೂಟೆಗಟ್ಟಲೆ ಬಟಾಟೆ, ಬೀನ್ಸ್, ಈರುಳ್ಳಿ ಬಿಟ್ಟು ಇದ್ಯಾವುದೂ ಬೇಡ. ಊರಲ್ಲಿದ್ದವರೆಲ್ಲಾ ಊರು ಬಿಟ್ಟಾಗಿದೆ, ಅಲ್ಪಸ್ವಲ್ಪ ಬೆಳೆದದ್ದನ್ನು ಮಾರಿ ಬದುಕುವ ಎಂದರೂ ಗಿರಾಕಿಗಳಿಲ್ಲ. ನಾನೇನು ಮಾಡಲಿ ಮಾರಾಯ್ತಿ" ಎಂದು ತಮ್ಮ ಗೋಳು ಹೊಯ್ದುಕೊಂಡರು. ಓಲೆ ಬೆಲ್ಲ ತರುತ್ತಿದ್ದ ತನಿಯ ಪೂಜಾರಿಯಾಗಲೀ, ಮಣ್ಣಿನ ಮಡಕೆಗಳ ವ್ಯಾಪಾರದ ಬೊಗ್ಗು ಮೂಲ್ಯರ ಕುಟುಂಬದ ವ್ಯಾಪಾರವೂ ಇರಲಿಲ್ಲ. ಕತ್ತಿಯ ವ್ಯಾಪಾರ ಮಾಡುತ್ತಿದ್ದ ನೀಲಯ ಆಚಾರಿಯಂತೂ ಕಾಣಲಿಲ್ಲ.

ಒಣಮೀನಿನ ರಾಶಿಯ ಬಳಿ ಬಂದಾಗ ಎಪ್ಪತ್ತರ ಹರೆಯದ ಪೂವಮಕ್ಕ ಹುಡಿ ಬೆರಕೆ ಮೀನನ್ನು

## ಜಡತ್ವ ಮತ್ತು ಹೋರಾಟ

ಅದೇ ಸೂರ್ಯ, ಅದೇ ಚಂದ್ರ
ಅದೇ ಹಗಲು - ರಾತ್ರಿಗಳಲ್ಲಿ
ಬದಲಾಗುತ್ತಾ ಸಾಗಿವೆ
ಬದುಕು, ಸಂಸ್ಕಾರ, ಸಂಸ್ಕೃತಿ !

ಭಕ್ತಿಯಲ್ಲಿ ಬಣ್ಣ ಬೆರಸಿ
ಮನುಷ್ಯ - ಮನುಷ್ಯರ ನಡುವೆ
ಕಂದಕವಿರಿಸಿ, "ಮನುಷ್ಯತ್ವ ನುಂಗಿ"
ಸಾಗುತಿದೆ ವರ್ತಮಾನದ ಬದುಕು !

ಕರುಳಿನ ಕುಡಿಗಳಿಗೆ
ದಾಯಾದಿ ದ್ವೇಷವ ಉಣಿಸಿ
ಉರಿಯುವ ಗಳ ಹಿರಿದು
ಚಳಿ ನೀಗಿಸಿಕೊಳ್ಳುತ್ತಿದೆ ಇಂದಿನ ಸಂಸ್ಕಾರ

ಮೋಸ, ವಂಚನೆ, ದಬ್ಬಾಳಿಕೆ
ದಗಲ್ಬಾಜಿಗಳ ಹೆಡಮುರಗೆಯಲಿ
ನ್ಯಾಯ, ನೀತಿ, ನಿಷ್ಠೆಗಳ ಉಸಿರು
ಹೆಪ್ಪುಗಟ್ಟುವಂತೆ ಮಾಡಿದೆ ಇಂದಿನ ಸಂಸ್ಕೃತಿ

ಕುಸಿದು, ಕುಸಿದು ಬೀಳುತ್ತಿರುವ
ಮೌಲ್ಯಗಳ ನಡುವೆಯೂ
ಕುಗ್ಗಲು ಬಿಟ್ಟಿಲ್ಲ "ಆದರ್ಶದ ಬಲ"
ನಡೆದಿದೆ ನಿರಂತರ ಹೋರಾಟದ ಫಲ !!



ಎಚ್. ಕೆ. ಕೊಟ್ರಪ್ಪ
ಹರಿಹರ

ಹೆಜಮಾಡಿ ಕೋಡಿಯ ಮನೆಯಿಂದ ಹೊತ್ತು ತಂದಿದ್ದರು. ಕೊಲ್ಲತರು, ಪೊಡಿ ಎಟ್ಟಿ, ನಂಗು ಮನಂಗು ಎಲ್ಲಾ ಸಣ್ಣ ಗುಡ್ಡೆ ಹಾಕಿ ಕುಳಿತಿದ್ದರು. ಒಂದು ರಾಶಿಗೆ ಐವತ್ತು ರೂಪಾಯಿ ಎಂದಾಗ ಏನು ತುಂಬಾ ದುಬಾರಿ ಎಲ್ಲಾ ಎಂದು ಕೇಳಿದೆ? "ಹೌದು ಮಗಾ ಮನುಷ್ಯ ಮಾತ್ರ ಈಗ ಅಗ್ಗ ಅಲ್ವಾ?" ಎಂದರು. "ಏನು ಬೇಕು ಹೇಳು? ನೀನೀಗ ಎಲ್ಲಿ ಕಲಿಸುವುದು" ಎಂದು ಕೇಳಿದರು. "ನಿನ್ನ ಅಜ್ಜಿಯ ಕಾಲದಿಂದಲೂ ನನ್ನ ಮನೆಯವರೇ ನಿಮ್ಮ ಮನೆಗೆ ಒಣಮೀನಿನ ವ್ಯಾಪಾರ ಮಾಡ್ತಾ ಬಂದವರು. ಹೌದಾ ನಿನ್ನಮ್ಮ ಹೇಗಿದ್ದಾಳೆ? ಎಷ್ಟು ಮಕ್ಕಳು ನಿನಗೆ?" ಸುಖ-ಕಷ್ಟದ ವಿಚಾರಣೆಯ ನಾಲ್ಕು ಪ್ರಶ್ನೆಗಳಿಲ್ಲದೆ ಅವಳ ಮೀನಿನ ವ್ಯಾಪಾರ ಮುಗಿಯುವುದಿಲ್ಲ. ನನಗೂ ಅದು ತೃಪ್ತಿಯ ವ್ಯಾಪಾರವಾಗಿದೆ ಎನಿಸದಿರುವುದಿಲ್ಲ.

ಸಂತೆ ಮಾಳಕ್ಕೆ ಬಂದು ನಿಂತಾಗಲೆಲ್ಲ ಕಳೆದುಹೋದ ಸಂತೆಯ ಚಿತ್ರಗಳು ಕಣ್ಣ ಮುಂದೆ ಬರುತ್ತವೆ. ಪುಚ್ಚೆ ಪಾಡಿ ದಾಟಿ, ಕಳವಾರು ಪದವು ಕಳೆದು ಎರಡು ಮೂರು ಗುಡ್ಡಗಳನ್ನು ಹಾದು ಇಳಿದು ಏಳು ಮೈಲು ನಡೆದು ಬಂದ ದಿನಗಳು ಇಲ್ಲದಿಲ್ಲ. ಅಜ್ಜಿ ಸಂತೆಮಾಳದಲ್ಲಿ ಕೊಡಿಸುತ್ತಿದ್ದ ಹನ್ನೆರಡಾಣೆಯ ಒಂದು ಲೋಟ ಸೋಜಿ, ಇಲ್ಲವೇ ಐದು ಪನವಿನ ಒಂದು ಲೋಟ ಕಬ್ಬಿನ ಹಾಲು ಅಮೃತಕ್ಕೆ ಸಮಾನವಾಗಿರುತ್ತಿತ್ತು. ಮನೆಯಿಂದ ಹೊರಬರಲು ಪೇಟೆಯನ್ನು ಕಣ್ತುಂಬ ನೋಡಲು ಸಾಧ್ಯವೆಂದೇ ಅವಳ ಬೆನ್ನು ಬೀಳುತ್ತಿದ್ದೆವು. ಸಂತೆಯಲ್ಲಿ ನಡೆಯುವ ವ್ಯಾಪಾರದಲ್ಲಿ ಮೋಸವಾಯಿತೆಂದರೆ ಅಲ್ಲೇ ಕದನ ಕುತೂಹಲ ಶುರು ಹಚ್ಚಿಕೊಳ್ಳುತ್ತಿದ್ದಳು. ಒಮ್ಮೆಯಂತೂ ಒಣಮೋನು ಬಲ್ಯಾರಿಗೆ ವ್ಯಾಪಾರ ಕುದುರಿಸಿ ಬೆಲೆ ನಿಗದಿ ಮಾಡಿದಳು. ಹತ್ತು ರೂಪಾಯಿಯ ವ್ಯತ್ಯಾಸಕ್ಕೆ ಬೆಲೆ ನಿಗದಿಯಾಗಿತ್ತು. ಅಜ್ಜಿ ನಾಗಕ್ಕಳ ಪ್ರಕಾರ ೨೫, ಸಂಕಮಕ್ಕಳ ಪ್ರಕಾರ ೩೫ ಮೀನು ಕತ್ತರಿಸಿಯಾಗಿದೆ. ಸುರು ಮಾಡೇಬಿಟ್ಟಳು ಜನ್ಮ ಜಾಲಾಡಲು. ಅಜ್ಜಿಯ ಕಂಚಿನ ಕಂಠಕ್ಕೆ ಅವಳ ತಾಸೆಯ ಹೊಡೆತ. 'ಪೆಟ್ಟೊಂದು ತುಂಡೆರಡು' ಎಂಬ ವ್ಯವಹಾರದ ಅಜ್ಜಿ ಮಾತು ಮತ್ತು ಕೃತಿಯಲ್ಲೂ ಕಡಕ್ಕೆ ಪೂವಮಕ್ಕಳ ಅಕ್ಕನೋ ಅಮ್ಮನೋ ಆದ ಸಂಕಮ್ಮಕ್ಕನೂ ಅದೇ ಸ್ವಭಾವದವಳು. ಹಾಗಿದ್ದರೂ ಗೋಣಿ ಚೀಲ ತುಂಬಿದ ಮೀನಿನ ವ್ಯಾಪಾರ ಇಲ್ಲದೆ ಅವಳು ಸಂತೆ ಮಾಳ ಬಿಟ್ಟದ್ದೇ ಇಲ್ಲ.

ಮೊನ್ನೆ ನಾನು ದಿನನಿತ್ಯದ ವಸ್ತುಗಳನ್ನು ತರಲೆಂದು ಸುರತ್ಕಲ್ ಸಂತೆಗೆ ಹೋಗಿದ್ದೆ. ಬಜಪೆಯಲ್ಲಿದ್ದ ಬಾಯಮ್ಮ, "ಕುಡುಬಿಯರೆಲ್ಲ ಇಲ್ಲಿ ಇಲ್ಲ. ಬನ್ರೀ ಬನ್ರೀ ಹತ್ತು ರೂಪಾಯಿ, ಇಪ್ಪತ್ತು ರೂಪಾಯಿ ಸೌತೆಕಾಯಿ, ಟೊಮೆಟೋ, ಬಟಾಟೆ" ಎಂದು ಕೂಗಿ ಕರೆಯುವ ಉತ್ತರ ಕರ್ನಾಟಕದ ವಲಸೆ ಕಾರ್ಮಿಕರೇ ಇಲ್ಲಿ ಹೆಚ್ಚು. ರಾಶಿ ಹಾಕಿದ ತರಕಾರಿಗಳಾದರೂ ಯಾವುದು? ಹೂಕೋಸು, ನವಿಲುಕೋಸು, ಬೀಟ್‌ರೂಟ್, ಕ್ಯಾರೆಟ್ ಎಲ್ಲಾ ಸೊಪ್ಪಿನ ರಾಶಿಯಲ್ಲಂತೂ ಸಬ್ಬಸಿಗೆ, ಪುದಿನ, ಮೆಂತ್ಯೆ, ಪಾಲಕ್‌ಗಳದೇ ಕಾರುಬಾರು. ಚೌಳಿಕಾಯಿ ಮುರಿಯುತ್ತಾ ಕೇಳಿದೆ "ನಮ್ಮೂರಿನ ತರಕಾರಿ ಯಾವುದೂ ಇಲ್ವಾ?" ಎಂದು. ಇದು ಊರಿನದೇ ಎಂದು ಪ್ರಶ್ನಿಸಿದರೆ ಎಲ್ಲಾ ಊರಿನದ್ದೇ ಎಂದರು. ಆ ಸಂತೆಯಲ್ಲಿ ಏನುಂಟು ಏನಿಲ್ಲ, ತರಕಾರಿ, ಹಣ್ಣು, ಬಟ್ಟೆ, ತಿಂಡಿಗಳು, ಬೇಕರಿ ತಿನಿಸುಗಳು ಕಾಸ್ಮೆಟಿಕ್ ಜಗತ್ತು ಎಲ್ಲಾ.

ಬೇಕರಿ ತಿನಿಸುಗಳು ಬೆಳಗ್ಗೆ ಮೂಟೆ ಮೂಟೆ ಇದ್ದುದೆಲ್ಲ ವ್ಯಾಪಾರ ಬಿರುಸಾದಂತೆ ಕರಗುತ್ತಾ ಬಂದಿದೆ. ಬೇಕರಿ ತಿಂಡಿಗಳ ಒಂದು ಅಂಗಡಿ ಅಲ್ಲಿ ಯಾವಾಗಲೂ ಇರುತ್ತದೆ. ಅಲ್ಲಿರುವ ಖಾರಾಬಾತ್, ಸೇವ್ ಬಾತ್‌ಗಳೊಂದಿಗೆ ಸಿಹಿಯೂ ಇತ್ತು. ಎಲ್ಲಕ್ಕೂ ಮುಗಿಬಿದ್ದಿರುವ ಗಿರಾಕಿಗಳು. ಒಂದು ಕಡೆ ಈರೋಳು ಕೊಯ್ಯುವ ಮಲಯಾಳಿ ಹೆಣ್ಣುಮಗಳು, ಈರೋಲ್ ಎಂದೆ "ಯಾನ್ ಮೂಲೆ' ಎಂದಳು ತುಳುವಳ್ಳಿ. ತುಂಟ ನಗೆ ನಗುತ್ತಾ, "ಅದಲ್ಲ ನನಗೆ ಈರೋಲ್ ಬೇಕು" ಎಂದಾಗ ಕಣ್ಣಿಗೆ ಹತ್ತು ಎಂದಳು. ಯಾರ ಕಣ್ಣಿಗೆ ಮಾರಾಯ್ತಿ ಎಂದು ನಾನು ಪ್ರತಿಯಾಗಿ ಪ್ರಶ್ನಿಸಲು, 'ಕಣ್ಣು ಕೀಳುವ ಕೆಲಸದಲ್ಲಿ ಮಗ್ನಳಾದಳು. ಅವಳ ಗಾಂಭೀರ್ಯ ನೋಡಿ ಸ್ವಲ್ಪ ಎಳೆಯ ಕಣ್ಣು ಕೊಡು ಬೆಳೆದದ್ದು ಬೇಡ' ಎಂದೆ. "ಎಲ್ಲರಿಗೂ ಎಳತ್ತೇ ಬೇಕೇ? ಕಾಲ ಸಂದದ್ದು ಯಾರಿಗೆ ಬೇಕು?" ಎಂದಳು ಮಾರ್ಮಿಕವಾಗಿ.

ವಾರದ ಸಂತೆಗೆ ಹೋದಾಗಲೆಲ್ಲ ಒಬ್ಬರ ಬಳಿಯೇ ವ್ಯಾಪಾರ ನಡೆಸಿದರೆ ಸ್ವಲ್ಪ ಒಳ್ಳೆಯ ತರಕಾರಿಯೂ ದಕ್ಕಿ ಚೌಕಾಸಿಯಾಗಬಹುದೆಂದು ವೀನಸ್ ಆಸ್ಪತ್ರೆ ದಾಟಿ ವ್ಯಾಪಾರಕ್ಕೆ ಕೂರುವ ಈರಮ್ಮಳ ಬಳಿಯೇ ನಾನು ವ್ಯಾಪಾರ ಮಾಡುತ್ತಿದ್ದೆ. ಲೆಕ್ಕ ಸರಿಯಾಗಿ ಮಾಡುವ, ನಾನು ಮತ್ತೆ ತಾಳೆ ಹಾಕಿ ನೋಡಬೇಕಾದ ಅವಶ್ಯಕತೆಯಿಲ್ಲ ದಿರುವ ನಂಬುಗೆಯ ವ್ಯಾಪಾರ ಅವಳದು. ಅವಳು ಕೊಡುವ ತರಕಾರಿ ಎಂದೂ ಕೊಳೆತುದಿಲ್ಲ. ಇಲ್ಲದೆ ಹೋದರೆ ಗಂಟು ಕಟ್ಟಿ ತರುವ ತರಕಾರಿ ಮನೆಗೆ ಬಂದು ಬಿಡಿಸಿದರೆ ಕೊಳೆತು ನಾರುತ್ತದೆ. ಅವಳು ತರುವ ತರಕಾರಿ ದುಬಾರಿಯಾದರೂ ಗುಣಮಟ್ಟ ಒಳ್ಳೆಯದು. ಒಂದು ವಾರ ಮಾರುಕಟ್ಟೆಗೆ ತೆರಳದಿದ್ದರೂ ಏನಮ್ಮ ನೀವು ಬಂದಿಲ್ಲ ಎಂದು ಸುಖ-ಕಷ್ಟ ವಿಚಾರಿಸುತ್ತಾಳೆ. ಈಗ ಅವಳಿಗೆ ವಾರದ ಒಂದು ದಿನ ಸಂತೆಯಲ್ಲ, ಬುಧವಾರ ವಾರದ ಸಂತೆಯಾದರೆ, ರವಿವಾರ ಕಾರ್ಮಿಕರ ರಜೆಯ ಸಂತೆ. ಎಲ್ಲಾ ಕಾರ್ಮಿಕರಿಗೆ ರಜೆ ಇರುವ ದಿನ ಇಡೀ ವಾರದ ಆಹಾರ ಭದ್ರತೆ ಕಾನೂನು ರವಿವಾರದಂದೇ ಜಾರಿಯಾಗುತ್ತದೆ. ಆಹಾರದೊಂದಿಗೆ ಮದಿರೆಯ ಮಾದಕತೆ ಸಿನಿಮಾದ ಗೀಳಿಗೆ ಸಾಲಾಗಿ ನಿಂತು ಸಿನಿಮಾ ನೋಡುವವರಿಗೂ ಕೊರತೆ ಇಲ್ಲ. ಬುಧವಾರಕ್ಕಿಂತಲೂ ಆದಿತ್ಯವಾರ ಜನವೇ ಜನ. ನಾನು ಸಾಮಾನ್ಯವಾಗಿ ತೆರಳುವ ಬುಧವಾರದಂದು ಕೆಲವೊಮ್ಮೆ ಆಕೆ ಗೊಣಗುವುದೂ ಇದೆ. "ಎಂಥ ಸಂತೆ ಅಮ್ಮ? ಇವತ್ತು ಜನನೇ ಇಲ್ಲ ನಾನು ಸ್ವಲ್ಪ ತಂದದ್ದು ಅದೇ ಮುಗಿದಿಲ್ಲ ಆದಿತ್ಯವಾರ ವ್ಯಾಪಾರದ ಭರಾಟೆ ನೋಡಬೇಕು" ಎನ್ನುತ್ತಾಳೆ. ಮೊನ್ನೆ ಪತ್ರಿಕೆಯಲ್ಲೊಂದು ಸುದ್ದಿ ಪ್ರಕಟವಾಯ್ತು 'ಸೇಬಿಗಿಂತ ಗೆಣಸು ದುಬಾರಿ' ಅಂತ ಅಚ್ಚರಿಯಾಯ್ತು ಬಡವರ ಆಹಾರವಾಗಿದ್ದ ಗೆಣಸು ಬೆಳೆಯುವವರೇ ಇಲ್ಲವಲ್ಲ, ಸೇಬು ಕೇಜಿಯೊಂದಕ್ಕೆ ನಲವತ್ತು ರೂಪಾಯಿ, ಗೆಣಸಿಗೆ ಎಂಬತ್ತು ರೂಪಾಯಿ, ಯಾವುದೇ ಸಂತೆ ಮಾಳದಲ್ಲೂ ಊರಿನ ತರಕಾರಿಗಳ ಬೆಲೆ ಗಗನಕ್ಕೇರಿದೆ, ಪ್ರಾದೇಶಿಕ ತಳಿಯ ತರಕಾರಿಗಳ ಸವಿ ನೋಡಲು ಆಸೆಗೂ ಸಿಗುತ್ತಿಲ್ಲ, ಹಬ್ಬಕ್ಕೂ ನಿಲುಕುತ್ತಿಲ್ಲ. ಯಾಕೆ ಹೀಗೆ? ಕೃಷಿ ಕಾಣೆಯಾಗುತ್ತಿರುವುದೇ ಇದರ ಮೂಲವಿರಬಹುದೇ?

ಕರಾವಳಿಯ ಯಾವ ಊರಿನ ಸಂತೆಯಲ್ಲೇ ಆಗಲಿ ಬ್ಯಾರಿಗಳಿಲ್ಲದೆ ವ್ಯಾಪಾರ ಇದೆಯೇ? ಹುಸಿಯಾದ ಬೇಹರಿಯೇ ಇಲ್ಲ ಎಂಬ ಗಾದೆ ಮಾತು ಕೇಳದವರು ಯಾರು? ಸಂತೆಯಲ್ಲಿ ವ್ಯಾಪಾರಕ್ಕೆಂದು ಬರುವವರಲ್ಲಿ ಅರ್ಧಕ್ಕಿಂತ ಹೆಚ್ಚಿನವರು ಮುಸ್ಲಿಮರೇ. ವ್ಯಾಪಾರಕ್ಕೆ ತೆರಳಿದಾಗ ಯಾರೂ ಅವರ ಜಾತಿ-ಧರ್ಮ ಕೇಳುವುದಿಲ್ಲ. ವ್ಯಾಪಾರಿ ಧರ್ಮ ಮೀರದಿದ್ದರೆ ಅದುವೇ ಅವರ ವ್ಯವಹಾರದ ಬಂಡವಾಳ. ಸಂತೆಕಟ್ಟೆ ಗಳಲ್ಲಿ ಇಂದಿಗೂ ಸಾಂಪ್ರದಾಯಿಕ ವಸ್ತುಗಳ, ಪರಂಪರೆಯಿಂದ ಬಳಕೆಯಲ್ಲಿರುವ ವಸ್ತುಗಳ ವ್ಯವಹಾರ ನಡೆಸುವವರು ಬ್ಯಾರಿಗಳೇ ಆಗಿದ್ದಾರೆ. ದಿನನಿತ್ಯದ ಬಳಕೆಯ ಹುಳಿ, ಮೆಣಸು, ಕುಡುಪು, ತಟ್ಟಿ ಜರಿಗೆಯೋಡು, ಪುನರ್ಪುಳಿಯೋಡು ಎಲ್ಲವನ್ನು ಜತನದಿಂದ ವ್ಯಾಪಾರಕ್ಕೆ ಅಣಿಗೊಳಿಸುತ್ತಾರೆ. ಪರಂಪರೆಗೆ ಆಧುನಿಕತೆ ಮುಖಾಮುಖಿ ಯಾದಂತೆ ಪಕ್ಕದಲ್ಲೇ ಮೊಳಕೆ ಬರಿಸಿದ ಹೆಸರು, ಹುರುಳಿ, ಬಟಾಣಿ, ಅವರೆ ಕಾಳುಗಳು ಇರುತ್ತದೆ. ವಿವಿಧ ಸಾಂಬಾರ್ ಪುಡಿಗಳು, ದಿಢೀರ್ ಅಡುಗೆಯ ವ್ಯಂಜನ ಗಳೊಂದಿಗೆ ಸಲಕರಣೆಯೂ ಲಭ್ಯ. ಪಕ್ಕದಲ್ಲೆ ಮೊಬೈಲ್ ರೀಚಾರ್ಜ್, ಸಿಡಿ ಅಂಗಡಿಗಳು ಎದ್ದು ನಿಂತಿರುತ್ತವೆ. ಸಮೀಪವೇ ಮಸಾಲೆ ಪೂರಿ, ಪಾನಿಪೂರಿ ಗಳೊಂದಿಗೆ, ಚಿಕನ್, ನೂಡಲ್ಸ್, ವೆಜ್ ನೂಡಲ್ಸ್, ಸ್ಟಾಲ್‌ಗಳೂ ಎದ್ದು ನಿಂತಿರುತ್ತವೆ.

ವಾರಪೂರ್ತಿ ನಡೆಯುವ ಸಂತೆಗಳಲ್ಲಿ ಊರಿಂದ ಊರಿಗೆ ತಿರುಗಾಡುತ್ತಾ ತಾವು ತಂದ ತರಕಾರಿ ಹಾಗೂ ವಸ್ತುಗಳನ್ನು ಮಾರಾಟ ಮಾಡುತ್ತ, ಬದುಕಿನ ಕಂತು ಪೂರೈಸುತ್ತ ನೆಲದಿಂದ ಹಾಸಿಗೆಗೆ, ಹಾಸಿಗೆಯಿಂದ ನೆಲಕ್ಕೆ ಉರುಳುವ ಕಥನವದು. ಹಿಂದೆ ಜೀವನಾವಶ್ಯಕ ವಸ್ತುಗಳು ಗೃಹ ಬಳಕೆಯ ವಸ್ತು, ಕೃಷಿ ಉಪಕರಣಗಳು ವಾರದ ಸಂತೆಗಳಲ್ಲಿ ಲಭ್ಯ. ವಾರ್ಷಿಕ ಜಾತ್ರೆ, ಕಂಬುಳ, ಕೋಲ, ನೇಮಗಳಿಗಾಗಿಯೇ ಜನ ವ್ಯಾಪಾರಕ್ಕಾಗಿ ಕಾದು ಕೂರುತ್ತಿದ್ದರು. ಇಂದು ಹಾಗಿಲ್ಲ ಕಿಸೆಯಲ್ಲಿ ಕಾಸಿದ್ದರೆ ನಿತ್ಯವೂ ಸಂತೆಮೇಳವೇ ಎದುರಾಗಬಹುದು. ಇಂದು ಕಾಸನ್ನು ಹೊತ್ತೊಯ್ದು ಎಚ್ಚರಿಕೆಯಿಂದ ಖರ್ಚು ಮಾಡಬೇಕಾಗಿಲ್ಲ. ಪರ್ಸಿನ ತಳದಲ್ಲಿ ಭದ್ರವಾಗಿರಿಸಿದ ಡೆಬಿಟ್ ಕಾರ್ಡ್, ಕ್ರೆಡಿಟ್ ಕಾರ್ಡ್‌ಗಳು ಸಂತೆಯಲ್ಲದ ದಿನವೂ ಸಂತೆಯಂಗಳಕ್ಕೆ ಕೊಂಡೊಯ್ದು ನಿಲ್ಲಿಸಿಬಿಡುತ್ತವೆ. "ಹಾಗಿದ್ದರೆ ಬನ್ನಿ ಸಂತೆಗೆ ಹೋಗೋಣ" ಎನ್ನದಿರುತ್ತೇವೆಯೆ? ಕಳೆದುಹೋದುದನ್ನು ಮತ್ತು ನಮ್ಮೊಳಗಿನ ಸಂತೆ ಮಾಳದಲ್ಲಿ ಎಚ್ಚರಿಕೆಯಿಂದ ಹುಡುಕುತ್ತಿದ್ದೇವೆ? ಪ್ರಾಥಮಿಕ ತರಗತಿಯಲ್ಲಿ ಓದಿದ ಕಯ್ಯಾರರ ಕವಿತೆ 'ಸಂತೆಗೆ ಹೋದನು ಭೀಮಣ್ಣ, ಹಿಂಡಿಯ ಕೊಂಡನು ಹತ್ತು ಮಣ' ಎನ್ನುವ ಸಾಲುಗಳು ಸ್ಮರಣೆಯಲ್ಲಿ ಅನುಕರಣಿಸುತ್ತವೆ. "ನೀನೆನಗಿದ್ದರೆ ನಾ ನಿನಗೆ" ಎಂಬ ಕವಿತೆಯ ಶೀರ್ಷಿಕೆ ಮತ್ತೆ ಮತ್ತೆ ತತ್ವಪದವಾಗಿ ಕಿವಿಯಲ್ಲಿ ಗುಂಯ್‌ಗುಡುತ್ತದೆ.

**ಜ್ಯೋತಿ ಚೇಳ್ಯಾರು**
'ಕ್ಷಿತಿಜ', ಸೈಟ್ ನಂ. ೩೮೨, ಚೇಳ್ಯಾರು ಅಂಚೆ, ವಯಾ ಹಳೆಯಂಗಡಿ, ಮಂಗಳೂರು,
ದಕ್ಷಿಣ ಕನ್ನಡ ಜಿಲ್ಲೆ – ೫೭೪೧೪೬



# ನಕ್ಷತ್ರಗುಚ್ಛದ ಪರಿಚಯ

**ಕ**ಟಕ ಎಂಬುದು ಕ್ಷೀಣವಾದ ರಾಶಿ. ಅಲ್ಲಿರುವ ಪುಷ್ಯ ಬಹಳ ಕ್ಷೀಣ ನಕ್ಷತ್ರ. ಅದರ ಪಕ್ಕದಲ್ಲಿ ಒಂದು ನಕ್ಷತ್ರ ಗುಚ್ಛವಿದೆ. ಅದರ ಹೆಸರು ಪ್ರೆಸಿಪಿ ಎಂದು. ಸಾವಿರಾರು ನಕ್ಷತ್ರಗಳು ಒತ್ತಟ್ಟಿಗೆ ಸೇರಿಕೊಂಡಿದ್ದರೂ ಒಟ್ಟು ಪ್ರಕಾಶವೂ ಬಹಳ ಕಡಿಮೆ. ಇದನ್ನು ಬರಿಗಣ್ಣಿನಿಂದ ನೋಡಬಹುದು; ಆದರೆ ಚಂದ್ರನ ಬೆಳಕಿರಬಾರದು; ಆಕಾಶ ಶುಭ್ರವಾಗಿರಬೇಕು – ಹೀಗೆಲ್ಲ ನಿಬಂಧಗಳಿವೆ. ಈ ತಿಂಗಳಲ್ಲಿ ಅದನ್ನು ಗುರುತಿಸಲು ಚಂದ್ರನೇ ಸಹಾಯ ಮಾಡುವ ವಿಶೇಷ ಅವಕಾಶವಿದೆ. ೧೮ರಂದು ಬಾಲಚಂದ್ರನ ಆಸುಪಾಸನ್ನು ಸೂಕ್ಷ್ಮವಾಗಿ ಗಮನಿಸಿ. ಮೂರು ನಕ್ಷತ್ರಗಳ ಪುಟ್ಟ ಗುಂಪು ಕಾಣುತ್ತದೆ. ದುರ್ಬೀನು ಇದ್ದರೆ ಅವುಗಳಲ್ಲೊಂದು ಚುಕ್ಕೆಯಂತಿಲ್ಲ ಎಂದು ತಿಳಿಯುತ್ತದೆ. ಅದೇ ಪ್ರೆಸಿಪಿ. ದುರ್ಬೀನಿನಲ್ಲಿ ಸಣ್ಣ ಮೋಡದ ತುಣುಕಿನಂತೆ ಕಾಣುತ್ತದೆ. ದೂರದರ್ಶಕ ಗಳಿಂದ ನಕ್ಷತ್ರಗುಚ್ಛದ ಬಿಡಿ ನಕ್ಷತ್ರಗಳು ಕ್ಷೀಣವಾಗಿ ಕಾಣುತ್ತವೆ. ಈ ವರ್ಷದ ಪ್ರತಿ ತಿಂಗಳಲ್ಲಿಯೂ ಚಂದ್ರ ಈ ಗುಚ್ಛದ ಪಕ್ಕವೇ ಹಾದು ಹೋಗುತ್ತದೆಯಾದರೂ ಇದನ್ನು ಗುರುತಿಸಲು ಚಂದ್ರನ ಬೆಳಕೇ ಅಡ್ಡಿಯಾಗುತ್ತದೆ. ಈ ತಿಂಗಳಲ್ಲಿ ಬಾಲಚಂದ್ರದ ಪಕ್ಕ ಕಾಣುವುದರಿಂದ ಗುರುತಿಸಬಹುದು. ಸಂಜೆಯ ಆಕಾಶ ದಲ್ಲಿ ಕಾಣುವ ಗ್ರಹಗಳೆಂದರೆ ಶುಕ್ರ ಮತ್ತು ಗುರು. ಶುಕ್ರ ಮಿಥುನ ರಾಶಿಯಿಂದ ಕಟಕಕ್ಕೆ ಬರುತ್ತದೆ. ಅದೂ ಕೂಡ ೨೦ರಂದು ಪ್ರೆಸಿಪಿ ಗುಚ್ಛದ ಪಕ್ಕವೇ ಹಾದುಹೋಗುತ್ತದೆ. ಇದು ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

ಉ
ಪೂ
ಪ
ದ
ಸಪ್ತರ್ಷಿ ಮಂಡಲ
ಭೀಮ
ಸಹದೇವ
ಸ್ವಾತಿ
ಶುಕ್ರ
ಕಟಕ ಮಿಥುನ
ಸಿಂಹ
ಉರಗಧರ
ಕನ್ಯಾ
ತುಲಾ ಚಿತ್ರಾ
ಗುರು
ವೃಶ್ಚಿಕ
ಹಸ್ತ
ಕಿನ್ನರ
ತ್ರಿಶಂಕು

ಗುರು ಗ್ರಹ ಸಾಕಷ್ಟು ಪ್ರಕಾಶಮಾನವಾಗಿದೆ. ಅದನ್ನು ಪೂರ್ವದಿಕ್ಕಿನಲ್ಲಿ ಗುರುತಿಸಬಹುದು. ಸುಮಾರು ೭ ಗಂಟೆಯ ನಂತರ ಪೂರ್ವದ ಅಂಚಿನಲ್ಲಿ ಕಾಣುವ ಪ್ರಕಾಶಮಾನ ಚುಕ್ಕೆಯೇ ಶನಿಗ್ರಹ. ಇದು ತಿಂಗಳ ಕೊನೆಗೆ ಸೂರ್ಯಾಸ್ತದ ಸಮಯದಲ್ಲಿಯೇ ಕಾಣತೊಡಗುತ್ತದೆ. ಹುಣ್ಣಿಮೆಯಂದು ಅದರ ವಿಯುತಿ ಅಂದರೆ ಸೂರ್ಯಾಸ್ತವಾಗುವಾಗ ಅದು ಉದಯಿಸುತ್ತದೆ. ಸುಮಾರು ೯ ಗಂಟೆಗೆ ಉದಯಿಸುವ ಕೆಂಪು ಚುಕ್ಕೆಯೇ ಮಂಗಳ ಗ್ರಹ. ಇದು ಸಹ ಸದ್ಯದಲ್ಲೇ ಸಂಜೆಯ ಆಕಾಶಕ್ಕೆ ಬರಲಿದೆ. ೨೮ರಂದು ಅದು ಸ್ಥಿರವಾಗಿ ನಿಲ್ಲುವುದು; ಅಂದರೆ ಹಿನ್ನಡೆ ಆರಂಭ ವಾಗುವುದು. ಇದು ವಿಯುತಿ ಯನ್ನು ಸೂಚಿಸುವ ಘಟನೆ. ಬುಧ ಗ್ರಹ ತಿಂಗಳ ಕೊನೆಗೆ ದಿಗಂತದ ಅಂಚಿನಲ್ಲಿ ಕಾಣುತ್ತದೆ.



ಜೂನ್ ೧೮ ಸಂಜೆ ಚಂದ್ರ–ಶುಕ್ರ–ಪ್ರೆಸಿಪಿ ನಕ್ಷತ್ರಗುಚ್ಛ ಪುಟ್ಟ ಗುಂಪು

ಶನಿಯ ಆಸುಪಾಸನ್ನು ಹುಣ್ಣಿಮೆಯ ನಂತರದ ದಿನಗಳಲ್ಲಿ ಗಮನಿಸಿ. ಅದು ಆಕಾಶಗಂಗೆಯ ಕೇಂದ್ರಭಾಗ; ಅಲ್ಲಿ ಅನೇಕ ನೆಬ್ಯುಲಾಗಳೂ ಮತ್ತು ನಕ್ಷತ್ರಗುಚ್ಛಗಳೂ ಇವೆ. ಅದರ ಪಕ್ಕದಲ್ಲಿ ವೃಶ್ಚಿಕರಾಶಿ; ಸ್ವಲ್ಪ ಉತ್ತರಕ್ಕೆ ಭೀಮ (ಹರ್ಕ್ಯುಲೆಸ್), ಉರಗಧರ (ಓಫಿಯೂಕಸ್) ಈ ಪುಂಜಗಳನ್ನೂ ನೋಡಬಹುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ, ದಕ್ಷಿಣದಲ್ಲಿ ಕಿನ್ನರ (ಸೆಂಟಾರೆಸ್), ಸದರ್ನ್ ಕ್ರಾಸ್ (ತ್ರಿಶಂಕು) – ಇವುಗಳನ್ನು ಕಾಣಬಹುದು. ನೆತ್ತಿಯ ಮೇಲೆ ಸಿಂಹರಾಶಿ ಇರುತ್ತದೆ.

ಈ ತಿಂಗಳ ೨೧ರಂದು ದಕ್ಷಿಣಾಯನ; ಸೂರ್ಯ ಉತ್ತರದ ಗರಿಷ್ಠ ಬಿಂದುವನ್ನ ಮುಟ್ಟಿ ಹಿಂದಿರುಗುವ ದಿನ. ಅಂದರೆ ಹಗಲಿನ ಅವಧಿ ಗರಿಷ್ಠ. ಹೆಸರುಗಳಲ್ಲಿನ ಒಂದು ವಿಚಿತ್ರವನ್ನು ಗಮನಿಸಬಹುದು. ೨೧ರಂದು ಸೂರ್ಯ ಕರ್ಕಾಟಕ ಸಂಕ್ರಾಂತಿ ವೃತ್ತದ ಮೇಲಿರುವ ಸ್ಥಳಗಳಲ್ಲಿ ಮಧ್ಯಾಹ್ನ ನೆತ್ತಿಯ ಮೇಲೆ ಇರುತ್ತದೆ. ಆದ್ದರಿಂದ ಸೂರ್ಯ ಕರ್ಕಾಟಕ ರಾಶಿಯಲ್ಲಿದೆ ಎಂದು ಹೇಳಬಹುದೇ? ಹಾಗಿದ್ದಲ್ಲಿ ಅದೇ ಸಂಜೆ ಶುಕ್ರ ಕರ್ಕಾಟಕ ರಾಶಿಯಲ್ಲಿ ಹೇಗೆ ಕಾಣಲು ಸಾಧ್ಯ? ಇದು "ಕರ್ಕಾಟಕ ಸಂಕ್ರಾಂತಿ ವೃತ್ತ" ಎಂದು ಹೆಸರಿಟ್ಟ ಸಮಯ ವನ್ನು ಸೂಚಿಸುತ್ತದೆ.

ಜೂನ್ ೨೭ರಂದು ಬೂಟಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠವಿದೆ. ಸಹದೇವ (ಬೂಟೆಸ್) ಪುಂಜದಿಂದ ಹೊರಟಂತೆ ಕಾಣುವ ಉಲ್ಕೆಗಳೆಲ್ಲಾ ಪಾನ್ಸ್ – ವಿನ್ನೆಕೆ ಎಂಬ ಧೂಮಕೇತು ಬಿಟ್ಟು ಹೋದ ಧೂಳು ಮತ್ತು ಬಂಡೆಯ ತುಣುಕುಗಳು. ಇದು ಸುಮಾರು ಆರು ವರ್ಷಗಳಿಗೊಮ್ಮೆ ಸೂರ್ಯನನ್ನು ಸುತ್ತುತ್ತದೆ. ಈ ವೃಷ್ಟಿಯಲ್ಲಿ ಗಂಟೆಗೆ ಸುಮಾರು ೧೦ – ೧೫ ಉಲ್ಕೆಗಳು ಮುಂಜಾವಿನಲ್ಲಿ ಕಾಣುವುವು.

**ಖಗೋಳ ದಿನಚರಿ**

೧ ಶನಿ – ಚಂದ್ರ ಜೋಡಿ
೨ ಭೂಮಿ – ಚಂದ್ರ ನಡುವೆ ಗರಿಷ್ಠ ದೂರ; ಮಂಗಳ – ಚಂದ್ರ ಜೋಡಿ
೬ ಚಾಂದ್ರಮಾಸದ ಕೊನೆಯ ಪಾದ
೮ ಶುಕ್ರ – ಪುನರ್ವಸು ಜೋಡಿ
೧೨ ಚಂದ್ರ – ರೋಹಿಣಿ ಜೋಡಿ
೧೪ ಅಮಾವಾಸ್ಯೆ ೦೦:೨೪ಕ್ಕೆ
೧೫ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೧೬ ಚಂದ್ರ– ಶುಕ್ರ ಜೋಡಿ
೧೮ ಚಂದ್ರ– ಶುಕ್ರ– ಪ್ರೆಸಿಪಿ ನಕ್ಷತ್ರಗುಚ್ಛ ಪುಟ್ಟ ಗುಂಪು
೨೦ ಶುಕ್ರ– ಪ್ರೆಸಿಪಿ ಜೋಡಿ; ಚಾಂದ್ರಮಾಸದ ಮೊದಲ ಪಾದ
೨೧ ದಕ್ಷಿಣಾಯನ ೧೫;೩೦ಕ್ಕೆ
೨೪ ಗುರು – ಚಂದ್ರ ಜೋಡಿ
೨೭ ಬೂಟಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೮ ಶನಿ ಗ್ರಹದ ವಿಯುತಿ; ಶನಿ – ಹುಣ್ಣಿಮೆ ಚಂದ್ರ ಜೋಡಿ ಮಂಗಳ ಗ್ರಹದ ಹಿನ್ನಡೆ ಆರಂಭ
೩೦ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ; ಮಂಗಳ – ಚಂದ್ರ ಜೋಡಿ

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



# ಸಿರಿಯಾ : ರೌರವ ನರಕ

ಪಶ್ಚಿಮ ಏಷ್ಯಾದ ಭೀಕರ ಅಶಾಂತಿ ಪರಿಸ್ಥಿತಿಗೆ ಅಮೆರಿಕಾದ ಘೋಷಿತ ಮತ್ತು ಅಘೋಷಿತ ಷಡ್ಯಂತ್ರಗಳು ಕಾರಣವೆಂದು ವಿಶ್ವಕ್ಕೆಲ್ಲಾ ತಿಳಿದಿದೆ. ಇರಾಕ್, ಲೆಬನಾನ್, ಲಿಬ್ಯಗಳ ಸರದಿಯ ನಂತರ ಈಗ ಸಿರಿಯಾದ ಧ್ವಂಸ ಜರುಗುತ್ತಿದೆ. ಒಂದು ಕಡೆ ಅಮೆರಿಕಾದ ನೇರ ಆಕ್ರಮಣ, ಇನ್ನೊಂದು ಕಡೆ ಐ.ಎಸ್. ಉಗ್ರರ ಭಯೋತ್ಪಾದನೆ ಮತ್ತು ಕೊಲೆಗಳು : ಇದು ಸಿರಿಯಾದ ಇಂದಿನ ವಸ್ತುಸ್ಥಿತಿ. ಉಗ್ರರು ನೆಲೆಸಿರುವ ಕಡೆಗಳಲ್ಲಿ ಅವರ ವಿರುದ್ಧದ ಕಾರ್ಯಾಚರಣೆಯ ವೇಳೆ ಬಾಂಬುಗಳು ಸಿಡಿಯುತ್ತವೆ, ಜೀವಹಾನಿಯಾಗುತ್ತದೆ. ವಿಶ್ವಸಂಸ್ಥೆಯು ಅಮೆರಿಕಾದ ಆಕ್ರಮಣದ ಬಗ್ಗೆ ಈವರೆಗೂ ಚಕಾರವೆತ್ತಿಲ್ಲ. ಸಿರಿಯಾದ ಅಧ್ಯಕ್ಷರ ಪದಚ್ಯುತಿಯು ಅಮೆರಿಕಾದ ಆಕಾಂಕ್ಷೆ. ಅದು ಉದ್ಧಟತನ ಮತ್ತು ಸಿರಿಯಾದಲ್ಲಿ ಅತಿಕ್ರಮಣ. ಸಿರಿಯಾದಿಂದ ಉಗ್ರರನ್ನು ಹೊಡೆದೋಡಿಸಲು ಸಿರಿಯಾದ ಚುನಾಯಿತ ಸರ್ಕಾರ ಯತ್ನಿಸುತ್ತಿದೆ. ಈ ಬಿಕ್ಕಟ್ಟಿನಲ್ಲಿ ಸಿರಿಯಾದ ಮಕ್ಕಳು, ಮಹಿಳೆಯರು, ವೃದ್ಧರು, ಆಸ್ಪತ್ರೆಗಳು, ಎಲ್ಲಾ ಬಾಂಬು ದಾಳಿಗೆ ಸಿಲುಕಿವೆ. ಈಗಲಾದರೂ ವಿಶ್ವಸಂಸ್ಥೆ ಕಣ್ತೆರೆದು ಮಧ್ಯಪ್ರವೇಶ ಮಾಡಬೇಕಾಗಿದೆ. ಸಿರಿಯಾ ಸರ್ಕಾರವೇ ದುರಂತಗಳಿಗೆ ಕಾರಣವೆಂದು ಅಬ್ಬರಿಸುತ್ತಿರುವ ಅಮೆರಿಕಾದ ಸರ್ಕಾರವು ಅಮಾನವೀಯವಾಗಿ ನಡೆದುಕೊಳುತ್ತಿದೆ.

ಸಿರಿಯಾ ದೇಶದಲ್ಲಿನ ಘೌಟಾನಗರ ಪ್ರಸ್ತುತ ಮಕ್ಕಳ ಪಾಲಿಗೆ ಭೂಮಿಯ ಮೇಲಿನ ನರಕದಂತಾಗಿದೆಯೆಂದು, ಇದು ಅಂತರ್ಯುದ್ಧವಲ್ಲ, ಸಿರಿಯಾದ ಮಕ್ಕಳ ಮೇಲಿನ ಘೋರ ಯುದ್ಧವೆಂದು ಯೂನಿಸೆಫ್ ಅಭಿಪ್ರಾಯಪಟ್ಟಿದೆ. ಅದಕ್ಕೆ ಕಾರಣವೆಂದರೆ ಕಳೆದ ವರ್ಷದಲ್ಲಿ ಸಾವಿರ ಮಕ್ಕಳು ಸಾವನ್ನಪ್ಪಿದ್ದು. ಈ ವರ್ಷದ ಎರಡೇ ತಿಂಗಳೊಳಗೆ ಸಾವಿರ ಮಕ್ಕಳ ಪ್ರಾಣ ಹಾನಿಯಾಗಿದೆ. ಅಮೆರಿಕಾ ಮತ್ತು ವಿಶ್ವಸಂಸ್ಥೆ ಕಣ್ಣು ಮುಚ್ಚಿವೆ.

ಬದುಕಿರುವವರಿಗೆ ಅನ್ನಕ್ಕೆ ಗತಿಯಿಲ್ಲ. ಗಾಯಗೊಂಡವರಿಗೆ ಚಿಕಿತ್ಸೆ ಲಭ್ಯವಾಗುತ್ತಿಲ್ಲ. ಔಷಧಗಳ ಸೌಕರ್ಯವೂ ಇಲ್ಲ. ಪುನರ್ವಸತಿ ಶಿಬಿರಗಳೆಲ್ಲ ಕಿಕ್ಕಿರಿದಿರುವುದರಿಂದ ಪಾರ್ಕ್‌ಗಳಲ್ಲಿ, ಬೀದಿಗಳಲ್ಲಿನ ಟೆಂಟ್‌ಗಳ ಕೆಳಗೆ ಬದುಕು ದೂಡುತ್ತಿರುವವರ ಸಂಖ್ಯೆಯೂ ಬಹಳಷ್ಟಿದೆ. ವಿಸ್ವಸಂಸ್ಥೆಯ ಮೂಲಕ ದೊರೆಯಬೇಕಾದ ಸಹಾಯವೂ ಅವರಿಗೆ ಸಿಗುವ ಸಾಧ್ಯತೆಗಳಿಲ್ಲ. ಪ್ರಸ್ತುತ ಘೌಟಾವೊಂದರಲ್ಲೇ ಲಕ್ಷಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಚಿಣ್ಣಾರಿಗಳು ತಕ್ಷಣದ ಸಹಾಯಕ್ಕಾಗಿ ಚಾತಕ ಪಕ್ಷಿಯಂತೆ ಕಾಯುತ್ತಿದ್ದಾರೆ.

ಕೆಂಪನೆಯ ಸ್ವೆಟರ್, ಗುಂಗುರು ತಲೆಕೂದಲು, ಬೆಚ್ಚನೆಯ ರಗ್ಗಿನ ಕೆಳಗೆ ವರ್ಷದ ಬಾಲಕ ನಿದ್ರೆ ಹೋಗುತ್ತಿರುವಂತಿದೆ. ಆಂಬ್ಯುಲೆನ್ಸ್‌ನಿಂದ ಅವನನ್ನು ಇಳಿಸುತ್ತಿದ್ದಂತೆ ಕೆನ್ನೆಯನ್ನು ಸವರಿ ಮುದ್ದಾಡುತ್ತಲೇ ತಲೆಯಿಂದ ಧಾರೆಯಾಗಿ ಹರಿಯುತ್ತಿದ್ದ ರಕ್ತವನ್ನು ನೋಡಿ ತಕ್ಷಣದಲ್ಲೇ ಚಿಕಿತ್ಸೆಗೆ ವ್ಯವಸ್ಥೆ ಮಾಡಿದಳು ಅಲ್ಲಿನ ನರ್ಸ್.

ಆಕೆಯಲ್ಲಿ ಎಂತಹುದೇ ಗಾಬರಿಪಡುವಂತಹ ಮನಃಸ್ಥಿತಿ ಇಲ್ಲ. ಕೆಲವು ವರ್ಷಗಳಿಂದ ಸಾಮಾನ್ಯವೆನಿಸುತ್ತಿರುವ ದೃಶ್ಯಗಳಿವು. ಆದಾಗ್ಯೂ ಆಕೆಯಲ್ಲಿನ ತಾಯಿ ಮಮಕಾರ ಕಂದಮ್ಮಗಳನ್ನು ನೋಡಿದಾಕ್ಷಣ ವಿಲವಿಲ ಒದ್ದಾಡುವಂತಾಗುತ್ತದೆ. ಅದಕ್ಕಾಗಿಯೇ ಕೆನ್ನೆಗೆ ಮುದ್ದು, ಬದುಕಿ ಉಳಿದರೆ ಆನಂದದಿಂದ ಮತ್ತೊಂದು ಮುದ್ದು, ಇಲ್ಲವಾದರೆ ಕಣ್ಣೀರಿನೊಂದಿಗೆ ವಿದಾಯದ ಇನ್ನೊಂದು ಮುದ್ದು.

ಆಗಾಗ್ಗೆ ಇದೆಲ್ಲವೂ ಮಾಮೂಲು ಎಂದುಕೊಂಡರೂ ಹೃದಯವಂತಿಕೆಯ ಭಾವೋದ್ವೇಗವನ್ನು ತಡೆಯಲಾಗುವುದಿಲ್ಲ. ಯಾರಿಗೆ ಗೊತ್ತು, ನಾಳೆ ತಾನೇ ಇಲ್ಲದಿರಬಹುದು. ಏಕೆಂದರೆ ಇಲ್ಲಿನ ಆಸ್ಪತ್ರೆಗಳು, ವೈದ್ಯಕೀಯ ಸಿಬ್ಬಂದಿ ಕೂಡ ದಾಳಿಯನ್ನು ತಪ್ಪಿಸಿಕೊಳ್ಳಲಾಗದಂತಹ ಪರಿಸ್ಥಿತಿ.

ಘೌಟಾದಲ್ಲಿ ಎಷ್ಟೋ ಆಂಬ್ಯುಲೆನ್ಸ್ ವಾಹನಗಳೇ ಧ್ವಂಸವಾಗಿವೆ. ಅದರಿಂದಾಗಿ ಸೂಕ್ತ ಸಮಯಕ್ಕೆ ಚಿಕಿತ್ಸೆ ದೊರೆಯದೆ ಗಾಯಗೊಂಡ ಬಹಳಷ್ಟು ಮಂದಿ ಆಸ್ಪತ್ರೆಯನ್ನು ತಲುಪುವ ಮುನ್ನವೇ ಪ್ರಾಣ ಬಿಡುತ್ತಿದ್ದಾರೆಂದು ವೈದ್ಯರು ಕಳವಳ ವ್ಯಕ್ತಪಡಿಸುತ್ತಾರೆ. ವೈದ್ಯರಿಗೇ ಭದ್ರತೆ ಇಲ್ಲದಿರುವ ಕಡೆ ಇನ್ನು ಪ್ರಜೆಗಳ ಪ್ರಾಣವನ್ನು ಕಾಪಾಡುವವರಾರು?

**ವಿ. ಹನುಮಂತಪ್ಪ**

ಸಂಕ್ಷಿಪ್ತದಲ್ಲಿ ಹೇಳುವುದಾದರೆ... ಪ್ರಾಣ ಕಳೆದುಕೊಂಡರೆ ಅಂತಿಮ ಸಂಸ್ಕಾರಗಳಿಲ್ಲ. ಗಾಯಗೊಂಡರೆ ಚಿಕಿತ್ಸೆಯಿಲ್ಲ, ಔಷಧಗಳಿಲ್ಲ. ಪ್ರಾಣದೊಂದಿಗೆ ಬದುಕಿದ್ದರೆ ತಿನ್ನಲು ಆಹಾರವಿಲ್ಲ. ಹಿರಿಯರಿಗೆ ನಾಳಿನ ಬಗ್ಗೆ ಭರವಸೆ ಮೂಡಿಸುವ ಮಕ್ಕಳಿಲ್ಲ. ಮಕ್ಕಳನ್ನು ಪೋಷಿಸಲು ತಂದೆ ತಾಯಂದಿರಿಲ್ಲ. ಇದು ಪ್ರಸ್ತುತ ಸಿರಿಯಾದ ದಾರುಣ ಚಿತ್ರಣ.

ವಿಶ್ವದ ನಾನಾ ದೇಶಗಳಿಂದ ಅನೇಕ ಮಂದಿ ಪತ್ರಕರ್ತರು ಅಲ್ಲಿಗೆ ಹೋದರು. ಪ್ರತ್ಯಕ್ಷ ವರದಿಯ ಸಂದರ್ಭದಲ್ಲಿ ಅಲ್ಲಿನ ಪರಿಸ್ಥಿತಿಗಳನ್ನು ವಿವರಿಸುತ್ತಿರುವಾಗ ಕೆಲವರಿಗೆ ಕಣ್ಣೀರನ್ನು ನಿಯಂತ್ರಿಸಿಕೊಳ್ಳಲಾಗಿಲ್ಲ, 'ಇಲ್ಲಿನ ಘಟನೆಗಳನ್ನು ವರದಿ ಮಾಡಲು ಬಹಳಷ್ಟು ಧೈರ್ಯ ಬೇಕು. ಬಾಂಬ್‌ಗಳ ದಾಳಿಯನ್ನು ಎದುರಿಸಲಿಕ್ಕಲ್ಲ; ಪುಟಾಣಿಗಳ ಅತಿಘೋರ ಪರಿಸ್ಥಿತಿಯನ್ನು ನೋಡಿ ಸಹಿಸಿಕೊಳ್ಳಲು' ಎನ್ನುತ್ತಾಗಳಗಳನೆ ಕಣ್ಣೀರು ಸುರಿಸಿದ ಪತ್ರಕರ್ತರೂ ಉಂಟು.

**ಆಗಲೂ... ಈಗಲೂ... ಮಕ್ಕಳೇ...**

ಈಗಷ್ಟೇ ಅಲ್ಲ, ಮೊದಲಿನಿಂದಲೂ ಸಿರಿಯಾದ ಪರಿಸ್ಥಿತಿಯನ್ನು ಮಕ್ಕಳೇ ಪ್ರಪಂಚಕ್ಕೆ ಸಾರಿ ಹೇಳುತ್ತಿದ್ದಾರೆ. ಆ ಪ್ರದೇಶದಲ್ಲಿ ಸುದ್ದಿ ಸಂಗ್ರಹಿಸಲು ಹೋದ ಓರ್ವ ಟರ್ಕಿಶ್ ಫೋಟೋಗ್ರಾಫರ್‌ಗೆ ಮುದ್ದುಮುದ್ದಾಗಿ ಇದ್ದ ನಾಲ್ಕು ವರ್ಷದ ಪುಟಾಣಿ ಕಂಡಳು. ಒಂದು ಫೋಟೋ ಕ್ಲಿಕ್ಕಿಸೋಣವೆಂದು ಕ್ಯಾಮೆರಾವನ್ನು ಸಿದ್ಧಪಡಿಸಿಕೊಂಡನು. ಕ್ಯಾಮೆರಾ



ಕ್ಲಿಕ್ ಅನ್ನುವುದರೊಳಗೆ ಆ ಪುಟಾಣಿಯ ಮುಖದಲ್ಲಿ ತೀವ್ರ ದುಗುಡದ ಛಾಯೆ. ಎರಡೂ ಕೈಗಳನ್ನು ಮೇಲಕ್ಕೆತ್ತಿ, ತುಟಿಗಳನ್ನು ಬಿಗಿ ಹಿಡಿದುಕೊಂಡು ಬಾಲಕಿಯು ಆ ರೀತಿ ಭಯದಿಂದ, ನೋವಿನಿಂದ ಏಕೆ ಪೋಸ್‌ನ್ನಿತ್ತಳೋ ಆತನಿಗೆ ಮೊದಲು ಅರ್ಥವಾಗಲಿಲ್ಲ.

ನಂತರ ಗೊತ್ತಾಯಿತು, ತನ್ನ ಕ್ಯಾಮೆರಾವನ್ನು ಬಂದೂಕು ಎಂದು ಭಾವಿಸಿ ಶರಣಾಗತಿ ಆಗಲು ಆಕೆ ಕೈಗಳನ್ನು ಮೇಲಕ್ಕೆತ್ತಿದ್ದಳೆಂದು. ನಾಲ್ಕು ವರ್ಷದ ಆ ಬಾಲಕಿಯ ಮುಖದಲ್ಲಿ ಸಾವಿನ ಭಯವನ್ನು ಮೊದಲ ಸಾರಿ ನೋಡಿದ ಆ ಫೋಟೋಗ್ರಾಫರ್ ತುಂಬ ದುಃಖಿತನಾದನು. ೨೦೧೪ರ ಡಿಸೆಂಬರ್‌ನಲ್ಲಿ ನಡೆದ ಘಟನೆ ಇದು. ೨೦೧೫ರ ಮೇ ತಿಂಗಳಿನಲ್ಲಿ ಆ ಫೋಟೋವನ್ನು ಅವನ ಸ್ನೇಹಿತರೊಬ್ಬರು ಟ್ವೀಟ್ ಮಾಡಿದ್ದರಿಂದ ಒಂದು ದಿನದೊಳಗೆ ವೈರಲ್ ಆಯಿತು.

ಆ ನಂತರ ಕೆಲವು ದಿನಗಳಲ್ಲೇ ಮೂರು ವರ್ಷದ ಅಲಾನ್ ಕುರ್ದಿಯಾ ಎಂಬ ಪುಟಾಣಿಯ ಮೃತದೇಹ ಮಧ್ಯಧರಾ ಸಮುದ್ರದ ತೀರಕ್ಕೆ ಅಪ್ಪಳಿಸಿಕೊಂಡು ಪ್ರತ್ಯಕ್ಷವಾದಾಗ ದೇಶಗಳೆಲ್ಲ ಸ್ತಂಭೀಭೂತವಾದವು. ೨೦೧೫ರ ಸೆಪ್ಟೆಂಬರ್‌ನಲ್ಲಿ ಪತ್ರಿಕೆಗಳ ಮುಖಪುಟದಲ್ಲಿ ಪ್ರಕಟಗೊಂಡ ಆ ಚಿತ್ರವು ಸಿರಿಯಾದ ಮಕ್ಕಳು ಪ್ರಾಣವನ್ನು ಉಳಿಸಿಕೊಳ್ಳಲು ಹೇಗೆ ಓಡಿಹೋಗುತ್ತಿದ್ದಾರೆಂಬುದನ್ನು ಕಣ್ಣಿಗೆ ಕಟ್ಟುವಂತೆ ಮಾಡಿತ್ತು. ಟರ್ಕಿಯಿಂದ ಗ್ರೀಕ್ ದ್ವೀಪವಾದ ಕೋಸ್‌ನತ್ತ ಹೊರಟ ದೋಣಿ ಐದು ನಿಮಿಷದೊಳಗೇ ಮುಳುಗಿತು. ಎಂಟು ಮಂದಿಗೆ ಸ್ಥಳಾವಕಾಶವಿದ್ದ ಆ ದೋಣಿಯಲ್ಲಿ ಹದಿನಾರು ಮಂದಿಯನ್ನು ತುಂಬಿದ್ದರ ಪರಿಣಾಮವಿದು. ಅಲಾನ್ ಕುರ್ದಿಯೊಂದಿಗೆ ಅವನ ತಾಯಿ, ಸಹೋದರ ಕೂಡ ಪ್ರಾಣ ಕಳೆದುಕೊಂಡರು. ಆ ರೀತಿ ದೇಶಬಿಟ್ಟು ಓಡಿಹೋಗುತ್ತಾ ಸಾವಿರಾರು ಮಂದಿ ಸಮುದ್ರದಲ್ಲಿ ಪ್ರಾಣ ಬಿಟ್ಟಿದ್ದಾರೆ. 'ಅಪ್ಪಾಜಿ... ನನ್ನನ್ನು ಹಿಡಿದುಕೋ... ಅಪ್ಪಾ... ಅಪ್ಪಾಜೀ' ಎನ್ನುತ್ತಿದ್ದ ಹತ್ತು ವರ್ಷದ ಅಬ್ದುಲ್ ಬಾಸಿತ್‌ನ ಆಕ್ರಂದನದ ವೀಡಿಯೊ ಇಂಟರ್‌ನೆಟ್ ನಲ್ಲಿ ಮತ್ತೊಂದು ಸಂಚಲನಕ್ಕೆ ಗ್ರಾಸವಾಯಿತು. ಇದ್ಲಿಬ್ ಪಟ್ಟಣದಲ್ಲಿ ಬ್ಯಾರೆಲ್ ಬಾಂಬ್ ಸ್ಫೋಟಗೊಂಡು ಅಬ್ದುಲ್‌ನ ಎರಡೂ ಕಾಲುಗಳು ಮುರಿದುಹೋದವು. ಸುತ್ತಲೂ ಹೊಗೆಯ ಮಧ್ಯೆ ನಿಂತುಕೊಳ್ಳಲಾಗದೆ ತಂದೆಯನ್ನು ಕರೆಯುತ್ತಾ ಹಿಡಿದುಕೊ ಎಂದು ಕೂಗಾಡುತ್ತಿದ್ದುದನ್ನು ಕೇಳಿ ಕಣ್ಣೀರು ಸುರಿಸಿದವರೇ ಹೆಚ್ಚು. ಆ ದಾಳಿಯಲ್ಲಿ ಅಬ್ದುಲ್‌ನ ತಾಯಿ, ತಂಗಿ ಅಸುನೀಗಿದರು. ಇಬ್ಬರು ಅಕ್ಕಂದಿರು ಶ್ವಾಸಕೋಶಗಳಿಗೆ ತೊಂದರೆಯಾಗಿ ತೀವ್ರ ಅನಾರೋಗ್ಯಕ್ಕೊಳಗಾದರು.

**ಪ್ಲೀಸ್... ನಮ್ಮನ್ನು ರಕ್ಷಿಸಲಾರಿರಾ...** ಎನ್ನುವ ಸಿರಿಯಾ ಬಾಲಕರ ಟ್ವೀಟ್‌ಗಳಿಂದ ಟ್ವಿಟರ್ ಮೊಳಗುತ್ತಿದೆ. ಗಾಯಗಳಿಂದ ರೋದಿಸುತ್ತಾ, ನೀರು ತುಂಬಿರುವ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ, ತಮ್ಮನ್ನು ರಕ್ಷಿಸಿರೆಂದು ಬೇಡಿಕೊಳ್ಳುತ್ತಾ ಅವರು ಪೋಸ್ಟ್ ಮಾಡಿರುವ ವೀಡಿಯೋಗಳನ್ನು ನೋಡಿದಾಗ ಯಾರ ಕರುಳಾದರೂ ಚುರುಕ್ ಎನ್ನದಿರದು. ರಾಕೆಟ್ ದಾಳಿಯಲ್ಲಿ ನಮ್ಮ ಮನೆ ಕುಸಿದುಬಿತ್ತು, ಕನ್ನಡಿಯ ಗಾಜು ಒಡೆದು ಚೆಲ್ಲಾಪಿಲ್ಲಿಯಾದ್ದರಿಂದ ನನ್ನ ಕಣ್ಣು ಹೋಯಿತು, ಒಂದು ಕಣ್ಣಲ್ಲಿ ಕಣ್ಣೀರು, ಮತ್ತೊಂದು ಕಣ್ಣಿನಲ್ಲಿ ರಕ್ತವು ಹರಿಯುತ್ತಿರುವಾಗ ಓರ್ವ ಪುಟ್ಟ ಕಂದನ ಆಕ್ರಂದನ. 'ತಿನ್ನಲು ಏನನ್ನಾದರೂ ತರುತ್ತೇನೆಂದು ಹೋದ ತಂದೆ ಬರಲೇ ಇಲ್ಲ. ಬಾಂಬ್ ಸ್ಫೋಟಗೊಂಡು ಅಪ್ಪ ಸತ್ತುಹೋದರೆಂದು ಅಮ್ಮ ಅಳುತ್ತಿದ್ದಾಳೆ. ಹಸಿವಿನಿಂದ ತಂಗಿ ಗೋಳಾಡುತ್ತಿದ್ದಾಳೆ. ನಾನು ಏನು ಮಾಡಲಿ' ಎಂಬುದು ಓರ್ವ ಅಣ್ಣನ ದಯನೀಯ ಸ್ಥಿತಿ.

ಕೆಲವು ತಿಂಗಳುಗಳ ಹಿಂದೆ ಕೆಲವೇ ದಿನಗಳಲ್ಲೇ ಪೂರ್ವ ಘೌಟಾ ನಗರದಲ್ಲಿ ಸಾವಿರಕ್ಕೂ ಹೆಚ್ಚು ಮಂದಿ ಸಾವನ್ನಪ್ಪಿ, ಐದು ಸಾವಿರಕ್ಕೂ ಹೆಚ್ಚು ಮಂದಿ ಗಾಯಗೊಂಡರು. ಅಂತರ್ಯುದ್ಧದ ಕಾರಣದಿಂದಾಗಿ ನಗರಗಳೆಲ್ಲವೂ ಯಾರೋ ಒಬ್ಬರ ಅಧೀನದಲ್ಲಿವೆ. ಅದರಿಂದಾಗಿ ಜನರು ಊರನ್ನು ಬಿಟ್ಟುಹೋಗುವಂತಿಲ್ಲ. ತಮ್ಮ ಮನೆಗಳಲ್ಲೇ ತಾವು ಬಂಧಿಯಾಗಿರಬೇಕಾದಂತಹ ಸ್ಥಿತಿ. ನಿತ್ಯದ ಅವಶ್ಯಕ ವಸ್ತುಗಳಿಗೂ ಐ.ಎಸ್.ನ ದರ್ಪದಿಂದ ನಲುಗಬೇಕಾಗಿದೆ. ಅವರು ಕೊಟ್ಟಿದ್ದನ್ನು, ಕೊಟ್ಟಷ್ಟೇ ತೆಗೆದುಕೊಂಡು ಹೋಗಬೇಕು. ಎದುರು ಪ್ರಶ್ನಿಸಿದವರು ಬಂದೂಕುಗಳಿಗೆ ಬಲಿಯಾಗುತ್ತಿರುವುದನ್ನು ನೋಡುತ್ತಾ ಮೌನವಾಗಿ, ಅಸಹಾಯಕರಾಗಿ ಜೀವಚ್ಛವಗಳಂತೆ ಆ ಜನ ಬದುಕುತ್ತಿದ್ದಾರೆ.

ಬಾಂಬ್‌ಗಳ ಭೀಕರ ಧ್ವನಿಯಿಂದ ರಾತ್ರಿಯಲ್ಲಿ ಭೀತಿಗೊಂಡು ಎದ್ದೇಳುವಂತಾಗಿದೆ. ೧೫ ನಿಮಿಷಗಳಲ್ಲಿ ೧೧ ಬಾಂಬ್‌ಗಳು ಸ್ಫೋಟಗೊಂಡಿವೆ. "ನನ್ನ ಫ್ರೆಂಡ್ಸ್ ಸತ್ತಿದ್ದಾರೆ. ನಾನು ಎಷ್ಟುಕಾಲ ಇರುತ್ತೇನೆಂಬುದು ಗೊತ್ತಿಲ್ಲ. ಯುದ್ಧವು ನಮ್ಮ ಮನೆಯವರೆಗೂ ಬಂದಿದೆ. ಇದೇ ನನ್ನ ಕೊನೇ ಟ್ವೀಟ್ ಆಗಬಹುದು..." ಹೀಗೆ ಹೃದಯ ಹಿಂಡುವಂತಹ ಟ್ವೀಟ್‌ಗಳಿಂದ ಬನಾ ಲಕ್ಷಾಂತರ ಜನರ ಅಭಿಮಾನವನ್ನು ಸೂರೆಗೊಂಡಳು. ಎಷ್ಟೋ ಮಂದಿ ಗಣ್ಯರು ಸ್ಪಂದಿಸಿ ರೀಟ್ವೀಟ್ ಮೂಲಕ ಆಕೆಗೆ ಧೈರ್ಯವನ್ನು ತುಂಬಿದರು. ಅಮೆರಿಕ ಅಧ್ಯಕ್ಷರಿಗೂ ಆಕೆ ಬಹಿರಂಗ ಪತ್ರ ಬರೆದಿದ್ದಳು.

ದಾರಾ ನಗರದಲ್ಲಿ ೧೩ ವರ್ಷದ ಹಂಜಾಅಲಿ ಅಲ್ ಖತಿಬ್ ಎಂಬುವವನನ್ನು ಸಿಗರೇಟ್‌ಗಳಿಂದ ಸುಟ್ಟು, ಜನನಾಂಗವನ್ನು ಕುಯ್ದು ನಾನಾ ಚಿತ್ರಹಿಂಸೆಗಳಿಗೆ ಗುರಿಪಡಿಸಿ ಸಾಯಿಸಿದ್ದರಿಂದ ಜನಾಕ್ರೋಶ ಭುಗಿಲೆದ್ದಿತು. ಚಳುವಳಿಯು ತೀವ್ರಗೊಂಡಿತು. ಮೊದಲಿಗೆ ಸರ್ಕಾರ, ಬಂಡುಕೋರರು, ಕುರ್ದುಗಳು, ಐಎಸ್ ಉಗ್ರಗಾಮಿಗಳು – ಹೀಗೆ ನಾಲ್ಕು ಪಕ್ಷಗಳ ಮಧ್ಯೆ ಶುರು ಆದ ಅಂತರ್ಯುದ್ಧ ವಿವಿಧ ಕೋನಗಳಲ್ಲಿ ವ್ಯಾಪಿಸಿತು. ಎಲ್ಲಕ್ಕೂ ಕೇಂದ್ರ ಬಿಂದು ಅಮೆರಿಕಾದ ದೈತ್ಯ ಸರ್ಕಾರವೇ ಆಗಿದೆ.

ಒಬ್ಬರು ದಾಳಿಯ ವಿರಾಮವನ್ನು ಪ್ರಕಟಿಸಿದರೆ, ಮತ್ತೊಬ್ಬರು ಆ ಒಪ್ಪಂದವನ್ನು ಉಲ್ಲಂಘಿಸಿ ದಾಳಿಗೆ ಮುಂದಾಗುತ್ತಿದ್ದಾರೆ. ಯಾರಿಗೂ ಅಲ್ಲಿ ನಡೆಯುತ್ತಿರುವ ಮಾರಣಹೋಮ ಪರ್ಯವಸಾನವಾಗುವಂತೆ ಕಾಣುತ್ತಿಲ್ಲ. ಹೋಗುತ್ತಿರುವ ಪ್ರಾಣಗಳು ಲೆಕ್ಕಕ್ಕಿಲ್ಲ. ಅನಾಥರಾಗುತ್ತಿರುವ ಎಳೆಯರ ಆಕ್ರಂದನ ಕೇಳುತ್ತಿಲ್ಲ. ಅಗ್ರದೇಶಗಳೇ ಎರಡು ಗುಂಪಿನ ಕಡೆ ಒಬ್ಬೊಬ್ಬರಂತೆ ಇರುವಾಗ ವಿಶ್ವಸಂಸ್ಥೆ ಮಾತ್ರ ಏನು ಮಾಡಬಲ್ಲದು? ಅದರಿಂದಾಗಿಯೇ ಸಿರಿಯಾ ಎಲ್ಲರ ಕೈಯಲ್ಲಿ ದಾಳವಾಗಿ ಮಾರ್ಪಟ್ಟಿದೆ.

ಏಳು ವರ್ಷಗಳಿಂದ ಮಾರಣಹೋಮ ಉಪಶಮನವಾಗಿಲ್ಲ. ನಗರಗಳೆಲ್ಲ ಮಣ್ಣುದಿಬ್ಬಗಳಾಗಿ ಮಾರ್ಪಡುತ್ತಿವೆ. ಮನುಷ್ಯರು ಶವಗಳ ರಾಶಿಗಳಂತಾಗುತ್ತಿದ್ದಾರೆ. ಈ ಅಂತರ್ಯುದ್ಧದ ಕುಲುಮೆಯಲ್ಲಿ ಸಿರಿಯಾದ ಭೂಭಾಗವೆಲ್ಲಾ ಸ್ಫೋಟಕಗಳು, ಬಾಂಬ್‌ಗಳಿಂದ ತುಂಬಿಹೋಗಿದೆ. ಸ್ಫೋಟಗೊಂಡು ಎಷ್ಟೋ ಮಂದಿಯ ಪ್ರಾಣಗಳನ್ನು ಬಲಿ ಪಡೆದಿರುವ ಬಾಂಬ್‌ಗಳಷ್ಟೇ ಅಲ್ಲದೆ, ಸ್ಫೋಟವಾಗದಂತೆಯೇ ಆ ಭೂಮಿಯ ಮೇಲೆ ಲೆಕ್ಕವಿಲ್ಲದಷ್ಟು ಬಾಂಬ್‌ಗಳಿವೆ ಎಂದು, ಅವೆಲ್ಲವುಗಳನ್ನು ತೊಲಗಿಸಲು ಕನಿಷ್ಠ ೪೦ ವರ್ಷಗಳು ಬೇಕಾಗಬಹುದೆಂದು ಹ್ಯಾಂಡಿಕ್ಯಾಪ್ ಇಂಟರ್‌ನ್ಯಾಷನಲ್ ಎಂಬ ಫ್ರೆಂಚ್ ಸಂಸ್ಥೆ ಪ್ರಕಟಿಸಿದೆ.

ಒಂದು ಅಪಘಾತ ನಡೆದರೆ ಅಯ್ಯೋ ಎನ್ನುತ್ತೇವೆ. ಒಂದು ಪ್ರಕೃತಿ ವಿಕೋಪ ಸಂಭವಿಸಿದರೆ ಪೀಡಿತರನ್ನು ಹೇಗೆ ರಕ್ಷಿಸಬೇಕು ಎಂದು ಆಲೋಚಿಸುತ್ತೇವೆ. ಆದರೆ... ಆದರೆ ನಮ್ಮ ಕಣ್ಣೆದುರೇ ಮನುಷ್ಯರ ಮಾರಣಹೋಮ ನಡೆಯುತ್ತಿದ್ದರೆ, ಕಂದಮ್ಮಗಳ ಪ್ರಾಣಗಳನ್ನು ಅಮಾನುಷವಾಗಿ ಬಲಿ ಕೊಡುತ್ತಿದ್ದರೆ, ಏಕೋ ವಿಶ್ವವೇ ತೆಪ್ಪಗೆ ಕೂತಂತಿದೆ. ಅಮೆರಿಕಾ ಪ್ರಚೋದಿತ ಉಗ್ರಗಾಮಿಗಳು, ಹಂತಕರು ತಮ್ಮ ಇಷ್ಟಬಂದಂತೆ ಅತ್ಯಂತ ಹೇಯವಾದ ಮಾರಣಕಾಂಡಕ್ಕೆ ಪೈಪೋಟಿ ನಡೆಸಿರುವಾಗ ಪ್ರಪಂಚ ಚುಟಿಪಿಟಿಕ್ಕೆಂದಿಲ್ಲ ಏಕೆ? ಬಾಂಬ್‌ಗಳ ದಾಳಿಯಲ್ಲಿ ಕಾಲುಕೈಗಳು ತುಂಡಾಗಿ ಬೀಳುತ್ತಿದ್ದರೆ, ಕಣ್ಣೆದುರೇ ಕರುಳಕುಡಿಗಳನ್ನು ಹತ್ಯೆಗೈಯ್ಯುತ್ತಿದ್ದರೆ ಭಯಭೀತರಾಗಿ ಮುದುಡಿಕೊಳ್ಳುತ್ತಿದ್ದಾರೆ ಆ ಪುಟಾಣಿಗಳು. ದೊಡ್ಡವರೇನೋ ಸರಿ, ಆ ಅಮಾಯಕ ಕಂದಮ್ಮಗಳು ಯಾವ ಪಾಪ ಎಸಗಿದ್ದಾರೆ? ಇನ್ನೂ ಎಷ್ಟು ವರ್ಷ ಈ ನರಮೇಧ...?

ವಿ. ಹನುಮಂತಪ್ಪ
ಜಿಲ್ಲೆ ಸಮಾಚಾರ ದಿನ ಪತ್ರಿಕೆ, ನಾಯಕ ಹಾಸ್ಟೆಲ್ ಕಾಂಪ್ಲೆಕ್ಸ್, ದಾವಣಗೆರೆ – ೫೭೭ ೦೦೨

# “ಐ ಸ್ಟಿಲ್ ಹೈಡ್ ಟು ಸ್ಮೋಕ್”
## ಮುಸುಕುಗಳನ್ನು ಕಳಚುವ ಸಿನಿಮಾ

**ಎಂ. ಅಬ್ದುಲ್ ರೆಹಮಾನ್ ಪಾಷ**



**ಪ್ರೇರಕ ಐತಿಹಾಸಿಕ ಹಿನ್ನೆಲೆ**

ಈಗ ಪೀಪಲ್ಸ್ ಡೆಮಾಕ್ರಟಿಕ್ ರಿಪಬ್ಲಿಕ್ ಆಫ್ ಆಲ್ಜೀರಿಯಾವು ಉತ್ತರ ಆಫ್ರಿಕಾದಲ್ಲಿ ಮೆಡಿಟರೇನಿಯನ್ ಸಮುದ್ರದ ಕರಾವಳಿಯಲ್ಲಿರುವ ಒಂದು ಸ್ವತಂತ್ರ ರಾಷ್ಟ್ರ. ಇಲ್ಲಿನ ಭಾಷೆ ಅರೇಬಿಕ್, ಧರ್ಮ ಇಸ್ಲಾಮ್. ಆಲ್ಜೀರಿಯಾದಲ್ಲಿ ನಡೆದ ಸಿವಿಲ್ ವಾರ್ ಅವಧಿಯಲ್ಲಿ ಸುಮಾರು ೧೯೯೫ರ ಹೊತ್ತಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಅಂಧತೆಯ ಪರಿಸ್ಥಿತಿಯಲ್ಲಿ ‘ಐ ಸ್ಟಿಲ್ ಹೈಡ್ ಟು ಸ್ಮೋಕ್’ ಚಿತ್ರದ ವಸ್ತುವನ್ನು ಹೆಣೆಯಲಾಗಿದೆ ಎನ್ನುವುದು ಒಂದು ವೈಶಿಷ್ಟ್ಯ.

**ನಿರ್ದೇಶಕಿ ರೇಹಾನಾ ಒಬೆರ್‌ಮೆಯರ್**

ಆಲ್ಜೀರಿಯಾದಲ್ಲಿ ೧೯೬೪ರಲ್ಲಿ ಹುಟ್ಟಿದ ರೇಹಾನಾ ಮೂಲತಃ ಒಬ್ಬ ರಂಗನಟಿ. ಆಲ್ಜೀರಿಯಾದ ಇನ್ಸ್‌ಟಿಟ್ಯೂಟ್ ಆಫ್ ಡ್ರಾಮ್ಯಾಟಿಕ್ ಆರ್ಟ್‌ನಲ್ಲಿ ತರಬೇತಿ ಮುಗಿಸಿದ ನಂತರ ಅವರು ಬೆಜಾಇಯ ಥಿಯೇಟರ್‌ನಲ್ಲಿ ೧೯೯೯ರವರೆಗೆ ಕೆಲಸ ಮಾಡಿದರು. ಹಲವು ರಂಗನಾಟಕಗಳನ್ನು ಬರೆದು ನಿರ್ದೇಶನವನ್ನೂ ಮಾಡಿದ್ದಾರೆ. ಎಲ್ಲದರಲ್ಲಿಯೂ ಪ್ರಖರವಾದ ಸ್ತ್ರೀವಾದ ಹಾಸುಹೊಕ್ಕು. ಮೇಲೆ ವಿವರಿಸಿದಂತೆ ೧೯೯೦ರ ದಶಕದಲ್ಲಿ ಆಲ್ಜೀರಿಯಾದಲ್ಲಿ ಭುಗಿಲೆದ್ದ ಪ್ರಕ್ಷುಬ್ಧ ವಾತಾವರಣದಲ್ಲಿ ಹಲವು ಪ್ರಗತಿಪರ ಕಲಾವಿದರು ಭೂಗತ ಹೋಗಬೇಕಾಯಿತು. ‘ಐ ಸ್ಟಿಲ್ ಹೈಡ್ ಟು ಸ್ಮೋಕ್’ ಚಿತ್ರದ ಚಿತ್ರಕಥೆಯನ್ನು ರಚಿಸಿದ ಸಂದರ್ಭವನ್ನು ವಿವರಿಸುತ್ತಾರೆ ರೇಹಾನಾ ಹೇಳುವ ಹಾಗೆ, ‘ಆಲ್ಜೀರಿಯನ್ ರಂಗಭೂಮಿಯ ಪ್ರಮುಖ ವ್ಯಕ್ತಿಯಾದ, ನಿರ್ದೇಶಕರು, ನಟರು ಮತ್ತು ನ್ಯಾಷನಲ್ ಥಿಯೇಟರ್ ನಿರ್ದೇಶಕರೂ ಆದ ಅಜ್ಜೆಡೀನ್ ಮೆಜೌಬಿ ಅವರು ಆಲ್ಜೀರ್ಸ್‌ನಲ್ಲಿ ರುಇ ಮೊಲೇರ್ ಎಂಬಲ್ಲಿ ಥಿಯೇಟರ್‌ನಿಂದ ಹೊರಬಂದ ಕೂಡಲೇ ಅವರನ್ನು ಹತ್ಯೆ ಮಾಡಲಾಯಿತು. ಇಡೀ ಗ್ರಾಮಕ್ಕೆ ಗ್ರಾಮವೇ ಹತ್ಯಾಕಾಂಡದ ದಳ್ಳುರಿಯಲ್ಲಿ ಭಸ್ಮವಾಗಿತ್ತು. ದೊಡ್ಡವರು ಮಕ್ಕಳನ್ನೂ ಬಿಡದೇ ಇಸ್ಲಾಮಿಸ್ಟ್ ಉಗ್ರವಾದಿಗಳು ಅತ್ಯಾಚಾರ ಮಾಡಿದರು, ಹೊಟ್ಟೆ ಬಗೆದು ಕರುಳನ್ನು ಹೊರ ಚೆಲ್ಲಿದರು, ಕುತ್ತಿಗೆಗಳನ್ನು ಗರಗಸದಿಂದ ಕುಯ್ದರು. ನನ್ನ ಜನರನ್ನು ಭಯೋತ್ಪಾದಕರು ಈಗಲೂ ಬಾಂಬುಗಳಿಂದ ದೌರ್ಜನ್ಯದಿಂದ ನಡುಗಿಸುತ್ತಿರುವಾಗ ಇದನ್ನು ಬರೆದು ಮನಸ್ಸನ್ನು ಹಗುರ ಮಾಡಿಕೊಳ್ಳಬೇಕಾಗಿದೆ’. ಇದರಲ್ಲಿ ಇರುವ ಪ್ರಮುಖ ಪಾತ್ರಗಳು ರೇಹಾನಾ ತಮ್ಮ ಸುತ್ತಮುತ್ತ ನೋಡಿದ ಸಂಬಂಧಿಕರು, ಸ್ನೇಹಿತೆಯರು, ನೆರೆಹೊರೆಯ ಹೆಣ್ಣುಮಕ್ಕಳ ನಿಜ ಜೀವನದಿಂದಲೇ ಪ್ರೇರಿತವಾಗಿವೆ. ಆದ್ದರಿಂದ ಅವು ಸಿನಿಮಾದಲ್ಲಿ ಅಷ್ಟೊಂದು ಜೀವಂತವಾಗಿವೆ ಎನ್ನುತ್ತಾರೆ ನಿರ್ದೇಶಕಿ. ಚಿತ್ರ ನೋಡಿದ ನಮಗೂ ಇದು ಅನಾಯಾಸ ಮನವರಿಕೆಯಾಗುತ್ತದೆ.

**ಬತ್ತಲೆಗೊಳ್ಳುವ ಸ್ತ್ರೀಯರು**

ಸಿನಿಮಾದ ಮುಖ್ಯ ಪಾತ್ರ ಮಧ್ಯವಯಸ್ಸಿನ ಮಹಿಳೆ ಫಾತಿಮಾ ಬೆಳಿಗ್ಗೆ ಮನೆಗೆಲಸ ಮುಗಿಸಿ ಕೆಲಸಕ್ಕೆ ಹೋಗಲು ನೋಡುತ್ತಿರುವಾಗ ಆಕೆಯ ಸೋಮಾರಿ ಗಂಡ ಅಷ್ಟು ಹೊತ್ತಿಗೇ ಆಕೆಯನ್ನು ಬಲವಂತದಿಂದ ಸೇರುವ ದೃಶ್ಯದಿಂದ ಕತೆ ಆರಂಭವಾಗುತ್ತದೆ. ಆಕೆ ಒಂದು ‘ಹಮಾಮ್’, ಎಂದರೆ ಸಾರ್ವಜನಿಕ ಸ್ನಾನಗೃಹ ನಡೆಸುತ್ತಾಳೆ. ಅಲ್ಲಿಗೆ ಹೊರಟಿರುವ ದಾರಿಯಲ್ಲಿ ರಸ್ತೆ ಬದಿಯಲ್ಲಿರುವ ಚಿಕ್ಕ ಕಟ್ಟೆಯಂಗಡಿಯಿಂದ ಕದ್ದುಮುಚ್ಚಿ ಸಿಗರೇಟನ್ನು ಕೊಳ್ಳುತ್ತಾಳೆ. ದಾರಿಯಲ್ಲಿ ತನ್ನ ತಂದೆಯ ಜೊತೆ ಹೊರಟಿರುವ ಒಂದು ಮಗು ಕೈಯಲ್ಲಿ ಆಟಿಕೆ ಪ್ಲಾಸ್ಟಿಕ್ ಗನ್ ಹಿಡಿದು ಹೋಗಿಬರುವ ಎಲ್ಲರಿಗೂ ಅದರಿಂದ ಠಿಶ್ಯುಂ ಠಿಶ್ಯುಂ ಅಂತ ಗುಂಡುಹಾರಿಸುವುದನ್ನು ಆಟವಾಗಿಸಿಕೊಂಡಿದ್ದಾನೆ. ಇನ್ನೇನು ತನ್ನ ಹಮಾಮ್ ಬಂತು ಎನ್ನುವ ಹೊತ್ತಿಗೆ ದೂರದ ಬೀದಿಯಲ್ಲಿ ಒಂದು ಬಾಂಬು ಸಿಡಿಯುವುದನ್ನು ಫಾತಿಮಾ ನೋಡುತ್ತಾಳೆ. ಇದು ಆಲ್ಜೀರಿಯಾದ ರಾಜಧಾನಿ ಆಲ್ಜೀರ್‌ನ ಆಗಿನ ಸಾಮಾಜಿಕ, ರಾಜಕೀಯ ಮತ್ತು ಸಾಂಪ್ರದಾಯಿಕ ಸನ್ನಿವೇಶವನ್ನು ಸೂಕ್ಷ್ಮವಾಗಿ ಹಿಡಿದಿಡುತ್ತದೆ. ಸಿನಿಮಾದ ಹೆಸರಿನ ಮಹತ್ವದ ಸುಳಿವನ್ನೂ ನೀಡುತ್ತದೆ.

ಸಿನಿಮಾದ ಮುಖ್ಯ ಘಟನೆಗಳು ನಡೆಯುವುದು ಸ್ತ್ರೀಯರ ಒಂದು ಹಮಾಮ್‌ನಲ್ಲಿ. ಮನೆಗಳಲ್ಲಿ ನೀರಿನ ತೀವ್ರ ಕೊರತೆ, ಸ್ನಾನಕ್ಕಾಗಿ ಊರಿನ ಹಲವಾರು ಸ್ತ್ರೀಯರು ಇಂಥ ಸ್ನಾನ ಗೃಹಗಳಿಗೆ ಹೋಗುತ್ತಾರೆ. ಫ಼ಾತಿಮಾ ಎನ್ನುವಾಕೆ ನಡೆಸುವ ಸ್ನಾನಗೃಹವೂ ಇಂಥದೊಂದು ಸೇವೆ. ಇಲ್ಲಿ ಈಕೆ ಮಸಾಜ್ ಕೂಡ ಮಾಡುತ್ತಾಳೆ. ಇಲ್ಲಿ ತಾಯಂದಿರು, ಮಕ್ಕಳು, ಪ್ರೇಮಿಗಳು, ಕನ್ಯೆಯರು, ತನಗೆ ಕೊನೆಗೂ ತಲಾಕ್ ಸಿಕ್ಕಿತು ಎಂಬ ಸುದ್ದಿಯನ್ನು ಎಲ್ಲರಿಗೂ ಕೊಟ್ಟು ಹುಚ್ಚಾಗಿ ಕುಣಿದು ಸಂಭ್ರಮಿಸುವ ಯುವತಿ ಮತ್ತು ಆಕೆಯ ಮಾಜಿ ಅತ್ತೆ, ಸುಂದರ ರಾಜಕುಮಾರ ಬಂದು ತನ್ನನ್ನು ಕರೆದುಕೊಂಡು ಹೋಗುತ್ತಾನೆ ಎಂದು ಕನಸು ಕಾಣುವ ಮೂವತ್ತು ದಾಟಿದ ಪ್ರೇಮಿ, ಬಂಡುಕೋರರು, ಧಾರ್ಮಿಕ ಮತಾಂಧರು ಎಲ್ಲಾ ಒಟ್ಟಿಗೇ ಸೇರುತ್ತಾರೆ. ಇಲ್ಲಿ ಮಹಿಳೆಯರು ತಮ್ಮ 'ಮೈ ಮತ್ತು ಮನಸ್ಸುಗಳನ್ನು ತೊಳೆದುಕೊಳ್ಳಲು ಬರುತ್ತಾರೆ'. ದೈಹಿಕ ಹೊಲಸಿನ ಜೊತೆಯಲ್ಲಿ ಪಿತೃಪ್ರಧಾನವಾದ ಮೂಲಭೂತವಾದಿ ಸಮಾಜದಲ್ಲಿ ತಾವು ಹೆಜ್ಜೆಹೆಜ್ಜೆಗೆ ಅನುಭವಿಸಿ ಮನಸ್ಸಿಗೆ ಆಗುವ ಗಾಯಗಳನ್ನೂ ತೊಳೆದುಕೊಳ್ಳಲು ಇಲ್ಲಿ ಸೇರುತ್ತಾರೆ.

ಇಲ್ಲಿ ಸೇರಿರುವ ಮಹಿಳೆಯರಿಗೆ ಹಮಾಮ್‌ನ ಹೊರಗಡೆ ಅನಾವರಣಗೊಳ್ಳುತ್ತಿರುವ ಕ್ರೋಧ, ವೈಷಮ್ಯ, ಹಿಂಸಾಚಾರ, ಪ್ರಕ್ಷುಬ್ಧತೆಯ ಅರಿವಿಲ್ಲ ಎಂದಿಲ್ಲ. ಆದರೆ ಅದು ಅವರಿಗೆ ಎಷ್ಟರಮಟ್ಟಿಗೆ ಅಭ್ಯಾಸ ಆಗಿಹೋಗಿದೆ ಎಂದರೆ ಆ ಕುರಿತು ಮಾತೂ ಆಡುವುದಿಲ್ಲ. ಆದರೆ ಈ ದಿನ ಹಾಗಿಲ್ಲ. ಹೊರಗಡೆ ಕುದಿಯುತ್ತಿರುವ ವೈಷಮ್ಯ ಹಮಾನ್‌ನ ಬಾಗಿಲು ತಟ್ಟುತ್ತದೆ. ಒಳಗೆ ಬರುವ ಹಾಗಿಲ್ಲ. ಏಕೆಂದರೆ ಸ್ತ್ರೀಯರ ಸ್ನಾನಗೃಹದಲ್ಲಿ ಗಂಡಸರಿಗೆ ಪ್ರವೇಶವಿಲ್ಲ. ಇದು ಶಿಷ್ಟಾಚಾರ. ಆದರೆ ಹೊರಗಿನ ಕ್ರೋಧದ ಬೆಂಕಿ, ಶಿಷ್ಟಾಚಾರವನ್ನೂ ಧ್ವಂಸ ಮಾಡಿ ಇವತ್ತು ಬಾಗಿಲು ಒಡೆದು ಒಳನುಗ್ಗಬಹುದು. ಇದು ಕಥೆಯ ಒಂದು ಮುಖ್ಯ ಸಂಘರ್ಷ.

**ಸಂಘರ್ಷದ ಹೊಗೆ**

ಇಲ್ಲಿ ಪ್ರಮುಖವಾಗಿ ಎದ್ದು ಕಾಣುವ ಪಾತ್ರಗಳೆಂದರೆ ಮುಖ್ಯವಾಗಿ ಫಾತಿಮಾ. ಈ ಹಮಾಮ್‌ಅನ್ನು ನಡೆಸಿಕೊಂಡು ಹೋಗುವ ಮಧ್ಯಮ ವಯಸ್ಸಿನ ಕಷ್ಟ ಸಹಿಷ್ಣು ಹೆಂಗಸು. ಆಕೆ ಎಷ್ಟು ಶಿಸ್ತುಬದ್ಧಳೋ, ಕೋಪಿಷ್ಟಳೋ ಅಷ್ಟೇ ಮಾನವೀಯ ಅನುಕಂಪ ಉಳ್ಳವಳು. ಯಾವುದೋ ಆಕ್ರೋಶ ಆಕೆಯನ್ನು ಯಾವಾಗಲೂ ಆವರಿಸಿರುತ್ತದೆ. ಈಕೆಯ ಜೊತೆಯಲ್ಲಿ ಸಹಾಯಕಿ ಸಮಿಯಾ. ಇವಳು ಸದಾ ತನ್ನ ಕನಸಿನ ರಾಜಕುಮಾರನಿಗಾಗಿ ಕಾಯುತ್ತಾ, ಅವರಿವರ ಪ್ರೇಮದ, ಕಾಮದ ಕಥೆಗಳನ್ನು ಕೇಳಿಸಿಕೊಂಡು ತನ್ನದೇ ಎನ್ನುವಂತೆ ಸುಖಿಸುತ್ತಾ, ಚಟುವಟಿಕೆಯಿಂದ ಓಡಾಗಿ ಎಲ್ಲರೊಂದಿಗೆ ಒಳ್ಳೆಯವಳೆನ್ನಿಸಿಕೊಂಡವಳು. ಇನ್ನೊಬ್ಬಳು ಲೆಯ್ಲಾ, ಸುಮಾರು ೧೧-೧೨ರ ಹುಡುಗಿ, ಅನಾಥಳು. ಫ಼ಾತಿಮಾಳೆ ಇವಳನ್ನು ಸಾಕಿಕೊಂಡಿರುತ್ತಾಳೆ, ಮೂಕಿ. ಏಕೆಂದು ನಮಗೆ ಆಮೇಲೆ ನಾಟಕೀಯ ದೃಶ್ಯವೊಂದರಲ್ಲಿ ಗೊತ್ತಾಗುತ್ತದೆ. ನಾದಿಯಾ ತನಗೆ ತನ್ನ ದುಷ್ಟ ಗಂಡನಿಂದ ಕೊನೆಗೂ ವಿಚ್ಛೇದನ ಸಿಕ್ಕಿದ್ದಕ್ಕೆ ಕುಣಿದು ಕುಪ್ಪಳಿಸುವವಳು. ಇನ್ನೊಂದು ಮುಖ್ಯವಾದ ಪಾತ್ರ, ಜ಼ಕಿಯಾ. ಈಕೆ ವಿಧವೆ. ಈಕೆಯ ಗಂಡ ಇಸ್ಲಾಮಿಸ್ಟ್ ಉಗ್ರವಾದಿ ಗುಂಪಿನ ಸದಸ್ಯ. 'ಜಿಹಾದ್'ನಲ್ಲಿ 'ಷಹೀದ್' ಆಗಿರುತ್ತಾನೆ. ಗಂಡ ಸತ್ತ ದುಃಖ ಈ ಯುವತಿಗಿಲ್ಲ. ಬದಲಿಗೆ ತನ್ನ ಗಂಡನ ಜನ್ಮ ಸಾರ್ಥಕ, ಆತ ನೇರವಾಗಿ ಜನ್ನತ್ (ಸ್ವರ್ಗ) ಸೇರುತ್ತಾನೆ ಎಂದು ಪ್ರತಿಪಾದಿಸುತ್ತಾಳೆ. ಉಳಿದವರಿಗೂ ಧರ್ಮನಿಷ್ಠೆಯ ಉಪದೇಶವನ್ನು ಹೇಳಲು ಹೋಗಿ ತಿರಸ್ಕಾರಕ್ಕೆ ತುತ್ತಾಗುತ್ತಾಳೆ. ಮರಿಯಮ್, ಹದಿನಾರರ ಹುಡುಗಿ. ತುಂಬು ಗರ್ಭಿಣಿ. ಆದರೆ ಇದು ವಿವಾಹಬಾಹಿರ ಸಂಬಂಧದ ಪರಿಣಾಮವಾಗಿರುವುದರಿಂದ ಆಕೆಗೆ ಪ್ರಾಣಾಪಾಯವಿದೆ. ಆಕೆಯ ಮೂಲಭೂತವಾದಿ ಅಣ್ಣ ಆಕೆ ಮಾಡಿರುವ 'ಪಾಪ'ಕ್ಕಾಗಿ ಅವಳ 'ಮರ್ಯಾದಾ ಹತ್ಯೆ' ಮಾಡುವುದಕ್ಕಾಗಿ ಹುಡುಕಿಕೊಂಡು ಓಡಾಡುತ್ತಾನೆ. ಆದರೆ ಈ ಹುಡುಗಿ ಹೇಗೋ ತಪ್ಪಿಸಿಕೊಂಡು ಬಂದು ಹಮಾಮ್‌ನಲ್ಲಿ ಸೇರಿಕೊಳ್ಳುತ್ತಾಳೆ. ಫ಼ಾತಿಮಾ ಉಳಿದವರಿಗೆ ಗೊತ್ತಾಗದ ಹಾಗೆ ಆಕೆಯನ್ನು ಹಮಾಮ್‌ನ ಮೊದಲ ಮಹಡಿಯಲ್ಲಿ ಬಚ್ಚಿಡುತ್ತಾಳೆ.

ಹಮಾಮ್‌ನ ನಾಲ್ಕು ಗೋಡೆಗಳ ನಡುವಿನ ರಕ್ಷಣೆಯಲ್ಲಿ ಇಲ್ಲಿ ಸೇರಿರುವ ಸ್ತ್ರೀಯರು ತಮ್ಮ ಮೈ ಮನಸ್ಸುಗಳನ್ನು ಸ್ವಚ್ಛಂದವಾಗಿ ಹರಿಯಲು ಬಿಡುತ್ತಾರೆ. ಬಟ್ಟೆ ಬಿಚ್ಚಿ ಬತ್ತಲಾಗುತ್ತಾರೆ. ಅಷ್ಟೇ ಮುಕ್ತವಾಗಿ ಮನೆಗಳಲ್ಲಿ ಮಾತಾಡಿದ್ದರೆ ತಲೆ ಹೋಗಬಹುದಾದಷ್ಟು ನಿಷಿದ್ಧವಾದ, ಲೈಂಗಿಕ ಆಮೋದ ಪ್ರಮಾದಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಮಾತಾಡಿಕೊಳ್ಳುತ್ತಾರೆ. ೮೦ ವರ್ಷ ವಯಸ್ಸಿನ ಮುದುಕಿಯೊಬ್ಬಳು, ತಾನು ೧೧ರ ವಯಸ್ಸಿನಲ್ಲಿ ಮದುವೆಯಾಗಿ ಮೊದಲ ರಾತ್ರಿ, ತನ್ನ ತಂದೆಯ ಸ್ನೇಹಿತ, ತನಗಿಂತ ೧೫ ವರ್ಷ ದೊಡ್ಡವನಾದ ದಪ್ಪದೇಹದ ಗಂಡನಿಂದ ಅನುಭವಿಸಿದ ಯಾತನೆಯನ್ನು ನೆನೆಸಿಕೊಂಡು ಹೇಳುತ್ತಾಳೆ. ಮೊದಲು ಗುಪ್ತ ಆನಂದದಿಂದ ಆಲಿಸಿದ ಉಳಿದ ಸ್ತ್ರೀಯರು ಕೊನೆಯಲ್ಲಿ ಖೇದವನ್ನು ಅನುಭವಿಸಿ ಹಿಂದಕ್ಕೆ ಸರಿಯುತ್ತಾರೆ.

ಮಾತುಮಾತಿನಲ್ಲಿ ಮದರ್ ಮೇರಿ ಪುರುಷನ ಸಂಪರ್ಕವಿಲ್ಲದೇ ದೈವಿಕವಾಗಿ ಗರ್ಭಿಣಿಯಾದ ವಿಚಾರ ಪ್ರಸ್ತಾಪಕ್ಕೆ ಬರುತ್ತದೆ, ಅದಕ್ಕೆ ಒಬ್ಬಳು, 'ಜುಬೇದಾ ಮಗಳು ಮರಿಯಮ್ ಈಗ ಗರ್ಭಿಣಿಯಾಗಿದ್ದಾಳಲ್ಲ, ಅದೂ ದೈವಿಕ ಇರಬಹುದಲ್ಲವೇ?' ಎಂದದ್ದಕ್ಕೆ. 'ಇಲ್ಲ, ಮದರ್ ಮೇರಿ ಗರ್ಭಿಣಿಯಾದಾಗ ಯೇಸುವನ್ನು ಹೊತ್ತಿದ್ದರು' ಎನ್ನುತ್ತಾಳೆ ಮತ್ತೊಬ್ಬಳು. ಚಿನಕುರುಳಿ ಸಾಮಿಯಾ, ಪುರುಷರ ಜೊತೆಗಿನ ಸಂಗಸುಖವನ್ನು ನೆನೆಸಿಕೊಳ್ಳುತ್ತಾ, 'ಕುರಾನಿನಲ್ಲಿ ಹೇಳಿರುವ ಪ್ರಕಾರ, ಗಂಡ ಹಾಸಿಗೆಯಲ್ಲಿ ಬಲವಂತ ಮಾಡಿದರೆ ಅದನ್ನು ಸ್ತ್ರೀ ನಿರಾಕರಿಸುವಂತಿಲ್ಲ. ನನಗೆ ಆ ಶ್ಲೋಕ ಬಹಳ ಇಷ್ಟ. ಹಾಗೆ ಬಲವಂತ ಮಾಡುವ ಪುರುಷನೂ ಅಷ್ಟೇ. ಆತ ಹಾಸಿಗೆಯಲ್ಲಿ ತನ್ನ ಹೆಂಡತಿಯನ್ನು ಎಷ್ಟು ಗೌರವಿಸುತ್ತಾನೆಯೋ ಅಷ್ಟು ದೊಡ್ಡದಾಗಿರುತ್ತದೆ ಸ್ವರ್ಗದಲ್ಲಿ ಆತನ ಸ್ಥಾನ. ಅದೇ ಹಾಸಿಗೆಯಿಂದ ಹೊರಗೆ ಅವನು ತನ್ನ ಸ್ತ್ರೀಯರನ್ನು ಗೌರವಿಸಿದರೆ ಸೀದಾ ನರಕಕ್ಕೆ ಹೋಗುತ್ತಾನೆ' ಎಂಬ ವಿಡಂಬನೆಯನ್ನೂ ಸೇರಿಸಿ ಎಲ್ಲರೂ ನಗುತ್ತಾರೆ.

**ಸಂಘರ್ಷ**

ನಾದಿಯಾಗೆ ಜ಼ಕಿಯಾಳನ್ನು ಕಂಡರೆ ಆಗುವುದಿಲ್ಲ. ನಾದಿಯಾ ಮುಕ್ತ ಸ್ವಭಾವದ ಯುವತಿ, ಜ಼ಕಿಯಾ ಮೂಲಭೂತವಾದಕ್ಕೆ ಮಾರುಹೋದ ಯುವತಿ. ಹೊರಗೆ ಅಜಾನ್ ಕೇಳಿಸಿದಾಗ ಸ್ನಾನದ ಮನೆಯಲ್ಲಿಯೇ ಒಂದು ಕಡೆ ಚಾಪೆ ಹಾಸಿಕೊಂಡು ನಮಾಜು ಮಾಡಿ ಮುಗಿಸುವಷ್ಟು ಧರ್ಮನಿಷ್ಠೆ. ಆಕೆ ತನ್ನ ಜಿಹಾದಿ ಸಹವರ್ತಿಗಳ ಕುರಿತು ಪ್ರತಿಪಾದಿಸಲು ನೋಡುವಾಗ ನಾದಿಯಾಳ ಆಕ್ರೋಶ ಆಸ್ಫೋಟಿಸುತ್ತಾಳೆ. ಆಕೆ ತನ್ನ ಎದೆಗೆ ಸುತ್ತಿದ್ದ ಬಟ್ಟೆಯನ್ನು ತೆಗೆದು ತೋರಿಸುತ್ತಾಳೆ. ಆಕೆಯ ಸ್ತನಗಳು ಆಸಿಡ್ ದಾಳಿಯಿಂದ ವಿಕಾರಗೊಂಡಿರುತ್ತವೆ. ಮುಕ್ತ ಮನಸ್ಸಿನ ಸುಂದರವಾದ ಮುಖದ ಕೆಳಗೆ ಮೂಲಭೂತವಾದ ಅನಾಚಾರಕ್ಕೆ ಬಲಿಯಾದ ವಿಕೃತಿ.



ಇನ್ನೊಂದು ದೃಶ್ಯದಲ್ಲಿ, ಸ್ನಾನಕ್ಕಾಗಿ ಸರದಿ ಕಾಯುತ್ತಾ ಗೋಡೆಗೆ ಆತು ಕುಳಿತಿರುವ ಒಬ್ಬ ಮಹಿಳೆಗೆ ತಾನು ಮುಟ್ಟಾಗಿದ್ದು, ಬಟ್ಟೆ ರಕ್ತದಿಂದ ಒದ್ದೆಯಾಗಿರುವುದು ಗಮನಕ್ಕೆ ಬಂದಿರುವುದಿಲ್ಲ. ಆದರೆ ಅಲ್ಲಿ ಕೆಲಸ ಮಾಡುತ್ತಾ ಓಡಾಡುತ್ತಿರುವ ೧೨ರ ಬಾಲೆ ಲೆಯ್ಲಾ ರಕ್ತವನ್ನು ನೋಡುತ್ತಾಳೆ, ಕಿಟಾರನೇ ಕಿರುಚುತ್ತಾಳೆ. ಅವಳಿಗೇನೋ ಕೇಡಾಗಿದೆ ಎಂದು ಭಾವಿಸಿ ಅದನ್ನು ನಿವಾರಿಸಲು ಜ಼ಕಿಯಾ ಕುರಾನಿನ ಯಾವುದೋ ಶ್ಲೋಕವನ್ನು ಉಚ್ಚರಿಸಿ ಅವಳ ಮುಖದ ಮೇಲೆ ಊದಲು ನೋಡುವಾಗ ಲೆಯ್ಲಾ ಇನ್ನೂ ಹೆಚ್ಚು ಭಯದಿಂದ ತತ್ತರಿಸುತ್ತಾ, ಗಡಗಡ ನಡುಗಿ ಮೂರ್ಛೆ ಹೋಗುತ್ತಾಳೆ. ಟೀಚರ್ ಹಮೀದಾ ಜ಼ಕಿಯಾಳನ್ನು ದೂರ ತಳ್ಳಿ 'ಮಗುವಿನ ಕೈಯಲ್ಲಿ ಕಬ್ಬಿಣದ ಕೀ ಕೊಡಿ' ಎಂದು ಸಲಹೆ ಮಾಡುತ್ತಾಳೆ. ಆಗ ಜ಼ಕಿಯಾ, 'ಆಕೆಯನ್ನು

ಸೈತಾನ ಹಿಡಿದುಕೊಂಡಿದ್ದಾನೆ,' ಎಂದು ಹೇಳಿದಾಗ ಕೋಪಗೊಂಡ ಹಮೀದಾ, 'ಸೈತಾನನಾ? ಇದಕ್ಕೆ ಕಾರಣ ನಿನ್ನ ಸಹವರ್ತಿ ಜಿಹಾದಿಗಳು. ಈ ಹುಡುಗಿಯ ಕಣ್ಣೆದುರಿನಲ್ಲಿಯೇ ಆಕೆಯ ಅಕ್ಕಂದಿರನ್ನು ರೇಪ್ ಮಾಡುತ್ತಿರುವಾಗ, ಆಕೆಯ ಗರ್ಭಿಣಿ ಅಮ್ಮನ ಹೊಟ್ಟೆ ಬಗೆದು ಒಳಗಿನದನ್ನು ಎಲ್ಲಾ ಹೊರಗೆ ಚೆಲ್ಲುತ್ತಿದ್ದಾಗ ಆ ಕೊಲೆಗಡುಕರು ಕುರಾನಿನ ಇಂಥ ಶ್ಲೋಕಗಳನ್ನೇ ಮತ್ತೆ ಮತ್ತೆ ಹೇಳುತ್ತಿದ್ದರು. ಆ ರಾಕ್ಷಸೀ ಕ್ರೌರ್ಯಕ್ಕೆ ಸಾಕ್ಷಿಯಾಗಿದ್ದಾಗಿನಿಂದ ಈ ಹುಡುಗಿ ಮಾತನ್ನೇ ಕಳೆದುಕೊಂಡು ಮೂಕಿಯಾಗಿದ್ದಾಳೆ. ರಕ್ತವನ್ನು ಕಂಡರೆ, ಕುರಾನಿನ ಶ್ಲೋಕಗಳನ್ನು ಕೇಳಿಸಿಕೊಂಡರೆ ಈಕೆಗೆ ಫಿಟ್ಸ್ ಬರುತ್ತದೆ' ಎಂದು ಝಕಿಯಾ ಮುಖಕ್ಕೆ ರಾಚುವಂತೆ ಹೇಳುತ್ತಾಳೆ.

ಈ ನಡುವೆ ಹಮಾಮ್‌ನ ನಿರ್ವಾಹಕಿ ಫಾತಿಮಾ ಹದಿಹರೆಯದ ಗರ್ಭಿಣಿ ಮರಿಯಮ್‌ಳನ್ನು ಮಹಡಿಯಲ್ಲಿ ಬಚ್ಚಿಟ್ಟಿದ್ದಳಲ್ಲ, ಇದು ಈಗ ಉಳಿದವರಿಗೂ ಗೊತ್ತಾಗಿಬಿಟ್ಟಿರುತ್ತದೆ. ಒಂದು ಕಡೆ ಮರಿಯಮ್‌ಳ ಸ್ಥಿತಿಯ ಕುರಿತು ಮರುಕವಿದ್ದರೆ ಇನ್ನೊಂದು ಕಡೆ ಆಕೆಯ ಹತ್ಯೆ ಮಾಡುವುದಕ್ಕಾಗಿ ಹುಡುಕಿಕೊಂಡು ಓಡಾಡುತ್ತಿರುವ ಆಕೆಯ ಅಣ್ಣ ಅಹಮದ್‌ನ ಭೀತಿ. ಆಕೆಯ ಅಣ್ಣ ಒಂದೆರಡು ಬಾರಿ ಬಂದು ಹಮಾಮ್ ಬಾಗಿಲು ಬಡಿದು ಮರಿಯಮ್ ಒಳಗಿದ್ದಾಳೆ ಆಕೆಯನ್ನು ಬಿಟ್ಟುಕೊಡಿ ಎಂದು ಅರಚಾಡಿರುತ್ತಾನೆ. ಅದಕ್ಕೆ ಫಾತಿಮಾ 'ಇಲ್ಲಿ ಆಕೆ ಇಲ್ಲ. ಇದು ಸ್ತ್ರೀಯರ ಹಮಾಮ್, ಪುರುಷರಿಗೆ ಪ್ರವೇಶವಿಲ್ಲ' ಎಂದು ಹೇಳಿ ಹಿಂದಕ್ಕೆ ಅಟ್ಟಿರುತ್ತಾಳೆ.

ಅಷ್ಟರಲ್ಲಿ ಮರಿಯಮ್‌ಗೆ ಹೆರಿಗೆ ನೋವು ತೀವ್ರವಾಗುತ್ತದೆ. ಅಲ್ಲಿರುವ ಹೆಣ್ಣುಮಕ್ಕಳು ಎಲ್ಲರೂ ಆಕೆಗೆ ನೆರವಾಗಲು ಮುಂದಾಗುತ್ತಾರೆ. ಇಷ್ಟು ಹೊತ್ತು ತನ್ನ ಅತಿ ಮೂಲಭೂತವಾದಿ ಧೋರಣೆಯಿಂದಾಗಿ ಎಲ್ಲರಿಂದ ತಿರಸ್ಕರಿಸಲ್ಪಟ್ಟ ಝಕಿಯಾ ತಾನು ನಾಲ್ಕು ವರ್ಷ ವೈದ್ಯಕೀಯ ಓದಿರುವುದಾಗಿ ಹೇಳಿಕೊಂಡು ತಾನೇ ಹೆರಿಗೆ ಮಾಡಿಸುತ್ತಾಳೆ. ಗಂಡು ಮಗುವಾಗುತ್ತದೆ. ಆಯಿತು, ಆದರೆ ಈಗ ಮರಿಯಮ್ ಮತ್ತು ಆಕೆಯ ವಿವಾಹಬಾಹಿರ ಮಗುವಿನ ಕತೆಯೇನು? ಫಾತಿಮಾ ಹೇಳುತ್ತಾಳೆ, 'ನಾನು ಅವಳಿಗೆ ರಕ್ಷಣೆ ಕೊಟ್ಟಿದ್ದೇನೆ, ಹೆರಿಗೆ ಮಾಡಿಸುತ್ತಿದ್ದೇನೆ. ನಾನು ಆಕೆಯನ್ನು ಮತ್ತು ಆಕೆಯ ಮಗುವನ್ನು ನೋಡಿಕೊಳ್ಳುತ್ತೇನೆ. ನನ್ನ ಗಂಡ ಇದನ್ನು ಇಷ್ಟಪಡದೇ ಇದ್ದರೆ ನಾನು ಅವನನ್ನು ಡೈವೋರ್ಸ್ ಮಾಡುತ್ತೇನೆ' ಎನ್ನುತ್ತಾಳೆ. ಶಿಕ್ಷಕಿ ಹಮೀದಾ, 'ನಾನು ಮಗುವನ್ನು ಸಾಕುತ್ತೇನೆ, ಮರಿಯಮ್ ಓದನ್ನು ಮುಂದುವರಿಸಬಹುದು. ನನ್ನ ಮಗಳು ಅವಳಿಗೆ ಸರಕಾರದಲ್ಲೊಂದು ನೌಕರಿ ಕೊಡಿಸುತ್ತಾಳೆ...' ಎನ್ನುತ್ತಾಳೆ. ಮೂಲಭೂತವಾದಿ ಝಕಿಯಾ ಒಬ್ಬಳನ್ನು ಬಿಟ್ಟರೆ ಯಾರಿಗೂ ಮರಿಯಮ್‌ಳಿಗೆ ಆಗಿರುವ ಮಗು 'ವಿವಾಹಬಾಹಿರ' ಎಂಬ ಸಂಗತಿ ಕಳಂಕ ಅನ್ನಿಸುವುದೇ ಇಲ್ಲ ಎನ್ನುವುದು ಇಲ್ಲಿ ಗಮನಿಸಬೇಕಾದ ಅಂಶ.

ಕೊನೆಯಲ್ಲಿ ಮರಿಯಮ್ ಅಣ್ಣ ಅಹಮದ್ ಊರಿನ ಮುಲ್ಲಾ ಮತ್ತು ಇನ್ನಷ್ಟು ಮತಾಂಧ ಮುಸ್ಲಿಮ್ ಪುರುಷರನ್ನು ಸೇರಿಸಿಕೊಂಡು ಬಂದು, ಅಲ್ಲಾಹು ಅಕ್ಬರ್ (ಅಲ್ಲಾಹ್ ದೊಡ್ಡವನು) ಘೋಷಣೆ ಕೂಗುತ್ತಾ, ಜೋರಾಗಿ ಹಮಾಮ್ ಬಾಗಿಲು ಬಡಿಯುತ್ತಾನೆ. ಇದೊಂದು ನಿರ್ಣಾಯಕ ಕ್ಷಣ. ಆಕೆಯನ್ನು ಉಳಿಸುವುದು ಹೇಗೆ? ಇಷ್ಟು ಹೊತ್ತು ಬರೀ ಚಂಚಲ ಮನಸ್ಸಿನ ಸ್ತ್ರೀಯಾಗಿ ಕಾಣುತ್ತಿದ್ದ ಸಾಮಿಯಾ ಈಗ ಒಂದು ಪ್ರಬುದ್ಧ ಉಪಾಯವನ್ನು ಹೇಳಿಕೊಡುತ್ತಾಳೆ. ಅದರ ಪ್ರಕಾರ ಅಲ್ಲಿರುವ ಎಲ್ಲರೂ ಗರ್ಭಿಣಿಯರ ಹಾಗೆ ಬಟ್ಟೆಸುತ್ತಿ ಹೊಟ್ಟೆ ಉಬ್ಬಿಸಿಕೊಂಡು, ಮುಖವೂ ಕಾಣದಷ್ಟು ಬಿಳಿ ಬಟ್ಟೆಯ ಮುಸುಕನ್ನು ತೊಟ್ಟು ಹೊರಬರುತ್ತಾರೆ. ಪುರುಷರು ನಿಜವಾಗಿಯೂ ಬಾಗಿಲನ್ನು ಮುರಿದು ಒಳಗೆ ಕಾಲಿಡುವ ಹೊತ್ತಿಗೆ ಅವರ ಎದುರು ನಿಲ್ಲುತ್ತಾರೆ. ಅವರಲ್ಲಿ ಮರಿಯಮ್ ಯಾರು ಎಂದು ಹೇಗೆ ತಿಳಿಯುವುದು? ಇತರರ ಬುರಕಾ ತೆಗೆದು ನೋಡುವುದು ಧರ್ಮನಿಷಿದ್ಧ.

ಅಷ್ಟರಲ್ಲಿ ಮೂಲಭೂತವಾದಿ ಝಕಿಯಾ ಈಗ ಇತರ ಸ್ತ್ರೀಯರ ವಿಶ್ವಾಸಕ್ಕೆ ದ್ರೋಹ ಬಗೆದು, ತಮ್ಮ ಮೂಲಭೂತವಾದಿ ಸಿದ್ಧಾಂತಕ್ಕೆ ಮಣಿಯುತ್ತಾಳೆ. ತನ್ನ ಮುಸುಕನ್ನು ತೆರೆದು ಮುಖ ತೋರಿಸಿ, 'ನಾನು ಹುತಾತ್ಮನಾದ ನಿಮ್ಮ ಸಂಗಾತಿ ಮುಸ್ತಫಾ ಸೈಫುದ್ದೀನ್ ರಹಮತುಲ್ಲಾಹ್‌ನ ವಿಧವೆ. ಪ್ರವಾದಿಯವರು ಗರ್ಭಿಣಿಯಾದ ಒಬ್ಬ ವ್ಯಭಿಚಾರಿಯನ್ನು ಕ್ಷಮಿಸಿದರು ಎಂದು ಹೇಳುತ್ತಾರೆ. ಇಲ್ಲ, ಅವರು ಆ ಸ್ತ್ರೀಗೆ ಹೇಳಿದರು, ಹೋಗಿ ಮಗುವಿಗೆ ಜನ್ಮ ನೀಡು, ಹಾಲು ಉಣಿಸಿ ಹಿಂದಕ್ಕೆ ಬಾ ಎಂದರು, ಅವಳು ಹಾಗೆಯೇ ಮಾಡಿದಳು. ಅನಂತರ ಪ್ರವಾದಿ ಆಕೆಯನ್ನು ಎದೆಮಟ್ಟಕ್ಕೆ ನೆಲದಲ್ಲಿ ಹುಗಿದು ಸುತ್ತಲೂ ನಿಂತ ಪುರುಷರು ಆಕೆಗೆ ಕಲ್ಲಿನಿಂದ ಹೊಡೆದು ಸಾಯಿಸಿರಿ ಎಂದು ಆದೇಶವನ್ನು ಕೊಟ್ಟರು. ಇದು ಸತ್ಯ' ಎಂದು ಹೇಳಿದವಳೇ ಅಲ್ಲಿಂದ ಹೊರಟು ಹೋಗಿಬಿಡುತ್ತಾಳೆ. ಸಂದೇಶ ಸ್ಪಷ್ಟವಾಗಿದೆ.

ಆದರೂ ತನ್ನ ವ್ಯಭಿಚಾರಿ ತಂಗಿ ಇವರಲ್ಲಿ ಯಾರು ಎಂದು ಗೊತ್ತಾಗದ ಧರ್ಮಸಂಕಟದಲ್ಲಿದ್ದ ಮರಿಯಮ್ ಅಣ್ಣ ಎದುರಿಗಿದ್ದ ಒಬ್ಬ ಸ್ತ್ರೀಯ ಕಾಲುಗಳನ್ನು ನೋಡುತ್ತಾನೆ. ಯಾವುದೋ ಕಾರಣಕ್ಕಾಗಿ ಆಕೆಯೇ ಮರಿಯಮ್ ಎಂದು ಅವನಿಗೆ ಖಾತ್ರಿಯಾಗುತ್ತದೆ. ಅಲಾಹು ಅಕ್ಬರ್ ಎಂದು ಮುನ್ನುಗ್ಗಿದವನೇ ಆಕೆಯ ಎದೆಗೆ ಚೂರಿ ಇರಿದುಬಿಡುತ್ತಾನೆ. ಆಕೆ ಸತ್ತು ಬೀಳುತ್ತಾಳೆ. ಮುಖ ಕಾಣಿಸುತ್ತದೆ. ನೋಡಿದರೆ ಆಕೆ ಮರಿಯಮ್ ಅಲ್ಲ, ಫಾತಿಮಾಳ ಸಹಾಯಕಿ, ಕನಸುಗಳನ್ನು ಕಾಣುತ್ತಲೇ ಕಾಲ ಕಳೆದಿದ್ದ, ತನ್ನ ಜೀವಂತಿಕೆಯಿಂದ ಎಲ್ಲರಿಗೂ ಪ್ರಿಯಳಾಗಿದ್ದ ಸಮಿಯಾ! ಸಿನಿಮಾದ ಇನ್ನೊಂದು ದೃಶ್ಯದಲ್ಲಿ ಇದೇ ಅಹಮದ್ ಹಮಾಮ್ ಬಾಗಿಲಲ್ಲಿ ಬಂದಿದ್ದಾಗ ಪರದೆಯ ಮರೆಯಿಂದ ಅವನನ್ನು ನೋಡಿ, ಮಾತಾಡಿಸಿ, ಅವನೇ ತನ್ನನ್ನು ವರಿಸಿ ಇಲ್ಲಿಂದ ಕರೆದುಕೊಂಡು ಹೋಗುವ ರಾಜಕುಮಾರ ಎಂದು ಕನಸು ಕಾಣುತ್ತಿದ್ದನ್ನು ನಾವು ನೋಡಿರುತ್ತೇವೆ. ಈಗ ಅದು ನೆನಪಾಗುತ್ತದೆ. ತನ್ನ ಪ್ರೀತಿಯ ಸಂಗಾತಿ, ಅಮಾಯಕ ಸಮಿಯಾ ಹತ್ಯೆಯನ್ನು ಕಂಡು ಫಾತಿಮಾಳ ಕ್ರೋಧದ ಎಲ್ಲೆ ಮೀರುತ್ತದೆ. ಮುನ್ನುಗ್ಗಿದವಳೆ ಮರಿಯಮ್ ಅದೇ ಚೂರಿಯನ್ನು ಅಹಮದ್‌ಗೆ ಇರಿಯುತ್ತಾಳೆ. ಅವನೂ ಸಮಿಯಾ ಪಕ್ಕದಲ್ಲಿ ಬಿದ್ದು ಸಾಯುತ್ತಾನೆ. ಈ ಅನಿರೀಕ್ಷಿತ ಬೆಳವಣಿಗೆಯಿಂದ ಸ್ತಂಭೀಭೂತರಾಗಿ ನಿಂತ ಗುಂಪು ನಿಧಾನವಾಗಿ ಅಲ್ಲಿಂದ ಕಾಲು ಕೀಳುತ್ತದೆ.

ಚಿತ್ರದ ಕೊನೆಯಲ್ಲಿ ನಾವು ಎಳೆಯ ಹುಡುಗಿ ಲೆಯ್ಲಾ, ಮರಿಯಮ್ ಮತ್ತು ಪುಟ್ಟ ಮಗು ಟೀಚರ್ ಜೊತೆಯಲ್ಲಿ ಆಕೆಯ ಮನೆಯ ಮಾಳಿಗೆ ಮೇಲೆ ಇರುವುದನ್ನು ಕಾಣುತ್ತೇವೆ. ಒಣ ಹಾಕಿದ ಬಟ್ಟೆ ತೆಗೆಯುತ್ತಿದ್ದಾರೆ. ಸ್ತ್ರೀಯರು ಮುಸುಕಾಗಿ ಬಳಸುವ ಒಂದು ಕಪ್ಪು ಬಟ್ಟೆ ಬೀಸುವ ಗಾಳಿಗೆ ಹಾರುತ್ತದೆ. ಲೆಯ್ಲಾ



## 'ಕರ್ನಾಟಕದ ಸಮಗ್ರ ದಲಿತ ಚರಿತ್ರೆ' ಕೃತಿಗೆ ಎರಡು ಪ್ರಶಸ್ತಿಗಳು

ನವಕರ್ನಾಟಕ ಪ್ರಕಾಶನದಿಂದ ಪ್ರಕಟವಾಗಿರುವ ಡಾ॥ ಚಿನ್ನಸ್ವಾಮಿ ಸೋಸಲೆಯವರು ಸಂಪಾದಿಸಿರುವ 'ಕರ್ನಾಟಕದ ಸಮಗ್ರ ದಲಿತ ಚರಿತ್ರೆ' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೧೭ನೇ ಸಾಲಿನ 'ಡಾ॥ ಸಿದ್ಧಲಿಂಗಯ್ಯ ಸಾಹಿತ್ಯ ಪ್ರಶಸ್ತಿ' ಹಾಗೂ ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ ಪ್ರತಿಷ್ಠಾನವು ಕೊಡಮಾಡುವ 'ಜ್ಯೋತಿಬಾ ಫುಲೆ ಪುಸ್ತಕ ಪ್ರಶಸ್ತಿ' ಲಭ್ಯವಾಗಿವೆ. ಸಂಪಾದಕರಿಗೆ ಮತ್ತು ಲೇಖಕರಿಗೆ ಅಭಿನಂದನೆಗಳು.

ಅದನ್ನು ಹಿಡಿಯಲು ನೋಡುತ್ತಾಳೆ. ಇಲ್ಲ, ಅದು ಹಾರಿ ಹೋಗುತ್ತದೆ. ನೋಡ ನೋಡುತ್ತಿದ್ದಂತೆ ಹತ್ತಿರದ ಇತರ ಮಾಳಿಗೆಗಳಿಂದ ಹಲವಾರು ಕಪ್ಪುಬಟ್ಟೆಗಳೂ ಆಕಾಶಕ್ಕೆ ಹಾರತೊಡಗುತ್ತವೆ. ಲೆಯ್ಲಾ ಅವುಗಳಿಗೆ ಟಾಟಾ ಮಾಡುತ್ತಾಳೆ. ಇದು ಹಾಗೆ ಮುಂದುವರೆದು ಇಡೀ ಊರಿನ ಮಾಳಿಗೆಗಳಿಂದ ಸಾವಿರಾರು ಕಪ್ಪು ಬಟ್ಟೆಗಳು ಆಕಾಶ ತುಂಬೆಲ್ಲಾ ಹಾರಿಹೋಗುವುದು ಕಾಣಿಸುತ್ತದೆ. ಇಡೀ ಚಿತ್ರವನ್ನು ವೀಕ್ಷಿಸಿದ ಪ್ರೇಕ್ಷಕರಿಗೆ ಇದು ಹಲವು ರೀತಿಯ ಸಂದೇಶಗಳನ್ನು ನೀಡುತ್ತದೆ.

**ಕೊನೆಯಲ್ಲಿ ಒಂದೆರಡು ಮಾತು**

ಇದರ ಚಿತ್ರಕಥೆ, ಆಶಯ, ಸಂದೇಶ, ಅಭಿನಯ, ನಿರ್ದೇಶನ ಎಲ್ಲ ಅಂಶಗಳಿಗಾಗಿ ನಾನು ಈ ಚಿತ್ರವನ್ನು ಮೆಚ್ಚಿಕೊಳ್ಳುತ್ತೇನೆ. ಆದರೆ ಇದರ ನಿರ್ವಹಣೆಯ ಒಂದು ನಿರ್ಧಾರ ಮಾತ್ರ ನನಗೆ ಹಿಡಿಸಲಿಲ್ಲ. ಅದೆಂದರೆ ಚಿತ್ರದ ದೃಶ್ಯಗಳಲ್ಲಿ ಎಲ್ಲಾ ವಯಸ್ಸಿನ, ಆಕಾರದ ಸ್ತ್ರೀಯರು ಹೆಚ್ಚು ಕಡಿಮೆ ಬತ್ತಲಾಗಿಯೇ ಇರುತ್ತಾರೆ. ಕೆಲವರಂತೂ ಪೂರ್ತಿ ಬತ್ತಲಾಗಿ. ಹೌದು. ಇದು ಸ್ತ್ರೀಯರಿಗೇ ಮೀಸಲಾದ ಹಮಾಮ್. ಅವರವರೇ ಇರುವಾಗ ಬತ್ತಲಾಗುವುದಕ್ಕೆ ಏಕೆ ಸಂಕೋಚ ಎನ್ನಬಹುದು. ಅಲ್ಲದೇ, ದೈಹಿಕವಾಗಿ ಬತ್ತಲಾಗುವುದನ್ನು ನಿರ್ದೇಶಕಿ ರೆಹಾನಾ ಸಾಂಕೇತಿಕವಾಗಿಯೂ ಬಳಸಿದ್ದಾರೆ ಎನ್ನಲಾಗುತ್ತದೆ. ಎಂದರೆ, ಮನೆಯೊಳಗೆ, ಹೊರಗೆ ಕಟ್ಟಾ ಸಂಪ್ರದಾಯವಾದಿ ಪುರುಷ ಪ್ರಾಧಾನ್ಯದ ದಬ್ಬಾಳಿಕೆಯಿಂದ ಒಳಗೇ ಹತ್ತಿಕ್ಕಿಕೊಂಡಿದ್ದ ಎಲ್ಲ ಆಕ್ರೋಶ ಹಮಾಮ್‌ನಲ್ಲಿ ನಿರ್ಬಂಧನೀಯ ಬಟ್ಟೆಯನ್ನು ಕಿತ್ತು ಬಿಸಾಕುವುದರ ಮೂಲಕ ಹೊರಗೆ ಬರುತ್ತದೆ, ಸ್ತ್ರೀಯರು ಇಲ್ಲಿ ಒದಗುವ ಸ್ವಾತಂತ್ರ್ಯವನ್ನು ಬಳಸಿಕೊಂಡು ತಮ್ಮ ಮನಸ್ಸಿನ ತುಮುಲಗಳನ್ನು ಹೊರಚೆಲ್ಲುತ್ತಾರೆ, ಬತ್ತಲಾಗುತ್ತಾರೆ ಎಂಬ ವಾದವೂ ಮೆಚ್ಚುವಂಥಾದ್ದು.

ಸಿದ್ಧಾಂತವಾಗಿ ಚೆನ್ನಾಗಿದೆಯಾದರೂ ಇದನ್ನು ಅಭಿವ್ಯಕ್ತಿಸಲು ಆರಿಸಿಕೊಂಡಿರುವ ಮಾಧ್ಯಮದ ಸ್ವರೂಪದ ಕುರಿತೂ ನಮಗೆ ಕಾಳಜಿ ಇರಬೇಕಾಗುತ್ತದೆ. ಸಿನಿಮಾ ಸಾಮೂಹಿಕ ಪ್ರೇಕ್ಷಕರ ಎದುರಿನಲ್ಲಿ ಸಾರ್ವಜನಿಕವಾಗಿ ಅನಾವರಣಗೊಳ್ಳುವ ಮಾಧ್ಯಮ. ಹಮಾಮ್‌ನಲ್ಲಿ ಸ್ತ್ರೀಯರು 'ಬತ್ತಲಾಗುತ್ತಾರೆ' ಎಂಬ ಅರ್ಥ ಬರುವಂತೆ ತೋರಿಸುವುದು ಬೇರೆ, ನಿಜವಾಗಿಯೂ ಬತ್ತಲಾಗಿ ತೋರಿಸುವುದು ಬೇರೆ. ಹೌದು, ಸ್ತ್ರೀಯರನ್ನು ತೆರೆಯ ಮೇಲೆ ಬತ್ತಲಾಗಿ ತೋರಿಸುವುದನ್ನು ನೋಡುತ್ತಿರುವಾಗ ಬಹುಶಃ ಸಾಮಾನ್ಯ ಪುರುಷ ಪ್ರೇಕ್ಷಕರಿಗೆ ಮೊದಲು ಕೆಲವು ಕ್ಷಣ ರೋಚಕವೋ, ಮುಜುಗರವೋ ಆಗಬಹುದು, ಆದರೆ ಕಥೆಯ, ನಿರೂಪಣೆಯ ಆಳದಲ್ಲಿ ತೊಡಗಿಸಿಕೊಂಡ ನಂತರ ಈ ಬತ್ತಲೆಯ ವಿಲಕ್ಷಣತೆ ಮರೆತುಹೋಗಬಹುದು. ಈ ಸಿನಿಮಾದ ಚಿತ್ರೀಕರಣದ ಹೊತ್ತಿನಲ್ಲಿ ನಿರ್ದೇಶಕಿ ರೆಹಾನಾ ಜೊತೆ ಕೆಲಸ ಮಾಡಿದ ತಂತ್ರಜ್ಞರು, ಸಹಾಯಕರು ಎಲ್ಲರೂ ಸ್ತ್ರೀಯರೇ ಆಗಿದ್ದರು ಎಂಬ ಅಂಶ, ನಟಿಯರಿಗೆ ನಿಸ್ಸಂಕೋಚವಾಗಿ ಅಭಿನಯಿಸಲು ಸಹಾಯಕವಾಯಿತು ಎಂದು ನಿರ್ದೇಶಕಿ ಹೇಳಿದ್ದಾರೆ. ಆದರೆ ಅಂತಿಮವಾಗಿ ಈ ನಟಿಯರು ತೆರೆಯ ಮೇಲಾದರೂ ಅಡ್ಡಿಯಿಂದ ಪ್ರೇಕ್ಷಕರ ಎದುರು ಬತ್ತಲಾಗುವುದೂ ನಿಜವೇ ಆಗಿದೆ. ಇದೆಲ್ಲರ ಹೊರತಾಗಿ ನನಗಿಲ್ಲಿ ಸಮಸ್ಯೆ ಇರುವುದು ಈ ಚಿತ್ರಕ್ಕೆ ಸೆನ್ಸಾರ್ ಅನುಮತಿ ಸಿಗುತ್ತದೆಯೇ ಎನ್ನುವುದು.

**ಎಂ. ಅಬ್ದುಲ್ ರೆಹಮಾನ್ ಪಾಷ**
'ನಮ್ಮನೆ', ನಂ. ೮೧/೩೭-೩, ೪ನೇ ಅಡ್ಡರಸ್ತೆ
೧೨ನೇ 'ಡಿ' ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೫೬೦ ೦೧೦

# ಮಹಾತ್ಮರ ಶಿಲ್ಪಗಳು ಮಾರಾಟಕ್ಕಿವೆ



**ನಾ**ನೊಬ್ಬ ಶಿಲ್ಪಿ
ನನ್ನ ಬಳಿ ಮಹಾತ್ಮರ ಶಿಲ್ಪಗಳು ಮಾರಾಟಕ್ಕಿವೆ,
ಬುದ್ಧ ಬಸವ ಗಾಂಧೀ ಅಂಬೇಡ್ಕರ್
ಯಾರದೆಂದರೆ ಅವರದ್ದು
ಸುಂದರವಾದ ರೂಪಶಿಲ್ಪಗಳು, ಕೈಗೆಟುಕುವ ಬೆಲೆಯಲ್ಲಿ.
ನನಗೆ ಗೊತ್ತು ಕೊಳ್ಳುಗರ ಅಭಿರುಚಿಗಳೇನೆಂದು'
ಅವರೆಂದೂ ಕೇಳಿಲ್ಲ ಮಾಡಿಕೊಡಲು ಆ
ಮಹಾತ್ಮರ ತತ್ವಗಳ ಸತ್ವಪೂರ್ಣ ಶಿಲ್ಪಗಳನ್ನು
ಏಕೆಂದರೆ, ಅವೆಲ್ಲ ಕೂಡುರಸ್ತೆಗಳಲ್ಲಿ ಕೂರಿಸಲು,
ಬೇಲಿ ಹಾಕಿ ನಿಲ್ಲಿಸಲು, ವರುಷಕ್ಕೊಮ್ಮೆ ಮೈತೊಳೆದು ಹಾರ ಹಾಕಿ
ಪೂಜಿಸಿ ಜೈಕಾರ ಹಾಕಲು ಸೂಕ್ತವಲ್ಲವಲ್ಲ!
ಎಂದೇ ಅಂಥ ಶಿಲ್ಪಗಳನ್ನು
ನಾನು ಮಾಡಿರುವುದಿಲ್ಲ, ಮಾಡುವುದೂ ಇಲ್ಲ.

ಮೊದಮೊದಲು ತತ್ವಾಧಾರಿತ ಶಿಲ್ಪಗಳನ್ನೇ
ನಾನು ಮಾಡುತ್ತಿದ್ದೆ, ಮಾರುತ್ತಿದ್ದೆ
ಆದರೆ ಈಗೀಗ ಅಂಥ ಶಿಲ್ಪಗಳನ್ನು ಕೊಳ್ಳುವ
ಗಿರಾಕಿಗಳಿಲ್ಲದೇ ಸೋತು ಸೊರಗಿಹೋದೆ.
ಮಹಾತ್ಮರ ನಡೆನುಡಿಗಳನ್ನು'
ಮೈಮನ ತುಂಬಿಕೊಂಡು ಎರಕ ಹೊಯ್ದರೂ
ಗೇಣು ಹೊಟ್ಟೆಯನ್ನೂ ಅವು ತುಂಬಲಿಲ್ಲ!
ಮಹಾತ್ಮರ ತತ್ವಗಳನು ವೇದಿಕೆಯಲ್ಲಿ ಗಂಟೆಗಟ್ಟಲೇ ಉದುರಿಸುವವರ
ನಡೆ ನುಡಿಗಳನ್ನು ಗಮನಿಸಿದಾಗ ಅರಿವಾಯ್ತು...
ನುಡಿಯೊಳಗಾಗಿ ನಡೆಯದಿರ್ದಡೆ.... ಎಂಬ
ಶರಣರ ಮಾತು ಅಸಾಧ್ಯವೇನೋ ಎಂದು !
ಈಗ ನನ್ನ ಶಿಲ್ಪಗಳ ಮಾರಾಟ ಜೋರು,
ಆರ್ಡರ್ ಕೊಟ್ಟರೆ ಯಾವ ಅಳತೆಯಲ್ಲಾದರೂ ಸರಿ,
ಯಾವ ಮಾಧ್ಯಮದಲ್ಲಾದರೂ ಸರಿ,
ಯಾವ ಮಹಾತ್ಮನದಾದರೂ ಸರಿ, ಮಾಡಿಕೊಡುತ್ತೇನೆ
ಮತ್ತೆ ಹೇಳುತ್ತೇನೆ ಮಾಡಲ್ಪಡುವುದು ರೂಪಶಿಲ್ಪಗಳು ಮಾತ್ರ !
ಏಕೆಂದರೆ ಅವು ಮತ್ತೆ ಮತ್ತೆ ಕೆಡವಲ್ಪಡಬೇಕು
ಎರಕಹೊಯ್ದ ಪಡಿಯಚ್ಚುಗಳು ನಗುತ್ತಿರಬೇಕು
ನನ್ನ ವ್ಯಾಪಾರ ನಿಲ್ಲದೇ ಸಾಗಿರಬೇಕು....
ಬನ್ನಿ ಇಂದೇ.... ಶಿಲ್ಪಗಳನ್ನು ಕೊಳ್ಳಿರಿ,
ನನ್ನ ಬಳಿ ಮಹಾತ್ಮರ ಶಿಲ್ಪಗಳು ಮಾರಾಟಕ್ಕಿವೆ.

**ಡಾ॥ ಶಿವಾನಂದ ಎಚ್. ಬಂಟನೂರ**
ಕೇರಾಫ್ ಶಂಭುಲಿಂಗಪ್ಪ, ಡಾ॥ ಸುಹಾಸ್ ಕ್ಲಿನಿಕ್ ಎದುರು, ಬಂಟನೂರ ಕಮಲಾಪುರ – ೫೮೩೨೨೧, ಹಂಪಿ

# ಮೋದಿಮಯ ಭಾರತದ ಭ್ರಮೆ ಮತ್ತು ವಾಸ್ತವಗಳು

ಇದೇ ಮೇ ೨೬ನೇ ದಿನಾಂಕಕ್ಕೆ ನರೇಂದ್ರ ಮೋದಿಯವರು ಭಾರತದ ಪ್ರಧಾನಿಯಾಗಿ ಆಡಳಿತದ ಚುಕ್ಕಾಣಿ ಹಿಡಿದು ನಾಲ್ಕು ವರ್ಷಗಳಾದವು. ಈ ನಾಲ್ಕು ವರ್ಷಗಳ ಅವರ ಆಡಳಿತವನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದಾಗ, ತೃಪ್ತಿಗಿಂತ ನಿರಾಸೆ ಎಲ್ಲೆಡೆ ಎದ್ದು ಕಾಣುತ್ತಿದೆ. ಭಾರತದ ಪ್ರಜ್ಞಾವಂತ ನಾಗರಿಕರನ್ನು ನಿರಂತರವಾಗಿ "ನರೇಂದ್ರ ಮೋದಿಯವರು ಈ ದೇಶದ ಪ್ರಧಾನಿ ಹುದ್ದೆಯಲ್ಲಿದ್ದಾರಾ? ಅಥವಾ ಪಕ್ಷದ ಪ್ರಚಾರಕನಾಗಿ ಕಾರ್ಯ ನಿರ್ವಹಿಸುತ್ತಿದ್ದಾರಾ?" ಎಂಬ ಪ್ರಶ್ನೆ ನಿರಂತರವಾಗಿ ಕಾಡುತ್ತಿದೆ. ಜೊತೆಗೆ ಈ ವಿಷಯ ಜನಸಾಮಾನ್ಯರ ನಡುವೆ ಪದೇ ಪದೇ ಚರ್ಚೆಯಾಗುತ್ತಿದೆ.

ಇತ್ತೀಚೆಗೆ ನಡೆದ ಕರ್ನಾಟಕದ ವಿಧಾನಸಭಾ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಬಹುಮತ ಬಾರದೆ ಅತಂತ್ರ ಸ್ಥಿತಿ ನಿರ್ಮಾಣವಾದಾಗ, ಕಾಂಗ್ರೆಸ್ ಹಾಗೂ ಜೆ.ಡಿ.ಎಸ್. ಪಕ್ಷಗಳು ಮೈತ್ರಿ ಸರ್ಕಾರ ರಚಿಸಲು ನಾನು ಬಿಡುವುದಿಲ್ಲ ಎಂದು ಮೇ ೧೫ರಂದು ಫಲಿತಾಂಶ ಪ್ರಕಟವಾದಾಗ ಸಂಜೆ ನವದೆಹಲಿಯಲ್ಲಿ ಪ್ರಧಾನಿಯವರು ಗುಡುಗಿದ್ದಾರೆ. ಇದು ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆಯ ರಾಷ್ಟ್ರವಾದ ಭಾರತದಲ್ಲಿ ಓರ್ವ ಪ್ರಧಾನಿಯಾಗಿರುವ ವ್ಯಕ್ತಿ ನೀಡಬಹುದಾದ ಹೇಳಿಕೆಯೇ? ಇದು ನಮ್ಮ ಮುಂದಿರುವ ಮಿಲಿಯನ್ ಡಾಲರ್ ಪ್ರಶ್ನೆ. ಕಳೆದ ನಾಲ್ಕು ವರ್ಷಗಳಿಂದ ಇವೊತ್ತಿಗೂ ಮಾಧ್ಯಮವನ್ನು ನೇರವಾಗಿ ಮುಖಾಮುಖಿಯಾಗಿ ಎದುರಿಸಲಾಗದೆ ಅಪಕ್ವ ಮನಃಸ್ಥಿತಿಯ ಪುಕ್ಕಲ ಪ್ರಧಾನಿ ಎಂಬ ಬಿರುದಿಗೆ ಪಾತ್ರರಾಗಿರುವ ನರೇಂದ್ರ ಮೋದಿಯವರು ಪಕ್ಷದ ವೇದಿಕೆಗಳಲ್ಲಿ, ಚುನಾವಣಾ ಪ್ರಚಾರಗಳಲ್ಲಿ ಪುಂಖಾನುಪುಂಖವಾಗಿ ಅಣಿಮುತ್ತುಗಳನ್ನು ಉದುರಿಸಬಲ್ಲ ಹಾಗೂ ಅದ್ಭುತವಾಗಿ ನಟಿಸಬಲ್ಲ ಚಾಣಾಕ್ಷ ರಾಜಕಾರಣಿಯಾಗಿ ಕಾಣುತ್ತಿದ್ದಾರೆ.

ದೇಶದ ಒಬ್ಬ ಪ್ರಧಾನಿಯಾಗಿ ತಾನು ಆಡಬಹುದಾದ ಮಾತುಗಳಲ್ಲಿ ಎಚ್ಚರಿಕೆ ವಹಿಸಬೇಕು ಮತ್ತು ತನ್ನ ಮಾತುಗಳನ್ನು ಇಡೀ ದೇಶದ ನಾಗರಿಕರು ಮಾತ್ರವಲ್ಲದೆ, ಜಗತ್ತಿನ ಮಾಧ್ಯಮಗಳು ಎಚ್ಚರಿಕೆಯಿಂದ ಗಮನಿಸುತ್ತವೆ ಎಂಬ ಕನಿಷ್ಠ ತಿಳುವಳಿಕೆಯಿಲ್ಲದ ನರೇಂದ್ರ ಮೋದಿಯವರು ಒಬ್ಬ ಸಾಮಾನ್ಯ ಶಾಸಕ ಅಥವಾ ಸಂಸದನಂತೆ ಭಾರತದ ರಾಜಕೀಯ ಇತಿಹಾಸ ಕುರಿತು ಅಪ್ರಬುದ್ಧತೆಯಿಂದ ಮಾತನಾಡುತ್ತಾ ನಗೆಪಾಟಲಿಗೆ ಈಡಾಗುತ್ತಿದ್ದಾರೆ. ದೆಹಲಿಯಲ್ಲಿ ಮೆಟ್ರೊ ರೈಲು ಸಂಚಾರ ಸ್ಥಾಪಿಸುವುದರ ಮೂಲಕ ಅಟಲ್ ಬಿಹಾರಿ ವಾಜಪೇಯಿ ಅವರು ಭಾರತಕ್ಕೆ ಅತ್ಯಮೂಲ್ಯ ಕೊಡುಗೆ ನೀಡಿದರು ಎಂಬ ಮಾತನಾಡಿದ ಈ ದೇಶದ ಪ್ರಧಾನಿಗೆ ಭಾರತದಲ್ಲಿ ಪ್ರಥಮ ಮೆಟ್ರೊ ರೈಲು ಸಂಚಾರವು ಇಂದಿರಾ ಗಾಂಧಿಯವರು ಪ್ರಧಾನಿಯಾಗಿದ್ದ



ಸಂದರ್ಭದಲ್ಲಿ (೧೯೮೪) ಎಡರಂಗ ಆಡಳಿತವಿದ್ದ ಅಂದರೆ, ಜ್ಯೋತಿಬಸು ಅವರು ಮುಖ್ಯಮಂತ್ರಿಯಾಗಿದ್ದ ಪಶ್ಚಿಮ ಬಂಗಾಳದ ಕೋಲ್ಕತ್ತ ನಗರದಲ್ಲಿ ಆರಂಭವಾಯಿತು ಎಂಬ ಕನಿಷ್ಠ ತಿಳುವಳಿಕೆ ಇಲ್ಲವಾಗಿದೆ. ಇದರ ಜೊತೆಗೆ ಇತ್ತೀಚೆಗೆ ಕರ್ನಾಟಕದ ಚುನಾವಣಾ ಪ್ರಚಾರದ ಸಂದರ್ಭದಲ್ಲಿ ನೆಹರೂ ಅವರಿಂದ ಸೇನಾ ದಂಡನಾಯಕರಾಗಿದ್ದ ಜನರಲ್ ಕಾರಿಯಪ್ಪನವರಿಗೆ ಅಪಮಾನವಾಗಿತ್ತು ಎಂಬ ಹೇಳಿಕೆಯನ್ನು ನೀಡುವುದರ ಮೂಲಕ ಮುಜುಗರಕ್ಕೆ ಒಳಗಾದರು.

ಯಾವುದೇ ಒಬ್ಬ ಜನನಾಯಕ ಒಳ್ಳೆಯ ಆಡಳಿತಗಾರನಾಗಬೇಕಾದರೆ, ಆತನಿಗೆ ಸ್ಥಿತಪ್ರಜ್ಞೆ ಇರಬೇಕು. ತನ್ನ ಬಳಿ ವಿವಿಧ ರಂಗಗಳ ತಜ್ಞರನ್ನು ಇಟ್ಟುಕೊಂಡು ಅವರ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಮುಂದುವರಿಯಬೇಕು. ಆದರೆ ಅಂತಹ ಯಾವುದೇ ಲಕ್ಷಣಗಳು ಮೋದಿಯವರಲ್ಲಿ ಕಂಡುಬರುವುದಿಲ್ಲ. ಅವರದೇ ಆದ ಪಕ್ಷದ ಹಿರಿಯ ಸಂಸದ ಹಾಗೂ ಹಿಂದಿ ಚಿತ್ರರಂಗದ ಹಿರಿಯ ನಟ ಶತ್ರುಘ್ನ ಸಿನ್ಹಾ ಅವರು ಹೇಳುವ ಹಾಗೆ ಇದೀಗ ಭಾರತೀಯ ಜನತಾ ಪಕ್ಷವು ಇಬ್ಬರು ಸೈನಿಕರ ಸೇನೆಯಾಗಿದೆ. (ಒಬ್ಬರು ಮೋದಿ, ಮತ್ತೊಬ್ಬರು ಅವರ ಭಂಟ ಅಮಿತ್ ಶಾ). ಪಕ್ಷದಲ್ಲಿ ಆಂತರಿಕ ಪ್ರಜಾಪ್ರಭುತ್ವ ವ್ಯವಸ್ಥೆಯಿಲ್ಲದ ಕಾರಣದಿಂದಾಗಿ ಮತ್ತು ಹಿರಿಯ ನಾಯಕರನ್ನು ಮೂಲೆಗುಂಪು ಮಾಡಿದ ಪರಿಣಾಮವಾಗಿ ಎಲ್ಲಾ ತತ್ವಸಿದ್ಧಾಂತಗಳನ್ನು ಗಾಳಿಗೆ ತೂರಿ ದೇಶಾದ್ಯಂತ ಬಿ.ಜೆ.ಪಿ. ಆಡಳಿತವನ್ನು ಪ್ರತಿಷ್ಠಾಪಿಸುವುದು ನಮ್ಮ ಗುರಿ ಎಂಬಂತೆ ಗುಜರಾತಿನ ಈ ಗುರು ಶಿಷ್ಯರು ವರ್ತಿಸುವುದರ ಮೂಲಕ ಪಕ್ಷದ ಹಿರಿಯ ನಾಯಕರಾದ ಯಶವಂತ್ ಸಿನ್ಹಾ ಹಾಗೂ ಅರುಣ್ ಶೌರಿಯವರ ಕಟು ಟೀಕೆಗೆ ಗುರಿಯಾಗಿದ್ದಾರೆ.

ಮೋದಿಯ ಆಳ್ವಿಕೆಯ ನಾಲ್ಕು ವರ್ಷಗಳ ಅವಧಿಯಲ್ಲಿ ಭಾರತದ ಸಾಮಾಜಿಕ, ಆರ್ಥಿಕ ವಲಯವೂ

**ಡಾ॥ ಎನ್. ಜಗದೀಶ್ ಕೊಪ್ಪ**

ಸೇರಿದಂತೆ ಔದ್ಯೋಗಿಕ ವಲಯಗಳಲ್ಲಿ ಅಲ್ಲೋಲ ಕಲ್ಲೋಲವೇರ್ಪಟ್ಟಿದೆ. ಇವುಗಳ ನಡುವೆಯೂ ತಿಂಗಳಿಗೊಂದು ಆಕರ್ಷಕ ಶೀರ್ಷಿಕೆಯ ಯೋಜನೆಗಳನ್ನು ಘೋಷಿಸುವುದು ಮೋದಿಯವರ ಹವ್ಯಾಸವಾಗಿದೆ. ಈ ಹಿಂದೆ ಘೋಷಿಸಲಾಗಿದ್ದ ಸ್ವಚ್ಛ ಭಾರತ್ ಆಂದೋಲನ, ನಮಾಮಿ ಗಂಗಾ ಯೋಜನಾ, ಸ್ಮಾರ್ಟ್ ಸಿಟೀಸ್ (ಪರಿಪೂರ್ಣ ನಗರಗಳು), ಮೇಕಿನ್ ಇಂಡಿಯಾ, ಡಿಜಿಟಲ್ ಇಂಡಿಯಾ, ಬೇಟಿ ಬಚಾವ್ ಯೋಜನೆ, ಹೀಗೆ ಡಜನ್ ಗಟ್ಟಲೆ ಯೋಜನೆಗಳಲ್ಲಿ ಕೆಲವು ಕಾಲು ಮುರಿದುಕೊಂಡು ಸ್ಥಗಿತವಾಗಿದ್ದರೆ, ಇನ್ನು ಹಲವು ಯೋಜನೆಗಳು ನಿಧಾನವಾಗಿ ತೆವಳುತ್ತಿವೆ.




೨೦೧೪ರ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಮತ್ತು ಪ್ರಧಾನಿಯಾದ ನಂತರ ನರೇಂದ್ರ ಮೋದಿಯವರು ತುಂಬ ಆವೇಶಭರಿತ ಮಾತುಗಳಲ್ಲಿ ಹೇಳಿದ ಮಾತುಗಳೆಂದರೆ, ವಿದೇಶಗಳಲ್ಲಿರುವ ಭಾರತದ ಕಪ್ಪು ಹಣವನ್ನು ವಾಪಸ್ ತರುತ್ತೇನೆ. ಎಲ್ಲಾ ಭಾರತೀಯರ ಖಾತೆಗೆ ತಲಾ ಹದಿನೈದು ಲಕ್ಷ ರೂಪಾಯಿನಂತೆ ಜಮಾ ಮಾಡುತ್ತೀನಿ ಎನ್ನುವುದು ಮೊದಲ ಭರವಸೆ. ಎರಡನೆಯದು ಭಾರತದಲ್ಲಿ ಪ್ರತಿ ವರ್ಷ ಎರಡು ಕೋಟಿ ಉದ್ಯೋಗ ಸೃಷ್ಟಿ ಮಾಡುತ್ತೀನಿ ಎಂಬ ಮಾತು. ಭಾರತದ ವಾಸ್ತವವನ್ನು ಅರ್ಥಮಾಡಿಕೊಳ್ಳಲಾರದ ಒಬ್ಬ ಅನನುಭವಿ ರಾಜಕಾರಣಿಯಂತೆ ಮಾತನಾಡಿದ ನರೇಂದ್ರ ಮೋದಿಯವರು ತಾವು ನೀಡಿದ ತಪ್ಪು ಭರವಸೆಗಳ ಪ್ರತಿಫಲವೆಂಬಂತೆ ಈಗ ಮಾಧ್ಯಮಗಳನ್ನು ಎದುರಿಸಲಾರದೆ ಕಣ್ಣು ತಪ್ಪಿಸಿಕೊಂಡು ಓಡಾಡುವಂತಾಗಿದೆ. ಮೋದಿಯವರು ಕಪ್ಪು ಹಣವನ್ನು ಭಾರತಕ್ಕೆ ವಾಪಸ್ ತರುವುದು ಬೇಡ, ಸದ್ಯಕ್ಕೆ ಕೋಟಿಗಟ್ಟಲೆ ಸಾಲಪಡೆದು ಇಲ್ಲಿನ ಬ್ಯಾಂಕ್‌ಗಳಿಗೆ ವಂಚಿಸಿ ಓಡಿಹೋಗುತ್ತಿರುವ ಉದ್ಯಮಿಗಳಿಗೆ ಕಡಿವಾಣ ಹಾಕಿದರೆ ಸಾಕಾಗಿದೆ. ಭಾರತದ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಅನುತ್ಪಾದಕ ಆಸ್ತಿ, ಅಂದರೆ ವಸೂಲಿಯಾಗದ ಸಾಲದ ಪ್ರಮಾಣ, ಬರೋಬ್ಬರಿ ಒಂಬತ್ತು ಲಕ್ಷ ಕೋಟಿ ರೂಪಾಯಿಗೆ ಏರಿದೆ. ಈಗಾಗಲೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಸೇರಿದಂತೆ ಹಲವು ಪ್ರಮುಖ ಬ್ಯಾಂಕ್‌ಗಳು ತಮ್ಮ ಆಯವ್ಯಯ ಪತ್ರದಲ್ಲಿ ಕೆಲವು ಸಾಲದ ಖಾತೆಗಳನ್ನು ಎಂದಿಗೂ ವಸೂಲಿಯಾಗದ ಸಾಲ ಎಂದು ಪರಿಗಣಿಸಿ ಎರಡು ಲಕ್ಷ ಕೋಟಿ ರೂಪಾಯಿ ಲೆಕ್ಕವನ್ನು ಅಳಿಸಿಹಾಕಿವೆ. (ಇದನ್ನು ಬ್ಯಾಂಕಿಂಗ್ ಪರಿಭಾಷೆಯಲ್ಲಿ ಟ್ರಿಮ್ಮಿಂಗ್ ಎಂದು ಕರೆಯಲಾಗುತ್ತದೆ)

ಮೋದಿಯವರ ಆಡಳಿತದಲ್ಲಿ ಬ್ಯಾಂಕುಗಳ ಕಾರ್ಯವೈಖರಿ ಹೇಗಿದೆಯೆಂದರೆ, ಬ್ಯಾಂಕುಗಳ ಮೇಲಿನ ನಿಗಾ ವಹಿಸುವುದು ಸೇರಿದಂತೆ, ದೇಶದ ಆರ್ಥಿಕ ಚಟುವಟಿಕೆಯನ್ನು ನಿಯಂತ್ರಿಸುವ ಕೇಂದ್ರ ಬ್ಯಾಂಕ್ ಎಂದು ಕರೆಯಲಾಗುವ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಇತ್ತೀಚೆಗೆ ಹೇಳಿಕೆಯೊಂದನ್ನು ಬಿಡುಗಡೆ ಮಾಡಿ, ದೇಶದಲ್ಲಿ ರೈತರಿಗೆ ನೀಡಲಾಗಿರುವ ಸಬ್ಸಿಡಿ ವಿವರಗಳ ಅಂಕಿ ಅಂಶಗಳು ತನ್ನ ಬಳಿ ಇಲ್ಲ ಎಂದು ತಿಳಿಸಿದೆ. ೨೦೧೬ರ ನವಂಬರ್ ತಿಂಗಳಿನಲ್ಲಿ ಕೇಂದ್ರ ಸರ್ಕಾರವು ನೋಟು ನಿಷೇಧ ಆಜ್ಞೆಯನ್ನು ಜಾರಿಗೆ ತಂದಾಗ ಹಳೆಯ ನೋಟುಗಳ ಬದಲಿಗೆ ಹೊಸ ಐನೂರು ಹಾಗೂ ಎರಡು ಸಾವಿರ ಮೌಲ್ಯದ ಹೊಸ ನೋಟುಗಳನ್ನು ರಿಸರ್ವ್ ಬ್ಯಾಂಕ್ ವಿತರಿಸಿತು. ಒಂದು ವರ್ಷದ ನಂತರವೂ ಹಳೆಯ ನೋಟುಗಳ ಸಂಗ್ರಹ ಕುರಿತು ಮಾಹಿತಿ ನೀಡಲಾರದೆ, ಇನ್ನೂ ಎಣಿಕೆ ಕಾರ್ಯ ಮುಂದುವರಿಯುತ್ತಿದೆ ಎಂಬ ಬೇಜವಾಬ್ದಾರಿ ಹೇಳಿಕೆಯನ್ನು ನೀಡಿ ದೇಶದೆದುರು ಬೆತ್ತಲಾಗಿತ್ತು. ಆ ಕೆಟ್ಟ ಪರಂಪರೆ ಇಂದಿಗೂ ಸಹ ಮುಂದುವರಿದಿದೆ. ರಿಸರ್ವ್ ಬ್ಯಾಂಕಿನ ನಿಷ್ಕ್ರಿಯತೆಯಿಂದಾಗಿ ಭಾರತದ ಬ್ಯಾಂಕುಗಳು ದಿವಾಳಿಯ ಅಂಚಿನತ್ತ ದೂಡಲ್ಪಟ್ಟಿವೆ.

ಇನ್ನು ಉದ್ಯೋಗ ಸೃಷ್ಟಿಯ ಕುರಿತು ಪ್ರಧಾನಿ ಆಡಿದ ಮಾತುಗಳು ಅವರಿಗೆ ತಿರುಗು ಬಾಣವಾದವು. ಈ ದೇಶದ ಬಡವರು ಮತ್ತು ಬಡ ನಿರುದ್ಯೋಗಿಗಳು ಬದುಕುವ ಕಲೆಯನ್ನು ಪ್ರಧಾನಿಯಿಂದ ಕಲಿಯಬೇಕಿಲ್ಲ. ಪಕೋಡ ಮಾರಾಟ ಮಾಡಿ ದಿನಕ್ಕೆ ನೂರು ಅಥವಾ ಇನ್ನೂರು ಸಂಪಾದಿಸಬಹುದು ಎಂಬ ಪ್ರಧಾನಿಯ ಮಾತು ಅವಿವೇಕತನದ ಪರಮಾವಧಿ ಎಂದು ಬಣ್ಣಿಸಬಹುದು. ದೇಶದಲ್ಲಿರುವ ಜನಸಂಖ್ಯೆಯ ಪ್ರಮಾಣದಲ್ಲಿ ಶೇಕಡ ೬೫ರಷ್ಟು ಮಂದಿ ೩೫ ವರ್ಷದ ಒಳಗಿನ ಯುವಕರಾಗಿದ್ದಾರೆ. ಇವರಲ್ಲಿ ಪ್ರತಿ ವರ್ಷ ಮೂರು ಕೋಟಿ ಮಂದಿ ಉದ್ಯೋಗ ಮಾರುಕಟ್ಟೆಗೆ ಬರುತ್ತಿದ್ದಾರೆ. ಆದರೆ, ಭಾರತದ ಮಾಹಿತಿ ತಂತ್ರಜ್ಞಾನ, ಸೇವಾ ವಲಯ, ಕಟ್ಟಡ ನಿರ್ಮಾಣ ಇತ್ಯಾದಿ ವಲಯಗಳಿಂದ ಸೃಷ್ಟಿಯಾಗುತ್ತಿರುವ ಉದ್ಯೋಗದ ಪ್ರಮಾಣ ಕೇವಲ ೬೦ ಲಕ್ಷ ಮಾತ್ರ. ಉಳಿದವರು ಅತಂತ್ರರಾಗಿದ್ದಾರೆ. ಜೊತೆಗೆ ಹಿಂಸಾಚಾರ ಮತ್ತು ಅಪರಾಧದಂತಹ ಕ್ರಿಯೆಗಳಲ್ಲಿ ತಮಗರಿವಿಲ್ಲದಂತೆ ತೊಡಗಿಕೊಂಡಿದ್ದಾರೆ. ಭಾರತದಲ್ಲಿ ತ್ರಿಪುರಾದಲ್ಲಿನ ಶೇಕಡ ೩೦.೩ರಷ್ಟು, ಹರ್ಯಾಣದಲ್ಲಿ ಶೇಕಡ ೧೫.೩ರಷ್ಟು ಇದ್ದರೆ, ಕೇರಳದಲ್ಲಿ ಶೇಕಡ ೧೦.೭ರಷ್ಟು, ಗುಜರಾತಿನಲ್ಲಿ ಶೇಕಡ ೯.೭ರಷ್ಟು, ಅಸ್ಸಾಂ ರಾಜ್ಯದಲ್ಲಿ ಶೇಕಡ ೯.೮ರಷ್ಟು ನಿರುದ್ಯೋಗಿಗಳಿದ್ದಾರೆ. ಈಶಾನ್ಯ ರಾಜ್ಯಗಳ ಮೇಲೆ ದಂಡೆತ್ತಿ ಹೋಗಿ ಬಿ.ಜೆ.ಪಿ. ಸರ್ಕಾರಗಳನ್ನು ಸ್ಥಾಪಿಸಿ ಬಂದ ಮಾನ್ಯ ಪ್ರಧಾನಿಯವರ ಬಳಿ ನಿರುದ್ಯೋಗ ನಿವಾರಣೆಗೆ ಯಾವುದೇ ಮಂತ್ರದಂಡವಿಲ್ಲದೆ ಪಕೋಡ ಮಂತ್ರಕ್ಕೆ ಮೊರೆ ಹೋಗಿದ್ದಾರೆ.

ಯಾವುದೇ ಅಂಜಿಕೆ ಇಲ್ಲದೆ, ಇತಿಹಾಸದ ಪ್ರಜ್ಞೆ ಅಥವಾ ಕಣ್ಣಮುಂದಿನ ವಾಸ್ತವ ಅಂಕಿ ಅಂಶಗಳನ್ನು ಪರಿಗಣಿಸದೆ, ಮಾತನಾಡುವ ಪ್ರಧಾನಿಯವರು ಕರ್ನಾಟಕದ ಚುನಾವಣೆಯ ಸಂದರ್ಭದಲ್ಲಿ ಕಾಂಗ್ರೆಸ್ ಸರ್ಕಾರದ ಆಡಳಿತಾವಧಿಯಲ್ಲಿ ಬೆಂಗಳೂರು ನಗರ ಕಸದ ನಗರವಾಗಿದೆ ಎಂದು ಟೀಕಿಸಿದರು. ಆದರೆ, ದೇಶದ ಅತ್ಯಂತ ಕೊಳಚೆ ಹಾಗೂ ಕಸದ ನಗರಗಳೆಂದು ಪರಿಗಣಿಸಿರುವ ನಲವತ್ತು ನಗರಗಳಲ್ಲಿ ಅವರು ಪ್ರತಿನಿಧಿಸುವ ವಾರಣಾಸಿ ನಗರವು ಹದಿನಾಲ್ಕನೆಯ ಸ್ಥಾನ ಪಡೆದಿದೆ. ಇಡೀ ದೇಶದಲ್ಲಿ ವಾಯುಮಾಲಿನ್ಯಕ್ಕೆ ಕುಖ್ಯಾತಿ ಪಡೆದಿರುವ ದೆಹಲಿ ನಗರವನ್ನು ಸುಧಾರಿಸಲಾರದ ಪ್ರಧಾನಿಯವರ ಮಾತುಗಳನ್ನು ಯಾರೊಬ್ಬರೂ ಗಂಭೀರವಾಗಿ ಪರಿಗಣಿಸುತ್ತಿಲ್ಲ. ಇತ್ತೀಚೆಗೆ ಆಡಲಾದ ಭಾರತದ ಹಳ್ಳಿಗಳು ಸಂಪೂರ್ಣ ವಿದ್ಯುತ್‌ಮಯವಾಗಿವೆ ಎಂಬ ಅವರ ಮಾತುಗಳು ಸಹ ಹಾಸ್ಯಕ್ಕೆ ಗುರಿಯಾದವು. ೨೦೧೫ರ ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ ಒಂದು ಸಾವಿರದ ದಿನಗಳಲ್ಲಿ ದೇಶದ ೧೮,೪೫೨ ಹಳ್ಳಿಗಳನ್ನು ಕತ್ತಲು ಮುಕ್ತ ಹಳ್ಳಿಗಳನ್ನಾಗಿ ಮಾಡುತ್ತೇವೆ ಎಂದು ಘೋಷಿಸಿದ್ದರು. ಆದರೆ, ೧೫,೧೮೩ ಹಳ್ಳಿಗಳಿಗೆ ಮಾತ್ರ ವಿದ್ಯುತ್ ಸಂಪರ್ಕ ಕಲ್ಪಿಸಲು ಸಾಧ್ಯವಾಯಿತು. ಅಂದರೆ, ಶೇಕಡ ೭೮ರಷ್ಟು ಸಾಧನೆ ಸಾಧ್ಯವಾಯಿತು. ದೇಶದ ಆರು ಲಕ್ಷ ಹಳ್ಳಿಗಳಲ್ಲಿ ನೂರಕ್ಕೆ ನೂರರಷ್ಟು ವಿದ್ಯುತ್ ಸಂಪರ್ಕ ಇರುವ ಮನೆಗಳ ಸಂಖ್ಯೆ ಕೇವಲ ೧೩೦೧ ಹಳ್ಳಿಗಳಲ್ಲಿ ಮಾತ್ರ. ಅಂದರೆ, ಶೇಕಡ ೦.೨೧ರಷ್ಟು ಪ್ರಮಾಣ ಮಾತ್ರ. ಇನ್ನೂ ಭಾರತದಲ್ಲಿ ಸಾವಿರಾರು ಹಳ್ಳಿಗಳು, ವಿದ್ಯುತ್, ಸಾರಿಗೆ, ರಸ್ತೆಯಂತಹ ಸೌಲಭ್ಯಗಳಿಂದ ವಂಚಿತವಾಗಿವೆ.

ಇಂತಹ ಮೂಲಭೂತ ಸೌಕರ್ಯಗಳ ಜೊತೆಗೆ ಮನುಷ್ಯನ ಮೂಲಭೂತ ಬೇಡಿಕೆಗಳಾದ ಶಿಕ್ಷಣ, ಆರೋಗ್ಯ, ವಸತಿ ಮುಂತಾದ ರಂಗಗಳಲ್ಲಿ ಪ್ರಗತಿಗಿಂತ ಶೂನ್ಯವೇ ಎದ್ದು ಕಾಣುತ್ತಿದೆ. ಪ್ರಧಾನಿ ಹುದ್ದೆಗೇರಿದ ವ್ಯಕ್ತಿ ಅಥವಾ ಪಕ್ಷ ಪ್ರಾದೇಶಿಕ ತಾರತಮ್ಯ ಮಾಡದೇ ಎಲ್ಲರನ್ನೂ, ಎಲ್ಲವನ್ನೂ ಸಮಾನ ಭಾವದಿಂದ ಕಾಣುತ್ತಾ ಅಭಿವೃದ್ಧಿ ಪಥದತ್ತ ಕೊಂಡೊಯ್ಯಬೇಕು. ಆದರೆ, ಕಾಂಗ್ರೆಸ್ ಮುಕ್ತ ಭಾರತ ತನ್ನ ಏಕೈಕ ಉದ್ದೇಶವೆಂಬಂತೆ ಹೊರಟಿರುವ ಪ್ರಧಾನಿಗೆ ಉಳಿದೆಲ್ಲವೂ ಈಗ ನಗಣ್ಯವಾಗಿದೆ. ಮುಂದೆ ಎದುರಾಗಲಿರುವ ಲೋಕಸಭಾ ಚುನಾವಣೆಯಲ್ಲಿ ಮೋದಿಯವರು ಇದಕ್ಕೆ ತಕ್ಕ ಪ್ರತಿಫಲವನ್ನು ಉಣ್ಣುವ ದಿನಗಳು ದೂರವಿಲ್ಲ.

**ಡಾ॥ ಎನ್. ಜಗದೀಶ್ ಕೊಪ್ಪ**
ನಂ.೧೦೩, ಅಕ್ಷರ, ಆರೋಗ್ಯ ನಗರ ಬಡಾವಣೆ
ತೇಜಸ್ವಿ ನಗರ, ಧಾರವಾಡ–೫೮೦ ೦೦೨

# ಅಕ್ಷರ ಸ್ಫೋಟ ವಚನ ಚಳವಳಿ

## –ಹೀಗೊಂದು ಜಿಜ್ಞಾಸೆ



(ಕ್ರಿ.ಶ. ೭೫೦) ಅಕ್ಷರಮೇರು ರಚಿಸಿರುವ ಕಪ್ಪೆಅರಭಟ್ಟನ ಶಾಸನ

'ಅನುಭವ ಮಂಟಪ'ದಲ್ಲಿ ಜಾತ್ಯತೀತವಾಗಿ ಸೇರುತ್ತಿದ್ದ 'ಶರಣ–ಶರಣೆ'ಯರ ಶೈಕ್ಷಣಿಕ ವಿದ್ಯಾರ್ಹತೆಗಳು ಸ್ಪಷ್ಟವಿಲ್ಲದಿದ್ದರೂ ಅವರು ತಮ್ಮ ಕುಲ ಕಸುಬುಗಳಲ್ಲಿ ಪರಿಣತಿ ಸಂಪಾದಿಸಿದ್ದವರು, ಅಷ್ಟೆ. ಆದರೆ ಅವರ ಅಭಿವ್ಯಕ್ತಿ ಸಾಮರ್ಥ್ಯ ಸಾರ್ವಕಾಲಿಕ ಶ್ರೇಷ್ಠವೆನ್ನಿಸಿದೆ. ಬದುಕು ನಡೆಯುವುದು ಮಾತಿನಿಂದ, ಗಮಕ–ಚಮಕದಿಂದಲ್ಲ! ಇಲ್ಲಿ ನಡೆದದ್ದನ್ನು 'ಅಕ್ಷರ ಲೋಕ'ದ ಮಹಾ ಸ್ಫೋಟವೆನ್ನಬಹುದು. ಹೇಳಿದ್ದನ್ನು ಕೇಳಿ, ವಿಚಾರಿಸದೆ, ವಿವೇಚಿಸದೆ, ಅನುಸರಿಸುವ ವಿಧಾನದ 'ಶ್ರವಣ–ಸಂಸ್ಕೃತಿಯೂ' ದುಡಿದುಣ್ಣುವ 'ಶರಣ ಸಂಸ್ಕೃತಿ'ಗೆ ನಾಂದಿ ಹಾಡಿತು! ಕಾಯಕಕ್ಕೆ ಅಗ್ರ ಪಟ್ಟ, ಸೋಮಾರಿತನಕ್ಕಲ್ಲ. ನಡೆದಂತೆ ನುಡಿವ, ನುಡಿದಂತೆ ನಡೆವ ಶರಣರಿಂದ 'ವಚನ'ಗಳ ರಚನೆ ಓತಪ್ರೋತವಾಗಿ ಸಾಗಿತು. ವಚನ ಎಂದರೆ ಪ್ರಮಾಣಿಸಿದ ನುಡಿ, ಮಾತು, ಅದು ಮನ ಕಂಡ ಸತ್ಯ.

**ಪ್ರೊ|| ಶೇಷಾಚಲ ಹವಾಲ್ದಾರ್**

**ಕ**ನ್ನಡ ಆಡು ನುಡಿಗೆ ಸುಮಾರು ೩–೪ ಸಾವಿರ ವರ್ಷಗಳ ಇತಿಹಾಸವಿದೆ. ಗ್ರೀಕರ ಸಾಹಿತ್ಯದಲ್ಲೂ ನಮ್ಮ ನುಡಿಯ ಕೆಲ ಪದಗಳಿವೆಯೆಂದು ಸಂಶೋಧಕರ ಅಭಿಮತ. ಪ್ರಾಕೃತ, ಸಂಸ್ಕೃತ, ಪಾಲಿ, ದ್ರಾವಿಡ ಹಾಗೂ ಇನ್ನಿತರ ಭಾಷಾ ಕುಸುಮಗಳ ನಡುವೆ ಅರಳಿದ ಕನ್ನಡ ಭಾಷೆ, ಕಾಲದಿಂದ ಕಾಲಕ್ಕಾಗುವ ಬದಲಾವಣೆಗಳನ್ನು ಮೈಗೂಡಿಸಿಕೊಳ್ಳುತ್ತ, ಹರಿವ ನೀರಿನಂತೆ ಹೊಸ ಹೊಸ ಪ್ರದೇಶಗಳನ್ನು ಸ್ಪರ್ಶಿಸುತ್ತ, ನಿರಂತರ ವಾಹಿನಿಯಾಗಿ ಇಂದಿನವರೆಗೂ ಬಂದು ತಲುಪಿದೆ, ತನ್ನದೇ ಸೊಗಡನ್ನು ಮೈಗೂಡಿಸಿ ಕೊಂಡಿದೆ, ಮತ್ತೂ ಮುಂದುವರಿಯುತ್ತಿರುತ್ತದೆ. ನಮ್ಮ ಕನ್ನಡ–ದ್ರಾವಿಡ ನುಡಿಗಳಾದ ತಮಿಳು, ತೆಲುಗು, ಮಲೆಯಾಳಿ ನಂತರ ದಖನ್ ಪ್ರಸ್ಥಭೂಮಿಯ ಉಲಿಗೆ ಸೇರ್ಪಡೆಗೊಂಡ ದಖನಿ ಉರ್ದು, ಪೋರ್ಚುಗೀಸ್, ಮರಾಠಿ, ಫ್ರೆಂಚ್ ಹಾಗೂ ಇಂಗ್ಲಿಷ್ ಮುಂತಾದ ಭಾಷೆಗಳನ್ನರಗಿಸಿಕೊಂಡು ಭಾರತೀಯ ಸಾಹಿತ್ಯ ಲೋಕದ ಅತ್ಯುನ್ನತ ಪ್ರಶಸ್ತಿಯಾದ 'ಜ್ಞಾನಪೀಠ ಪುರಸ್ಕಾರ'ವನ್ನು ಎಂಟು ಬಾರಿ ಮುಡಿಗೇರಿಸಿಕೊಂಡಿದೆ. ಈ ನುಡಿಯ ಬೇರಿನಡಿಯ ಬಗ್ಗೆ ಸಂಶೋಧಕರು ಅನೇಕರು ತಮ್ಮ ತಮ್ಮ ತರ್ಕಾವಳಿಗಳನ್ನು ಮಂಡಿಸಿದ್ದಾರೆ. ಅವರ ನಡುವೆ ನುಸುಳಿ ನನ್ನ ಅನಿಸಿಕೆಗಳನ್ನು ಹರಿಬಿಡುವ ಕೆಲಸ ಮಾಡುತ್ತಿದ್ದೇನೆ – ವಿನಿಮಯ ಮಾಡಿಕೊಳ್ಳುತ್ತಿದ್ದೇನೆ.

ಈ ನಾಡನ್ನು ಅನೇಕ ರಾಜ ಮನೆತನಗಳು ಆಳಿವೆ.

ನಂದ, ಮೌರ್ಯ, ಶಾತವಾಹನ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರು, ಸೇವುಣರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಬಹಮನಿಗಳು, ಆದಿಲ್‌ಷಾಹಿಗಳು, ಹೈದರ್ ಅಲಿ, ಟಿಪ್ಪು ಸುಲ್ತಾನ್, ಒಡೆಯರ್ ಮನೆತನ, ಕಟ್ಟ ಕಡೆಗೆ ಈಸ್ಟ್ ಇಂಡಿಯಾ ಕಂಪನಿ ಹೀಗೆ ಹಲವಾರು ಕಾಲಘಟ್ಟಗಳಲ್ಲಿ ಮೂಡಿಬಂದ ರಾಜಕೀಯ, ಭಾಷಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಒತ್ತಡ ಸಹಿಸಿಕೊಂಡು, ಅವೆಲ್ಲವುಗಳನ್ನು ಅರಗಿಸಿಕೊಳ್ಳುತ್ತ, ಮೈಗೂಡಿಸಿಕೊಳ್ಳುತ್ತ, ಪುಟಿದೇಳುತ್ತ ನಾಡು–ನುಡಿ ಸಹಜವಾಗಿ ಬೆಳೆದಿದೆ. ಇದು ಈ ಸೀಮೆಯ ಜಾಯಮಾನ! ಪ್ರಾದೇಶಿಕ ಸಣ್ಣಪುಟ್ಟ ರಾಜ ಮನೆತನಗಳ ಕೊಡುಗೆಯೂ ಇಲ್ಲಿ ಅನುಪಮ.

ಕನ್ನಡಿಗರಿಗೆ ತಮಿಳರಿಂದ ಸ್ವಾತಂತ್ರ್ಯ ದೊರಕಿಸಿಕೊಟ್ಟ ಶ್ರೇಯಸ್ಸು ಸ್ವಾಭಿಮಾನಿ ಮಯೂರ ಶರ್ಮನಿಗೆ ಸಲ್ಲುತ್ತದೆ – ಅದೂ ಪ್ರತಿಭಟನೆಯಿಂದಾಗಿ! ಕನ್ನಡ ನಾಡು–ನುಡಿಯ ಅಸಲಿ ಹುಟ್ಟಿನ ಬೀಜ ಇಲ್ಲಿದೆ. ಇದು ಮೊದಲ ಬಾರಿಗೆ ನಾಡು–ನುಡಿಯ ಪತಾಕೆ ಹಾರಾಡಿದ ಕಾಲ! ಮಯೂರ ಶರ್ಮ ಮಯೂರ ವರ್ಮನಾಗಿ ರೂಪಾಂತರ ಹೊಂದಿದ ಕಾಲಾವಧಿ!

ನಂತರ ೫ನೆಯ ಶತಮಾನದ ಮಧ್ಯಭಾಗದಲ್ಲಾಳುತ್ತಿದ್ದ ಗಂಗದೊರೆ ದುರ್ವಿನೀತ ಗದ್ಯ–ಪದ್ಯ ಮತ್ತು ನಾಟಕ ಈ ಮೂರು ಪ್ರಕಾರಗಳನ್ನು ರಚಿಸುವಲ್ಲಿ ಪ್ರೌಢ ಪಾಂಡಿತ್ಯ ಹೊಂದಿದ್ದ. ಆಗ ಪ್ರಚಲಿತವಿದ್ದ ಪ್ರಾಕೃತ, ಸಂಸ್ಕೃತ ಹಾಗೂ ಕನ್ನಡ ಈ ಮೂರು ಭಾಷೆಗಳಲ್ಲಿ ತನ್ನ ಅಭಿವ್ಯಕ್ತಿಯನ್ನು ತೋರ್ಪಡಿಸುವಲ್ಲಿ ಪಳಗಿದ್ದ. (ಈಗಿನ ಮಹಾರಾಷ್ಟ್ರದಲ್ಲಿ ಪೈಶಾಚಿ ಭಾಷೆ ಅದಾಗಲೆ ಮೊಳಕೆಯೊಡೆದಾಗಿತ್ತು) ಅಂದರೆ ಆ ವೇಳೆಗಾಗಲೆ ಕನ್ನಡ ಅಷ್ಟೊಂದು ಪೊಗದಸ್ತಾಗಿ ಬೆಳೆದಿತ್ತು! ಸಾಹಿತ್ಯದ ಪರಿವೇಷ ತೊಡುವಷ್ಟು ಪ್ರಬಲ–ಸಬಲವಾಗಿತ್ತೆಂದರ್ಥ.

ಆಗ ಚತ್ತಾಣ, ಬೆದಂಡೆ, ಒನಕೆವಾಡು ಹಾಗೂ ಓವನಿಗೆಗಳಂತಹ ಜಾನಪದ ಹಾಡಿನ ಪ್ರಕಾರಗಳಿದ್ದವೆಂದು ೯ನೆಯ ಶತಮಾನದ ಶ್ರೀವಿಜಯ ತನ್ನ ಲಾಕ್ಷಣಿಕ ಗ್ರಂಥ 'ಕವಿರಾಜಮಾರ್ಗ'ದಲ್ಲಿ ಉಲ್ಲೇಖಿಸುತ್ತಾನೆ. ಅಷ್ಟೇ ಅಲ್ಲ, ತನ್ನ ಸಮಕಾಲೀನ ಜನಪದರ ಬಗ್ಗೆ ತುಂಬ ಅಭಿಮಾನದಿಂದ;

*ಪದನಱಿದು ನುಡಿಯಲುಂ ನುಡಿ*
*ದುದನಱಿದಾರಯಲುಂ ಮಾರ್ಪರಾ ನಾಡವರ್ಗಳ್।*
*ಚದುರರ್ ನಿಜದಿಂ ಕುಱಿತೋ*
*ದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್।*

ಎಂದೆನ್ನುತ್ತ ನಾಡಿನ ಜನರ ಸಂಸ್ಕೃತಿ ಹಾಗೂ ಕಾವ್ಯರಚನಾ ಸಾಮರ್ಥ್ಯವನ್ನು ನಿರೂಪಿಸುತ್ತಾನೆ. !

ಈ ನಡುವೆ ಸ್ವಲ್ಪಕಾಲಕ್ಕೂ ಮುನ್ನ ಬಾದಾಮಿಯಲ್ಲಿ :

(ಕ್ರಿ. ಶ. ೭೪೦) ಅಕ್ಷರಮೇರು ರಚಿಸಿರುವ ಕಪ್ಪೆಅರಭಟ್ಟನ ಶಾಸನ, ತ್ರಿಪದಿ ಛಂದಸ್ಸಿನ ಮೇಲೆ ಪ್ರಕಾಶ ಬೀರುತ್ತದೆ.

ಇರಲಿ, ಅಂತಹ ಜಾನಪದ ಜಾಣರು ಏನು ಹೇಳಿದರೆಂಬುದಕ್ಕೆ ಲಿಖಿತ ದಾಖಲೆಗಳಿಲ್ಲ – ನೀಡಲಾಗದು. ಅದು ಹಸುವಿನ ಹೊಟ್ಟೆಯಲ್ಲಿ ಹುಲ್ಲು ಜೀರ್ಣವಾಗಿ ಹಾಲಾಗಿ ಮಾರ್ಪಟ್ಟಂತಹ ಪ್ರಕ್ರಿಯೆ!

ಜಾನಪದರ ಅಂತಃಸತ್ವ ಅಂತರ್ಗಂಗೆಯಂತೆ ಸುಪ್ತವಾಗಿದ್ದುಕೊಂಡು ಸೆಲೆಯೊಡೆಯಲು ಕಾಯುತ್ತಿದ್ದಿರಬೇಕಲ್ಲವೇ? ಅದಕ್ಕೊಂದು ವೇದಿಕೆಯನ್ನು ಕಾಲ ಸಿದ್ಧಗೊಳಿಸುತ್ತಿದ್ದಿತೆಂದು ಕಾಣುತ್ತದೆ ! ಆ ಸುದಿನ ಬಂದೇಬಿಟ್ಟಿತು !! ಇದು ಕಾಲವೇ ಗರ್ಭಕಟ್ಟಿದ ಸಮಯ !!!

ಆಗ ಕಲ್ಯಾಣದಲ್ಲಿ ಚಾಲುಕ್ಯರ ಆಳ್ವಿಕೆಯನ್ನು ಬದಿಗೆ ತಳ್ಳಿ ಕಳಚೂರ್ಯರ ಬಿಜ್ಜಳ ಆಡಳಿತ ನಡೆಸುತ್ತಿದ್ದ ಕಾಲಾವಧಿ. ಆತನ ಮಂತ್ರಿಗಳಲ್ಲೊಬ್ಬ ಬಸವೇಶ್ವರ–ಬದಲಾವಣೆಯ ಹರಿಕಾರ. ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ವೈಪರೀತ್ಯಗಳು ಹಾಗೂ ಲಿಂಗ ತಾರತಮ್ಯಗಳನ್ನು ತೊಡೆದುಹಾಕಲು ಯೋಚಿಸುತ್ತಿದ್ದ – ಯೋಜಿಸುತ್ತಿದ್ದ. ಅದರ ಫಲವೇ 'ಕಲ್ಯಾಣ ಕ್ರಾಂತಿ'. ಅದಕ್ಕೊದಗಿದ ರಂಗವೇ 'ಅನುಭವ ಮಂಟಪ'. ಭಾರತದ ಮೊಟ್ಟಮೊದಲ ಜಾತ್ಯತೀತ ಸಂಸತ್ ಅಧಿವೇಶನ. ಅಲ್ಲಿ ಆಯ್ದ ಸಂಸದರಿರಲಿಲ್ಲ! ಆದರೆ ಮೌಲ್ಯಗಳನ್ನು ಆಯ್ದುಕೊಂಡು, ಬಾಳಿ, ಬದುಕಿ ಮುಂದಿನವರಿಗೊಂದು ಮಾದರಿಯಾಗಬೇಕೆಂಬ ಹಂಬಲದಿಂದ ಉಸಿರಾಡಿದ ನವ ಚೇತನಗಳ ಸಮಾವೇಶವದು.

ಮೊಟ್ಟ ಮೊದಲ ಬಾರಿಗೆ ಅಲ್ಲಿ – ಎಲ್ಲ ಸ್ತರದ ಜನರು, ವೃತ್ತಿಗಾರರು, ಜಾತಿಯವರು ಸಮಾವೇಶಗೊಂಡು, ತಮ್ಮ ತಮ್ಮ 'ಅನುಭವ'ದ ಬುತ್ತಿಯನ್ನು ಹಂಚಿಕೊಳ್ಳಲು ಅವಕಾಶ ಒದಗಿತು. ಅವರ ವಿಚಾರಧಾರೆಗಳು ಸಂಪ್ರದಾಯದ ಕಾರ್ಮೋಡಗಳ ಘಟ್ಟಿಸುವಿಕೆಯಿಂದಾಗಿ ಕೋಲ್ಮಿಂಚಿನಂತೆ ಫಳಫಳಾಯಿಸಿದವು. ಆಕಾಶದ ಎಲ್ಲ ಮಗ್ಗಲಲ್ಲೂ ಬೆಳಕಿನಾಟ. ಹೀಗೆ ಥಟ್ಟನೆ, ದಿಢೀರನೆ ಒಡಮೂಡಿದ್ದೆ ವಚನಸಾಹಿತ್ಯ !

ಮಾತೃಭಾಷೆಯಲ್ಲೇನೋ ಅಭಿವ್ಯಕ್ತಿಸಬೇಕೆಂಬ ತಹತಹ, ತಳಮಳ, ಉಮ್ಮಳ ಹಾಗೂ ಬೇಗುದಿ ಅವರಲ್ಲಿ ಕಾಯುತ್ತಿತ್ತು. ಅದು 'ಮೂಕ ಸಮಾಜದ ಆರ್ತ ಧ್ವನಿ'. ೧೨ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಶಿಷ್ಟರು ರಚಿಸಿದ ಗ್ರಂಥ – ಮಹಾ ಗ್ರಂಥಗಳಿಗೆ ರಾಜರಿಂದ, ಪಂಡಿತರಿಂದ ಮತ್ತು ಕೋವಿದರಿಂದ ಮಾನ್ಯತೆ ದೊರೆಯುತ್ತಿತ್ತು. ಅದು ಶಿಷ್ಟರಿಗಷ್ಟೆ ಮೀಸಲಾದ ಪಾಂಡಿತ್ಯ ಪ್ರದರ್ಶನವಾಗಿತ್ತು. ಜನಸಾಮಾನ್ಯರು–ಜನಪದರು–'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದೇ ಗುರುತಿಸಲ್ಪಟ್ಟವರು, ನೆಟ್ಟಕಣ್ಣು–ಬಿಟ್ಟಬಾಯಿ ಮಾಡಿಕೊಂಡು ತಮ್ಮ ಮನದಾಳದ ತಳಮಳಗಳನ್ನು ಹೊರಹಾಕಲು ಛಂದಸ್ಸುಗಳಿಗೆ ಮೊರೆ ಹೋಗಲು ಸಾಧ್ಯವಿರಲಿಲ್ಲ. ಏಕೆಂದರೆ ಅವರಿಗೆ ಶಿಕ್ಷಣ ದೊರೆತಿರಲೇ ಇಲ್ಲ. ಅವರಿಗೆ ತಮ್ಮ ತಮ್ಮ ಉದ್ಯೋಗಗಳಿಗೆ ಬೇಕಾದ ಪಾರಂಪರಿಕ ವೃತ್ತಿ ಕೌಶಲ್ಯ ಹಾಗೂ ಸಂವಹನಕ್ಕೆ ಬೇಕಾದ ಮಿತ ಶಬ್ದ ಸಂಪತ್ತು ಸಾಕಿತ್ತೇ ಹೊರತು, ಪಾಂಡಿತ್ಯದ ಪ್ರದರ್ಶನಕ್ಕಲ್ಲ. ಜನಪದರು ಕಾಲಾಂತರದಿಂದ ತಮ್ಮ ಮನದ ಕಾಲಿಗೆ ಮುಳ್ಳು ಮುರಿದುಕೊಂಡಿದ್ದರೂ, ಅದನ್ನು ಹೊರತೆಗೆಯದೇ ನಡೆಯಬೇಕಿದ್ದ ಕಾಲವದು! ನೋವು ಬಾಧಿಸುತ್ತಿತ್ತು. ನಿವಾರಣೋಪಾಯ ಮಾತ್ರ ಇಲ್ಲ. ಸಂಪ್ರದಾಯದ ಸಂಕೋಲೆಯ ಕಬಂಧಬಾಹು ಅವರ ದಶದಿಕ್ಕನ್ನೂ ದಿಗ್ಬಂಧನಕ್ಕೊಳಪಡಿಸಿತ್ತು. ಅಭಿವ್ಯಕ್ತಿಗೆ ಮೂಗುಬ್ಬಸ. ಈ ರೀತಿಯ ಮಾನಸಿಕ ತೊಳಲಾಟ ಶತಶತಮಾನಗಳಿಂದ ಚಾಲ್ತಿಯಲ್ಲಿತ್ತು. ಹಲಗೆ ನುಡಿಸಿದರೆ ಗಮಾರ – ಗಾವಿಲ. ಮೃದಂಗ ನುಡಿಸಿದರೆ ವಿದ್ವಾಂಸ. ಎರಡೂ ಚರ್ಮ ವಾದ್ಯಗಳೆ! ಒಂದು ಜಾನಪದ, ಇನ್ನೊಂದು ಶಿಷ್ಟ. ವ್ಯತ್ಯಾಸ ತುಂಬ ಸ್ಪಷ್ಟ. ಕಾಲ ಕಾಯುತ್ತಿತ್ತು, ಬೇಯುತ್ತಿತ್ತು, ಹೊಸತೇನನ್ನೋ ಈಯಲು ಹಾತೊರೆಯುತ್ತಿತ್ತು. ಒಂದೇ ಒಂದು ಕ್ಷಣಕ್ಕಾದರೂ ಸರಿ ಆ ಸುವರ್ಣ ಘಳಿಗೆ ಬಂದೇ ಬಿಟ್ಟಿತು!...

ಸೌರಮಂಡಲದ ಸೃಷ್ಟಿಗೆ ಅಂತರಿಕ್ಷದಲ್ಲಿ 'ಮಹಾಸ್ಫೋಟ' ಕಾರಣವಾದಂತೆ, ಸಾಹಿತ್ಯ–ಸಾರಸ್ವತ–ಬಹುಮುಖ್ಯವಾಗಿ ಅಸಂತುಲಿತ, ವಿಘಟಿತ ಸಮಾಜದಲ್ಲಿ




# ಯಾರಿಗೆ ಹಾಕಲಿ ವೋಟು???

೧

**ಈ**ಚೆ ದರಿ,
ಆಚೆ ಪುಲಿ,
ಇವ ಭ್ರಷ್ಟ
ಅವ ಕನಿಷ್ಠ,
ಯಾರಿಗೆ ಹಾಕಲಿ ವೋಟು?

ಈತ ಕುಡುಕ,
ಆತ ಸಿಡುಕ,
ಇವ ಸ್ತ್ರೀ ಲಂಪಟ,
ಅವ ಸಮಾಜ ಕಂಟಕ,
ಯಾರಿಗೆ ಹಾಕಲಿ ವೋಟು?

ಇವ ಜೇಲಿಂದ ಬಂದವ,
ಅವ ಹೊಲಸು ತಿಂದವ,
ಈಕೆ ಸೀರೆ ಕೊಟ್ಟಳು,
ಆಕೆ ಕುಕ್ಕರ್ ಕೊಟ್ಟಳು,
ಯಾರಿಗೆ ಹಾಕಲಿ ವೋಟು?

ಈಕೆಗೆ ಸದಾ ಕೈ ತುರಿಕೆ,
ಆಕೆ ಆಗಾಗ ಬಾಯ್‌ಬಡಕಿ,
ಇವ ಕೈಯಾಗ ಬಾಟ್ಲಿ ಇಟ್ಟ,
ಅವ ಕಿಸೆಕ್ಕ ರೊಕ್ಕ ಕೊಟ್ಟ.
ಯಾರಿಗೆ ಹಾಕಲಿ ವೋಟು?

೨

ವೋಟು ಹಾಕಬೇಕೋ ಬಿಡಬೇಕೋ?
ಎನ್ನುತ್ತ ದಿಕ್ಕೆಟ್ಟು ಹೋಗಿದ್ದೇನೆ!
ಹಾಕಿದರೆ ದೇಶಕ್ಕಾಗುತ್ತದೆ ಅನರ್ಥ,
ಹಾಕದಿದ್ದರೆ ಸತ್ತೀತು ಹಕ್ಕು ವ್ಯರ್ಥ.
ವೋಟು ಹಾಕಿದರೆ ದೇಶ ಹಾಳು
ಹಾಕದಿದ್ದರೆ ನನ್ನಾದರ್ಶ ಹೋಳು ಹೋಳು.
ವೋಟಿಗಾಗಿ ಹೊರಡಬೇಕಾದ ಮನಸ್ಸು
ಬಿಕ್ಕುತ್ತಿದೆ ಒಳಗೊಳಗೆ ನೊಂದು,
ಪಾಪ ಪ್ರಜ್ಞೆ ಉಕ್ಕುತ್ತಿದೆ ಸುಟ್ಟು ಬೆಂದು!

೩

ಆದರೇನು ಸಿಕ್ಕುಹಾಕಿಕೊಂಡಿದ್ದೇನಲ್ಲ,
ಭಾರತದ ದಿವ್ಯ, ಭವ್ಯ ಕನಸಲ್ಲಿ?
ಬರಬಹುದು ಎಂದಾದರೊಂದು ದಿನ
ನನ್ನ ಹಕ್ಕಿಗೆ ನ್ಯಾಯದ ದಿನ
ಪ್ರಾಮಾಣಿಕರಲ್ಲಿ ಕಟ್ಟಾ ಪ್ರಾಮಾಣಿಕರನ್ನು
ಸೇವಾ ನಿಷ್ಠರಲ್ಲಿ ಪಕ್ಕಾ ನಿಷ್ಠರನ್ನು
ಜಾಣರಲ್ಲಿ ಶ್ರೇಷ್ಠ ಜಾಣರನ್ನು
ಆಯ್ಕೆ ಮಾಡುವ ಪುಣ್ಯದ ದಿನ!

೪

ಬರಬಹುದೇ ಇಂಥದೊಂದು ದಿನ?
ಆಗ ಇರಬಹುದೇ ನಾನು ಅಂಥ ಆ ದಿನ?

**ಡಾ॥ ಮಾಲತಿ ಪಟ್ಟಣಶೆಟ್ಟಿ**
ನಂ.೩, "ಗಣೇಶ ಅಪಾರ್ಟ್‌ಮೆಂಟ್ಸ್"
ರಜತಗಿರಿ ಧಾರವಾಡ – ೫೮೦ ೦೦೪



*ಅನುಭವ ಮಂಟಪ*

'ಅಕ್ಷರ ಸ್ಫೋಟ' ವಚನಗಳ ರೂಪದಲ್ಲಿ ಛಂದಸ್ಸಿನ ಹಂಗಿಲ್ಲದೇ ಮುಕ್ತವಾಗಿ ಹೊರಹೊಮ್ಮಿ ಪ್ರಜ್ವಲಿಸಿತು. ಇದರಲ್ಲಿ ಒಬ್ಬರಲ್ಲ – ಇಬ್ಬರಲ್ಲ, ಅಸಂಖ್ಯಾತ ಶರಣರೆಲ್ಲರೂ ಈ ಕಾಲದ ಫಲಾನುಭವಿಗಳೇ. ಕಾಯಕ ತತ್ವವನ್ನೊಪ್ಪಿ – ದುಡಿದೇ ಉಣ್ಣುವ ಬಣವಾಗಿ, ಜಾತ್ಯತೀತ ಸಮಾಜವನ್ನು ಸಮಾನತೆಯ ತಳಹದಿಯ ಮೇಲೆ ಕಟ್ಟಬಯಸಿ, ನವ ಆರ್ಥಿಕ ಕ್ರಾಂತಿಗೆ ಅವರೆಲ್ಲರೂ ಒಮ್ಮನಸ್ಸಿನಿಂದ ಋಜು ಮಾಡಿದ ಮಾಂತ್ರಿಕ ಕಾಲ. ಘನ ಮಹಾ ಬೆಳಕಿನ ಕಾಲ. ಜಾತಿ, ಮತ, ಕುಲ, ಪಂಥ ಮತ್ತು ಲಿಂಗ ಭೇದಗಳೆಲ್ಲವನ್ನೂ ಮರೆತು, ಮಾನವೀಯತೆಯ ನೆರಳಿನಡಿ ಆಶ್ರಯ ಪಡೆದ ಕಾಲ! ಜಗತ್ತಿನ ಯಾವೆಡೆಯೂ ಮತ್ತೆ ಎಂದೆಂದೂ ಮರಳಿ ಘಟಿಸದ, ಪುನರಾವರ್ತನೆಯಾಗಿರದ ಏಕಮೇವಾದ್ವಿತೀಯ ಪ್ರಸಂಗವಿದು. ನಭೋ ಮಂಡಲದಲ್ಲಿ ಮತ್ತೊಂದು 'ಮಹಾ ಸ್ಫೋಟ' ಘಟಿಸಿಲ್ಲ. ಇಲ್ಲಿಯೂ ಅಂತೆಯೇ! ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಮಾದರ ಚೆನ್ನಯ್ಯ, ಸೂಳೆ ಸಂಕವ್ವೆ, ಮದ್ದಲಿಗ ಅಲ್ಲಮಪ್ರಭು, ಕಾಯಕಯೋಗಿ ಸಿದ್ಧರಾಮ, ಅಕ್ಕಮಹಾದೇವಿ, ಗಂಗಾಂಬಿಕೆ, ನಾಗಲಾಂಬಿಕೆ, ಅಕ್ಕನಾಗಮ್ಮ, ದುಗ್ಗಳೆ, ಲಕ್ಷ್ಮಮ್ಮ, ಲಿಂಗಮ್ಮ, ಸತ್ಯಕ್ಕ, ತಿಮ್ಮವ್ವ, ಮುಕ್ತಾಯಕ್ಕ, ಅಜಗಣ್ಣ, ಆಯ್ದಕ್ಕಿ ಮಾರಯ್ಯ, ಅಂಬಿಗರ ಚೌಡಯ್ಯ, ಮಧುವರಸ, ಮಚ್ಚಿಗ ಹರಳಯ್ಯ, ಚೆನ್ನಬಸವಣ್ಣ, ಬಾಚಿ ಕಾಯಕದ ಬಸವಯ್ಯ, ಹೆಂಡದ ಮಾರಯ್ಯ, ಸೊಡ್ಡಳ ಬಾಚರಸ, ಕಿನ್ನರಿ ಬೊಮ್ಮಯ್ಯ, ಒಕ್ಕಲ ಮುದ್ದಯ್ಯ, ಮೇದರ ಕೇತಯ್ಯ, ನುಲಿಯ ಚಂದಯ್ಯ ಮುಂತಾದ ಎರಡು ನೂರಕ್ಕೂ ಹೆಚ್ಚು ವಚನಕಾರರ ದಾಖಲೆ ಇದೆ! ಹೀಗೆ, ದುಡಿದೇ ಉಣ್ಣುವ ಕಾಯಕ ನಿಷ್ಠೆಯ ಬಹುತೇಕ ಜನಪದರನ್ನು ಇಲ್ಲಿ ಉಲ್ಲೇಖಿಸಬಹುದು. ಈ ಚಳುವಳಿಯ ಪೂರ್ವಸೂರಿ, ಚಿಂತಕ ಮುದನೂರಿನ ಜೇಡರ ದಾಸೀಮಯ್ಯ.

ಆತನ ವಚನವೊಂದು ಹೊಸ ಅರುಣೋದಯದ 'ಬೆಳ್ಳಿಚುಕ್ಕಿ'.

*'ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ*
*ಇರುಳೆಲ್ಲ ನಡೆದನಾ ಸುಂಕಕಂಜಿ*
*ಕಳವೆಯೆಲ್ಲ ಹೋಗಿ ಬರಿಗೋಣಿ ಉಳಿಯಿತ್ತು*
*ಅಳಿಮನದವನ ಭಕ್ತಿ ಇಂತಾಯಿತ್ತು । ರಾಮನಾಥಾ'*

ಅದು ಚಿನ್ನ-ಬೆಳ್ಳಿಯ ನಾಣ್ಯಗಳು ಚಲಾವಣೆಯಲ್ಲಿದ್ದ ಯುಗ. ಸಮಕಾಲೀನ ಬದುಕನ್ನು ಮನಃಸ್ಥಿತಿಯನ್ನವನು ಇಲ್ಲಿ ವಿಡಂಬಿಸುತ್ತಾನೆ. ಇದು ಅಂದಿನ ಪ್ರಜಾ ಸಮುದಾಯದ ಮನಸ್ಥಿತಿಯಷ್ಟೇ ಅಲ್ಲ, ಇಂದಿನವರದೂ ಸಹ.

ಈಗ ಕೇಂದ್ರ ಸರಕಾರ 'ಡಿಮಾನಿಟೈಜೇಷನ್' ಮಾಡಿದೆ. ಮತ್ತೆ ಈಗಲೂ ನಮ್ಮ ನರನಾಡಿಗಳಲ್ಲಿ ಹಳೆ ರಕ್ತದ ಸಂಚಾರ, ಸರಬರಾಜು. ಗಮನದಲ್ಲಿಡೋಣ – ಯಾವುದು ಬದಲಾಗುವುದಿಲ್ಲವೋ ಅದು ಬೆಳೆಯುವುದಿಲ್ಲ. ಯಾವುದು ಬೆಳೆಯುವುದಿಲ್ಲವೋ ಅದು ಉಳಿಯುವುದಿಲ್ಲ, ಉಳಿಯಬಾರದು! ಇದು ಪ್ರಕೃತಿಯ ನಿಯಮ. ಅವರು ಬದಲಾಗಲು ಇಚ್ಛಿಸಿದರು, ಅಂತೆಯೇ ಬಾಳಿದರು, ಬದುಕಿದರು, ಬದುಕಿದಂತೆ ಬರೆದರು, ನಡೆದರು – ನುಡಿದರು.

ಅಂದು ಅಂತಹ ಯುಗ ಪರಿವರ್ತನೆಗೆ ಹಾತೊರೆದ ಮನಸ್ಸುಗಳ ಮಹಾಕೂಟವೇ 'ಅನುಭವ ಮಂಟಪ'. ಇಂತಹ ಮಹಾ ಬೆಳಗನ್ನು, ಮಹಾ ಬೆಳೆಯನ್ನು ಕಂಡ ಜನ ಹೊಸ ಹೊಸ ಕನಸುಗಳನ್ನು ಕಲ್ಪಿಸಿಕೊಳ್ಳುತ್ತ ಹೊಸ ಬದುಕಿಗೆ ಅಣಿಯಾಗುತ್ತಿದ್ದ ಕಾಲ! ೧೨ನೇಯ ಶತಮಾನದಲ್ಲಿ ಅದೇನು ಸಾಮಾನ್ಯ ಘಟನೆಯೇ?

ಇಂತಹ ಜನ ಹೊಸ ಕನಸುಗಳನ್ನು ಹೊತ್ತು, ಮಹಾ ಬೆಳಗನ್ನು ಕಂಡು, ಹೊಸ ಮುಂಗಾರೊಂದನ್ನು ಕಲ್ಪಿಸಿಕೊಳ್ಳುತ್ತ, ಮಹಾ ಬೆಳೆಯ ಬದುಕಿಗೆ, ಹೊಸ ಸುಗ್ಗಿಗೆ, ಹಿಗ್ಗಿನೊಂದಿಗೆ ನಿರೀಕ್ಷಿಸುತ್ತಿದ್ದ, ಅಣಿಯಾಗುತ್ತಿದ್ದ ಕಾಲ!

'... ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್...'

'ಅನುಭವ ಮಂಟಪ'ದಲ್ಲಿ ಜಾತ್ಯತೀತವಾಗಿ ಸೇರುತ್ತಿದ್ದ 'ಶರಣ-ಶರಣೆ'ಯರ ಶೈಕ್ಷಣಿಕ ವಿದ್ಯಾರ್ಹತೆಗಳು ಸ್ಪಷ್ಟವಿಲ್ಲದಿದ್ದರೂ ಅವರು ತಮ್ಮ ಕುಲ ಕಸುಬುಗಳಲ್ಲಿ ಪರಿಣತಿ ಸಂಪಾದಿಸಿದ್ದವರು, ಅಷ್ಟೆ. ಆದರೆ ಅವರ ಅಭಿವ್ಯಕ್ತಿ ಸಾಮರ್ಥ್ಯ ಸಾರ್ವಕಾಲಿಕ ಶ್ರೇಷ್ಠವೆನ್ನಿಸಿದೆ.

ಬದುಕು ನಡೆಯುವುದು ಮಾತಿನಿಂದ, ಗಮಕ-ಚಮಕದಿಂದಲ್ಲ! ಇಲ್ಲಿ ನಡೆದುದ್ದನ್ನು 'ಅಕ್ಷರ ಲೋಕ'ದ ಮಹಾ ಸ್ಫೋಟವೆನ್ನಬಹುದು.

ಹೇಳಿದ್ದನ್ನು ಕೇಳಿ, ವಿಚಾರಿಸದೆ, ವಿವೇಚಿಸದೆ, ಅನುಸರಿಸುವ ವಿಧಾನದ 'ಶ್ರವಣ-ಸಂಸ್ಕೃತಿಯೂ' ದುಡಿದುಣ್ಣುವ 'ಶರಣ ಸಂಸ್ಕೃತಿ'ಗೆ ನಾಂದಿ ಹಾಡಿತು! ಕಾಯಕಕ್ಕೆ ಅಗ್ರ ಪಟ್ಟ. ಸೋಮಾರಿತನಕ್ಕಲ್ಲ. ನಡೆದಂತೆ ನುಡಿವ, ನುಡಿದಂತೆ ನಡೆವ ಶರಣರಿಂದ 'ವಚನ'ಗಳ ರಚನೆ ಓತಪ್ರೋತವಾಗಿ ಸಾಗಿತು. ವಚನ ಎಂದರೆ ಪ್ರಮಾಣಿಸಿದ ನುಡಿ, ಮಾತು, ಅದು ಮನ ಕಂಡ ಸತ್ಯ.

ದೃಗ್ಗೋಚರವಷ್ಟೇ ಅಲ್ಲ, ಹೃದ್ಗೋಚರ ಸತ್ಯ!

✶ ಅಂದಿನ ಶರಣರ ನುಡಿಗಳು ಸಾರ್ವಕಾಲಿಕ ಸತ್ಯದ ಕೂರಲಗುಗಳಾಗಿವೆ. ಇಂದಿಗೂ ಬದಲಾಗದ ನಿಜಗಳಾಗಿವೆ, ಖನಿಜಗಳಾಗಿವೆ.
✶ ನೀರ ಕಂಡಲ್ಲಿ ಮುಳುಗುವರಯ್ಯ, ಮರನ ಕಂಡಲ್ಲಿ ಸುತ್ತುವರಯ್ಯ...
✶ ಮಾತೆಂಬುದು ಜ್ಯೋತಿರ್ಲಿಂಗ...
✶ ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ...
✶ ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ...

ಈ ನುಡಿಗಳೆಲ್ಲವೂ ಇಂದಿಗೂ ಪ್ರಸ್ತುತ. ಇವೇನು ಸಾಮಾನ್ಯ ನುಡಿಗಳೇ? ಪ್ರಾಮಾಣಿಕವಾಗಿ ದುಡಿದುಣ್ಣುವ, ಹಂಚಿಕೊಂಡುಣ್ಣುವವರ ಒಳನುಡಿಗಳು – ಮಾತುಗಳು – ನಡೆದು ನುಡಿದವರ 'ಮಾತೆಂಬ ಜ್ಯೋತಿರ್ಲಿಂಗ'ಗಳು. ಇವು ಕೊರಳ ನುಡಿಗಳಲ್ಲ, ಕರುಳ ನುಡಿಗಳು, ಒಡಲಾಳದ ಉಮ್ಮಳಗಳು, ಕಡಲಾಳದ ಮುತ್ತುಗಳು. ಅಬ್ಬರ ಆಡಂಬರವಿಲ್ಲದ ಸಲಿಲ ಜಲದ ನಿರ್ಮಲ ಕಿರುತೊರೆಗಳು. ಮಾನವನ ಅಂತರಂಗದ ನಿಜದರ್ಶನ ಮೂಡಿಸುವ ಕ್ಷ-ಕಿರಣಗಳು.

ಆದರೆ 'ಕಲ್ಯಾಣ ಕ್ರಾಂತಿ'ಯ ನಂತರ ಥಟ್ಟನೆ 'ಮಹಾಮೌನ' ಆವರಿಸಿತು. ಅದು 'ಮೂಕನಿಗೆ ಮಾತು ಬಂದಿದೆ' ಎಂಬಷ್ಟರಲ್ಲಿ 'ಮರಣವೇ ಮಹಾನವಮಿ' ಎಂದು ನಂಬಿ, ನಿಜ ನುಡಿದ, ನುಡಿದಂತೆ ನಡೆದ ಇಡೀ ಶರಣ ಸಮುದಾಯವನ್ನೇ ಆಪೋಶನ ತೆಗೆದುಕೊಂಡುಬಿಟ್ಟಿತು. ಸುಷುಪ್ತಿಯಲ್ಲಿದ್ದ ಜಾನಪದ ಜಾಗರಗೊಂಡಿತೆಂಬಷ್ಟರಲ್ಲಿ 'ಅಕಾಲಿಕ ಅಂತ್ಯ' ಅದನ್ನಪ್ಪಳಿಸಿಬಿಟ್ಟಿತು. ಹೀಗೆ 'ನವ ಅಭಿವ್ಯಕ್ತಿ'ಯ ಕತ್ತನ್ನು 'ಸಂಪ್ರದಾಯದ ಕ್ರೂರ ಕೈಗಳು' ಹಿಸುಕಿ ಹೊಸಕಿ ಹಾಕಿದವು.

ಪ್ರತಿಯೊಂದು ಆರಂಭಕ್ಕೂ ಮುಕ್ತಾಯವಿರುತ್ತದೆ. ಆದರೆ ಇಲ್ಲಿ ಇದೀಗತಾನೆ ಆರಂಭವಾಗಿದೆ ಎಂಬಷ್ಟರಲ್ಲಿ ಅಂತ್ಯ ಮಿಂಚಿನಂತೆ ಪ್ರಕಟವಾಗಿಯೇ ಬಿಟ್ಟಿತ್ತು. ಇದೊಂದು ಸಾಹಿತ್ಯಿಕ ಶಿಶುಹತ್ಯೆ. ಜಾಗತಿಕ ಪವಾಡವೊಂದು 'ಅಕ್ಷರದ ಬಾನಲ್ಲಿ' ಮಿಂಚಿ ಮರೆಯಾಯಿತು. ಹಾಗೆಯೇ ಆ ಸಂಚಲನ ಮುಂದುವರಿದಿದ್ದರೆ ಮತ್ತೇನಾಗಿರುತ್ತಿತ್ತೋ – ಬಲ್ಲವರಾರು!?

ಇದು ಸಾರಸ್ವತ – ಜನಪದ ಲೋಕಕ್ಕಾದ ಶಾಶ್ವತ ಅಗೋಚರ ನಷ್ಟ. ಈಗ ನಿಟ್ಟುಸಿರೇ ನಮ್ಮುಸಿರು.

**ಪ್ರೊ|| ಶೇಷಾಚಲ ಹವಾಲ್ದಾರ್**
ವಿಶ್ರಾಂತ ಇತಿಹಾಸ ಉಪನ್ಯಾಸಕ, ನಂ. ೩೦೫, ಶ್ರೀಮಾತಾ ಎನ್ಕ್ಲೇವ್
ಗೋಪಾಲಕೃಷ್ಣ ಬಡಾವಣೆ, ಯಾದಳಂ ನಗರ
ಸುಬ್ರಮಣ್ಯಪುರ ಪೋಸ್ಟ್, ಬೆಂಗಳೂರು – ೫೬೦ ೦೬೧

ಇತ್ತೀಚೆಗಷ್ಟೇ ನಡೆದ ರಾಜ್ಯದ ವಿಧಾನಸಭಾ ಚುನಾವಣೆ ಇಡೀ ದೇಶದ ಚರ್ಚೆಗೆ ಗ್ರಾಸವಾಗಿದೆ. ತೀವ್ರ ಜಟಾಪಟಿಯ ನಂತರ ಮೈತ್ರಿ ಸರ್ಕಾರವೊಂದು ಅಧಿಕಾರದ ಚುಕ್ಕಾಣಿ ಹಿಡಿಯುವುದರಲ್ಲಿದೆ. ಚುನಾವಣೆಯ ಅಂಕಿಅಂಶಗಳನ್ನು ನೋಡಿದಾಗ ಒಟ್ಟು 222 ಕ್ಷೇತ್ರಗಳಲ್ಲಿ ಕೇವಲ ಏಳು ಮಹಿಳಾ ಅಭ್ಯರ್ಥಿಗಳು ಗೆದ್ದು ಬಂದಿದ್ದಾರೆ. ಶಾಸನ ಸಭೆಗಳಲ್ಲಿ ಮಹಿಳಾ ಮೀಸಲಾತಿ ಇನ್ನೂ ಕನಸಾಗಿರುವ ಇಂದಿನ ನಿರಾಶಾದಾಯಕ ಸಂದರ್ಭದಲ್ಲಿ ಈ ತಿಂಗಳು ಬಿಡುಗಡೆಯಾಗಿರುವ ಚಿತ್ರ 'ಹೆಬ್ಬೆಟ್ ರಾಮಕ್ಕ' ಅತ್ಯಂತ ಪ್ರಸ್ತುತವಾದದ್ದು.

ಎನ್. ಆರ್. ನಂಜುಂಡೇಗೌಡ ನಿರ್ದೇಶಿಸಿರುವ ಈ ಚಿತ್ರ ಅನಕ್ಷರಸ್ಥ ಮಹಿಳೆಯೊಬ್ಬಳು ಅಧಿಕಾರದ ಕ್ಷೇತ್ರವನ್ನು ಪ್ರವೇಶಿಸುವ ಕತೆ. ಅದು ಅವಳ ಸ್ವಂತ ಇಚ್ಛೆಯಿಂದಲ್ಲ. ಅವರ ಊರಿನ ಪುರುಷ ರಾಜಕಾರಣಿಗಳ ಸ್ವಾರ್ಥದ ಬಳಕೆಗಾಗಿ. ರಾಮಕ್ಕ ಒಬ್ಬ ಮುಗ್ಧ ಗ್ರಾಮೀಣ ಮಹಿಳೆ. ಒಬ್ಬ ಸಣ್ಣ ಕಂಟ್ರಾಕ್ಟರ್‌ನ ಹೆಂಡತಿಯಾದ ಆಕೆ ಮನೆ, ಹೊಲಗಳೆರಡರ ಜವಾಬ್ದಾರಿಯನ್ನು ದಕ್ಷವಾಗಿ ನಿಭಾಯಿಸುತ್ತಿರುತ್ತಾಳೆ. ಅವಳ ಗಂಡ ಕಲ್ಲೇಶಿ ಸಣ್ಣ ಪುಟ್ಟ ಕಾಂಟ್ರಾಕ್ಟ್ ಕೆಲಸಗಳನ್ನು ಗಳಿಸಿಕೊಳ್ಳಲು, ತನ್ನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಜನಪ್ರತಿನಿಧಿಗಳ ಮನೆ ಬಾಗಿಲುಗಳಿಗೆ ಅಲೆಯುತ್ತಿರುತ್ತಾನೆ. ಅವನ ಶಾಸಕನ ಕುತಂತ್ರ ರಾಜಕೀಯದ ಪರಿಣಾಮವಾಗಿ ಮಹಿಳಾ ಮೀಸಲಾತಿಯಿರುವ ಕ್ಷೇತ್ರದಿಂದ ನಿರಕ್ಷರಕುಕ್ಷಿ ರಾಮಕ್ಕನನ್ನು ಜಿಲ್ಲಾ ಪಂಚಾಯತ್ ಚುನಾವಣೆಯ ಕಣಕ್ಕಿಳಿಸಿ, ಅವಳ ಮೂಲಕ ತನ್ನ ಬೇಳೆ ಬೇಯಿಸಿಕೊಳ್ಳಬಹುದೆಂಬುದು ಅವನ ಎಣಿಕೆಯಾಗಿರುತ್ತದೆ. ತನ್ನ ಭಂಟ ಕಲ್ಲೇಶಿಯ ಹೆಂಡತಿ ರಾಮಕ್ಕ ಚುನಾವಣೆಗೆ ನಿಲ್ಲುವಂತಾಗುವುದು ಹೀಗೆ. ಹೆಂಡತಿಯ ಮೂಲಕ ತಾನೂ ಅಧಿಕಾರದ ರುಚಿಯನ್ನು ನೋಡುವ ಕನಸನ್ನು ಕಾಣುತ್ತಾನೆ, ಅವಳ ಗಂಡ ಕಲ್ಲೇಶಿ. ನಿರಕ್ಷರಕುಕ್ಷಿಯಾದ ರಾಮಕ್ಕನಿಗೆ ಈ ಚುನಾವಣೆಯ ಸ್ಪರ್ಧೆ ಸ್ವಲ್ಪವೂ ಇಷ್ಟವಿಲ್ಲ. ಶಾಸಕರ ಬೆಂಬಲದಿಂದ ಗೆದ್ದೂ ಬಿಡುತ್ತಾಳೆ. ಈ ಗೆಲುವೂ ಅವಳಿಗೇನೂ ಸಂತಸ ತರುವುದಿಲ್ಲ. ಆದರೆ ಗಂಡ ಕಲ್ಲೇಶಿಗೆ ಇದು ಅವನದೇ ಜಯವೆನಿಸುತ್ತದೆ. ಇದನ್ನು ಚಿತ್ರದಲ್ಲೇ ಚೆನ್ನಾಗಿ ತೋರಿಸಲಾಗಿದೆ. ಚುನಾವಣೆ ಮುಗಿದು ಫಲಿತಾಂಶ ಪ್ರಕಟವಾಗುವಾಗ ರಾಮಕ್ಕ ಮನೆಯಲ್ಲಿ ಪಾತ್ರೆ ತಿಕ್ಕುತ್ತಾ ಕುಳಿತಿರುತ್ತಾಳೆ. ಸಂತೋಷದ ಸುದ್ದಿ ತಿಳಿಸಿ ಹೆಂಡತಿಯ ಬಾಯಿಗೆ ಗಂಡ ಸಿಹಿ ತುರುಕಲು ಬಂದಾಗಲೂ ಅವಳಿಗೇನೂ ಸಂಭ್ರಮವಿಲ್ಲ. ಗೆದ್ದದ್ದಕ್ಕೆ ಹಾರ ಹಾಕಲು ಬಂದಾಗಲೂ ಗಂಡನೇ ಅದನ್ನು ಹಾಕಿಸಿಕೊಂಡು ಸಂಭ್ರಮಿಸಿದ್ದಾನೆ. ಹೆಂಡತಿಯ ಮೂಲಕ ಅಧಿಕಾರ ಗಳಿಸುವ, ಸಂಭ್ರಮಿಸುವ ಮತ್ತು ಅದನ್ನು ಚಲಾಯಿಸುವ ಇಂದಿನ ಎಷ್ಟೋ ಪಂಚಾಯಿತಿ ರಾಜಕಾರಣದ ಮಹಿಳೆಯರ ಪತಿಯರನ್ನು ಇಲ್ಲಿ ಕಲ್ಲೇಶಿ ಪ್ರತಿನಿಧಿಸುತ್ತಾನೆ.

ಕಲ್ಲೇಶಿ ಜಿಲ್ಲಾ ಪಂಚಾಯತ್ ಅಧ್ಯಕ್ಷರ ಕುರ್ಚಿಯಲ್ಲಿ ಕೂರದಿದ್ದರೂ ಹೆಂಡತಿಯ ಹೆಸರಿನಲ್ಲೇ ಪರೋಕ್ಷವಾಗಿಯೇ ಅಧಿಕಾರ ಚಲಾಯಿಸಲು ಪ್ರಾರಂಭಿಸುತ್ತಾನೆ. ಮೊದಲಿಗೆ ಎಲ್ಲ ಕಡತಗಳಿಗೂ ತನ್ನ ಹೆಬ್ಬೆಟ್ಟನ್ನು ಒತ್ತುವುದಷ್ಟೇ ರಾಮಕ್ಕನ ಕೆಲಸವಾದರೂ, ಕ್ರಮೇಣ ಅವಳಿಗೆ ಪಂಚಾಯತ್‌ನ ಆಗುಹೋಗುಗಳು ಅರಿವಾಗಲಾರಂಭವಾಗುತ್ತವೆ. ತನ್ನ ಹೆಸರಿನಲ್ಲಿ ದುರಾಡಳಿತವಾಗುತ್ತಿರುವುದನ್ನು ಗಮನಿಸುವ ರಾಮಕ್ಕ ಅಧಿಕಾರದ ಚುಕ್ಕಾಣಿಯನ್ನು ತನ್ನ ಕೈಗೆ ತೆಗೆದುಕೊಂಡು ತನ್ನನ್ನು ಸಮರ್ಥಿಸಿಕೊಳ್ಳುವುದು ಕಲ್ಲೇಶಿಗಷ್ಟೇ ಅಲ್ಲದೆ ಇತರ ಜನಪ್ರತಿನಿಧಿಗಳಿಗೆ ಹಾಗೂ ಅಧಿಕಾರಿಗಳಿಗೆ ನುಂಗಲಾರದ ತುತ್ತಾಗುತ್ತದೆ. ತನ್ನ ನಿರ್ಧಾರಗಳನ್ನು ತಾನೇ ತೆಗೆದುಕೊಳ್ಳುವ ರಾಮಕ್ಕ ಮುಗ್ಧ ಮಹಿಳೆಯ ಪಾತ್ರದಿಂದ ಸಮರ್ಥ ಜನಪ್ರತಿನಿಧಿಯಾಗುವ ಏಣಿಯನ್ನು ಹತ್ತುವುದನ್ನು ಹೆಬ್ಬೆಟ್ ರಾಮಕ್ಕ ಚಿತ್ರ ಬಿಂಬಿಸುತ್ತದೆ.

# ಮಹಿಳಾ ಸಬಲೀಕರಣದ ಸದಾಶಯ ಬೀರುವ

# ಹೆಬ್ಬೆಟ್ ರಾಮಕ್ಕ



ಮೈತ್ರಿ ಬೆಂಗಳೂರು



ಅನಕ್ಷರಸ್ಥೆ ರಾಮಕ್ಕ ಸ್ನೇಹ ಜೀವಿ. ತನ್ನ ಸರೀಕರೊಡನೆ, ಊರಿನವರೊಡನೆ ಒಳ್ಳೆಯ ಬಾಂಧವ್ಯವನ್ನು ಬೆಳೆಸಿಕೊಂಡಿರುತ್ತಾಳೆ. ತನ್ನ ಹೊಲದಲ್ಲಿ ಕೆಲಸ ಮಾಡಲು ಬರುವ ಹೆಂಗಸರೊಡನೆ ಅವರ ಸಮಕ್ಕೂ ಮೈ ಬಗ್ಗಿಸಿ ದುಡಿಯುತ್ತಾಳೆ. ಅವಳು ಚುನಾವಣೆಯಲ್ಲಿ ಗೆದ್ದು, ಜಿಲ್ಲಾ ಪಂಚಾಯತ್ ಅಧ್ಯಕ್ಷೆಯಾಗುವುದು ಅವಳ ಸಾಮರ್ಥ್ಯದಿಂದಲ್ಲ. ಹಾಗೇ ಅದನ್ನು ಅವಳು ಬಯಸುವುದಿಲ್ಲ. ಕ್ಷೇತ್ರದ ಶಾಸಕ ಭರಮಪ್ಪನ ಕೃಪೆ ಮತ್ತು ಹಣಬಲದ ಸಹಾಯದಿಂದ ರಾಮಕ್ಕ ಜಿಲ್ಲಾ ಪಂಚಾಯತ್ ಅಧ್ಯಕ್ಷೆಯಾಗುತ್ತಾಳೆ. ಗಂಡನ ಸಹಾಯವಿಲ್ಲದೆ ಹೊಲ, ಮನೆಗಳೆರಡರಲ್ಲೂ ಕೆಲಸ ಮಾಡುವ ರಾಮಕ್ಕನ ಸಾಮರ್ಥ್ಯದ ನೋಟ ನಮಗೆ ಕಾಣಲು ಸಿಗುತ್ತದಾದರೂ, ಅವಳು ರಾಜಕೀಯವನ್ನು ಪ್ರವೇಶಿಸಲು ಆ ಗುಣ ಅವಳಿಗೆ ಅರ್ಹತೆಯಾಗುವುದಿಲ್ಲ. ಬದಲಾಗಿ ಅವಳ ಅಕ್ಷರ ಜ್ಞಾನದ ಕೊರತೆಯೇ ಅವಳಿಗೆ ಅರ್ಹತೆಯನ್ನು ತಂದುಕೊಡುತ್ತದೆ.

ಕಳೆದ ಮೂರು ದಶಕದಿಂದ ಮಹಿಳೆಯರಿಗೆ ಪಂಚಾಯತ್ ವ್ಯವಸ್ಥೆಯಲ್ಲಿ ಮೀಸಲಾತಿ ದೊರಕಿದ ಕಾರಣಕ್ಕೆ ಒಂದು ದೊಡ್ಡ ಸಂಚಲನವೇ ಉಂಟಾಗಿರುವ ವಾಸ್ತವ ನಮ್ಮ ಕಣ್ಣ ಮುಂದಿದೆ. ಆದರೂ ಇಲ್ಲಿಯೂ ಬಹುಪಾಲು ಪುರುಷ ರಾಜಕಾರಣಿಗಳಿಗೆ ವಿದ್ಯಾವಂತ ಹಾಗೂ ದಕ್ಷ ಮಹಿಳೆಯರು ಚುನಾವಣಾ ರಾಜಕಾರಣಕ್ಕೆ ಬರುವುದಕ್ಕಿಂತ ವಿದ್ಯೆಯಿಲ್ಲದ, ತಮ್ಮ ಅಧೀನತೆಯನ್ನು ಒಪ್ಪಿಕೊಳ್ಳುವ ಮಹಿಳೆಯರು ಬರುವುದನ್ನೇ ನಿರೀಕ್ಷಿಸುತ್ತಾರೆ. ಅದು ಅವರಿಗೆ ಮಹಿಳೆಯರ ಮೇಲಿರುವ ಕಾಳಜಿಯಿಂದಾಗಿಯೋ ಅಥವಾ ಅವರಿಗೆ ಸಮಾನ ಅವಕಾಶಗಳನ್ನು ನೀಡಬೇಕೆಂಬ ಹಂಬಲದಿಂದಾಗಿಯೋ ಅಲ್ಲ. ರಾಜಕೀಯ ಪಕ್ಷಗಳು ತಮ್ಮ ಹಿತಾಸಕ್ತಿ ಕಾಯ್ದುಕೊಳ್ಳಲು ಮಹಿಳಾ ಅಭ್ಯರ್ಥಿಗಳನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳಬೇಕೆಂಬ ಉದ್ದೇಶವೇ ಮುಖ್ಯವಾಗಿರುತ್ತದೆ. ಪಕ್ಷಗಳಿಗೆ ಸಾಮರ್ಥ್ಯವುಳ್ಳ, ತಮ್ಮ ಹಕ್ಕನ್ನು ಪ್ರತಿಪಾದಿಸುವಂತಹ ಮಹಿಳಾ ಅಭ್ಯರ್ಥಿಗಳು ಬೇಕಿಲ್ಲ, ಬದಲಾಗಿ ತಾವಾಡಿಸಿದಂತೆ ಕುಣಿಯುವ ಕೈಗೊಂಬೆಗಳು ಬೇಕು. ಚಿತ್ರದಲ್ಲೂ ಇದೇ ಕಾರಣಕ್ಕಾಗಿ ಪಕ್ಷದ ಟಿಕೆಟ್‌ಗಾಗಿ ಹೊಡೆದಾಡುವ ಮಿಕ್ಕಿಬ್ಬರು ವಿದ್ಯಾವಂತ ಮಹಿಳಾ ಅಭ್ಯರ್ಥಿಗಳಿಗಿಂತ ಮುಖಂಡರಿಗೆ ರಾಮಕ್ಕನೇ ಸರಿಯಾದ ಆಯ್ಕೆ ಎನಿಸುತ್ತದೆ.

ಕುಟುಂಬದೊಳಗಿರುವ ಹೆಣ್ಣಿನ 'ಗೃಹಿಣಿ'ಯೆಂಬ ಸಾಮಾಜಿಕ ಪಾತ್ರವೂ ಬದಲಾಗಿದೆ. ಪಂಚಾಯತಿ ರಾಜಕಾರಣದ ಪರಿಣಾಮವಿದು. ಮನೆಯ ಹೆಣ್ಣು ಮಕ್ಕಳ ಮೂಲಕ ಅಧಿಕಾರ ಚಲಾಯಿಸುವ ಪುರುಷರ ಪ್ರತಿನಿಧಿಯಾಗಿ ಬರುವ ಕಲ್ಲೇಶಿ, ಹೆಂಡತಿಯ ಮನೆಗೆಲಸದಲ್ಲಿ ಮಗ್ನಳಾಗಿ ಕುಳಿತಿದ್ದರೆ, ಅದೆಲ್ಲಾ ಬಿಸಾಕಿ ಸಭೆಗೆ ಹೋಗಲು ಸಿದ್ಧಳಾಗಲು ಹೇಳುವುದೇ ಈ ಬದಲಾದ ಪರಿಯನ್ನು ಸೂಚಿಸುತ್ತದೆ. ಹೆಂಡತಿಯ ವೇಷಭೂಷಣದ ಬಗ್ಗೆ ಗಮನ ಕೊಡುವುದು ಅವನಿಗೆ ಹೆಮ್ಮೆಯ ವಿಷಯವೇ. ಪಂಚಾಯಿತಿ ಅಧ್ಯಕ್ಷೆಯ ಗಂಡನೆಂದು ಕರೆಸಿಕೊಳ್ಳುವುದೂ ಅವನಿಗೆ ಹೆಮ್ಮೆಯೇ. ಅವಳಿಗೆಂದು ನೀಡಿದ ಹಾರವನ್ನು ತಾನೇ ಹಾಕಿಸಿಕೊಳ್ಳುವುದು ಮತ್ತು ಸಭೆಗೆ ಹೋಗುವ ಹೆಂಡತಿಯೊಂದಿಗೆ ಜುಮ್ಮಂದು ತಾನೂ ಕಾರಿನಲ್ಲಿ ಕುಳಿತುಕೊಳ್ಳುವಾಗಲೂ ಅವನದು ತಾನೇ ಅಧ್ಯಕ್ಷನೆಂಬ ಟೇವಿಯಿರುತ್ತದೆ.

ಹೊರ ಜಗತ್ತಿನ ಕಾರುಬಾರಿನ ಬಗ್ಗೆ ಕಿಂಚಿತ್ತೂ ಜ್ಞಾನವಿಲ್ಲದಿರುವ ಮುಗ್ಧ ಹೆಣ್ಣೊಬ್ಬಳು ಜಿಲ್ಲಾ ಪಂಚಾಯತ್ ಅಧ್ಯಕ್ಷರ ಕುರ್ಚಿಯಲ್ಲಿ ಕೂತು ಎದುರಿಸಬೇಕಾದ ಆತಂಕ, ಕಸಿವಿಸಿ, ನಾಚಿಕೆ ಎಲ್ಲವನ್ನು ಕಣ್ಣಿಗೆ ಕಟ್ಟುವಂತೆ ತೋರಿಸುವ ನಟಿ ತಾರಾ ಅವರ ಅಭಿನಯ ಮೆಚ್ಚುಗೆಗೆ ಪಾತ್ರವಾದದ್ದು. ಓದು ಬರಹ ಗೊತ್ತಿಲ್ಲದ ರಾಮಕ್ಕನನ್ನು ಮೂಲೆಗುಂಪು ಮಾಡಿ ಕಲ್ಲೇಶಿ ಹಾಗೂ ಅವನ ಮೂಲಕ ಶಾಸಕ ಭರಮಣ್ಣ ಮತ್ತು ಇತರ ಅಧಿಕಾರಿಗಳು ದುರಾಡಳಿತ ನಡೆಸಿದಾಗ ಊರಿನ ಎಲ್ಲರ ಕುಹುಕ ನುಡಿಗಳು ರಾಮಕ್ಕನನ್ನೇ ಗುರಿ ಮಾಡುತ್ತವೆ. ಮಹಿಳೆಯರು ರಾಜಕಾರಣಕ್ಕೆ ಪ್ರವೇಶಿಸಿದರೆ ಅವರ ಹೆಸರಿನಲ್ಲಿ ಅವರ ಗಂಡಂದಿರು ದುರಾಡಳಿತ ನಡೆಸುತ್ತಾರೆ; ಆದ್ದರಿಂದ ಮಹಿಳೆಯರನ್ನು ರಾಜಕಾರಣದಿಂದ ದೂರವಿಟ್ಟಷ್ಟೂ ಒಳ್ಳೆಯದು ಎನ್ನುವಂತಹ ಅಣಕದ ಮಾತುಗಳನ್ನು ನಿಜ ಜೀವನದಲ್ಲಿ ಎಷ್ಟೋ ರಾಮಕ್ಕಂದಿರು ಇಂದಿಗೂ ಕೇಳಬೇಕಾಗಿ ಬಂದಿದೆ. ಅಲ್ಲದೆ ಅನಕ್ಷರಸ್ಥೆಯೆಂಬ ಕಾರಣಕ್ಕೆ ರಾಮಕ್ಕ ತನ್ನದೇ ಪಕ್ಷದ ಇತರ ಮಹಿಳೆಯರಿಂದಲೂ ಅಸಡ್ಡೆ ಮತ್ತು ಅಗೌರವಗಳಿಂದಲೇ ಕಾಣಲ್ಪಡುತ್ತಾಳೆ. ಇದನ್ನು ಈ ಚಿತ್ರ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಹೆಂಡತಿಯ ಪಾಲಿಗೆ ಬಂದ ಅಧಿಕಾರ ತನ್ನದ್ದೇ ಎಂದು ಬೀಗುವ ಕಲ್ಲೇಶಿ ರಾಮಕ್ಕನ ಹೆಸರಿನಲ್ಲಿ ಅಪ್ರಾಮಾಣಿಕವಾದ ವ್ಯವಹಾರದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಈ ಮಧ್ಯೆ ಅನಕ್ಷರಸ್ಥೆಯಾದ ತನ್ನ ಹೆಂಡತಿ ಓದು ಬರಹ ಕಲಿತದ್ದು ಅವನಿಗೆ ಸೋಜಿಗದ ವಿಷಯವಾಗಿ ಕಂಡರೂ ಆ ಬೆಳವಣಿಗೆಯನ್ನು ಅವನು ನಗುಮೊಗ ಮತ್ತು ಹೆಮ್ಮೆಯಿಂದಲೇ ಸ್ವಾಗತಿಸುತ್ತಾನೆ. ರಾಮಕ್ಕನ ಹೊಸ ರೂಪ ಮತ್ತು ಸಾಮರ್ಥ್ಯ ಕಂಡು ಬೆರಗಾಗುತ್ತಾನೆ. ಅವಳು ತನ್ನ ಸ್ವಂತ ಬುದ್ಧಿಯಿಂದ ಮುಖ್ಯವಾದ ನಿರ್ಧಾರಗಳನ್ನು ತೆಗೆದುಕೊಳ್ಳಲು ಮುಂದಾದಾಗ ಅವಳ ನಡವಳಿಕೆ ಅವನಿಗೆ ನುಂಗಲಾರದ ಬಿಸಿ ತುಪ್ಪವಾದರೂ, ಅವನು ಅವಳ ದಾರಿಯ ಮುಳ್ಳಾಗುವುದಿಲ್ಲ.





ಊರಿನವರಾಗಲಿ, ಶಾಸಕನಾಗಲಿ ತನ್ನ ಹೆಂಡತಿಯ ಚಾರಿತ್ರ್ಯದ ಬಗ್ಗೆ ಪ್ರಶ್ನಿಸಿದಾಗ ಅದಕ್ಕೆ ತಕ್ಕ ಉತ್ತರ ಕೊಡುತ್ತಾನೆ. ರಾಜಕೀಯದಲ್ಲಿ ಕೆಲಸ ಮಾಡಲಿಚ್ಛಿಸುವ ಹೆಣ್ಣು ಮಕ್ಕಳ ಚಾರಿತ್ರ್ಯವಧೆ ಸಮಾಜ ಅವರನ್ನು ಬಗ್ಗು ಬಡೆಯಲು ಬಳಸುವ ಅಸ್ತ್ರ ಎಂಬುದು ವಿಪರ್ಯಾಸದ ಸಂಗತಿ. ಅಧ್ಯಕ್ಷೆ ರಾಮಕ್ಕನನ್ನು ಭೇಟಿ ಮಾಡಲು ಹೋದ ಗ್ರಾಮಸ್ಥನಿಗೆ ಕಚೇರಿಯ ಕಾವಲು ಸೇವಕ ಅಧ್ಯಕ್ಷರು ಅವರ ಪಿ.ಎ. ಜೊತೆ ಸಭೆ ನಡೆಸುತ್ತಿದ್ದಾರೆ. ಮೂರು ಗಂಟೆ ಬಿಟ್ಟು ಬಾ, ಎಂದಾಗ ಅದನ್ನು ತಪ್ಪಾಗಿ ಗ್ರಹಿಸುವ ಆತ ಕಲ್ಲೇಶಿಯ ಬಳಿ ಬಂದು ಅದನ್ನೇ ವ್ಯಂಗ್ಯವಾಗಿ ವರದಿ ಮಾಡಿದಾಗ, ಒಂದು ಕ್ಷಣ ಕಲ್ಲೇಶಿ ಪೆಚ್ಚಾದರೂ ತೋರಿಸಿಕೊಳ್ಳದೆ, ಏನೂ ಆಗದವನಂತೆ ಅವಳನ್ನು ಸಮರ್ಥಿಸಿಕೊಳ್ಳುತ್ತಾನೆ. ಆದರೆ ಕಡೆಯಲ್ಲಿ ಇದೇ ಅಸ್ತ್ರವನ್ನು ತನ್ನ ಹೆಂಡತಿಯ ವಿರುದ್ಧ ಶಾಸಕ ಭರಮಪ್ಪ ಬಳಸಿದಾಗ ಅವನಿಗೆ ತಕ್ಕ ಉತ್ತರ ಕೊಟ್ಟು ಕಲ್ಲೇಶಿ ಸಭೆಯಿಂದ ಹೆಂಡತಿಯೊಂದಿಗೆ ಹೊರನಡೆಯುತ್ತಾನೆ.

ಇಲ್ಲಿ ರಾಮಕ್ಕನ ರೂಪಾಂತರಕ್ಕೆ ಮುಖ್ಯ ಕಾರಣವಾಗುವ ಆಪ್ತ ಕಾರ್ಯದರ್ಶಿಯ ಪಾತ್ರ ತುಂಬಾ ಚೆನ್ನಾಗಿ ಬಂದಿದೆ. ರಾಮಕ್ಕನಿಗೆ ಆತ್ಮಸ್ಥೈರ್ಯ ತುಂಬಿ, ಅಕ್ಷರದ ಜ್ಞಾನವನ್ನು ಧಾರೆಯೆರೆದು ಅವಳು ತನ್ನೆಲ್ಲ ಕರ್ತವ್ಯಗಳನ್ನು ದಕ್ಷವಾಗಿ ನಿಭಾಯಿಸಲು ನೆರವಾಗುತ್ತಾನೆ. ಅಧಿಕಾರದ ಭದ್ರ ಕೋಟೆಯಾಗಿರುವ ರಾಜಕೀಯದಲ್ಲಿ ಇಂತಹ ಸ್ತ್ರೀಪರ ಮನಸ್ಸುಗಳ ಅವಶ್ಯಕತೆಯಿರುವುದು ಮತ್ತು ಗಂಡಸರೆಲ್ಲಾ ಕೆಟ್ಟವರಲ್ಲ, ಎಂಬ ಸನ್ನಿವೇಶವನ್ನು ಈ ದೃಶ್ಯ ಚಿತ್ರಿಸುತ್ತದೆ. ಸಭೆಯಲ್ಲಿ ತನಗಾಗಿದ್ದ ಅವಮಾನದಿಂದ ನೊಂದು ಚಿತ್ರದ ಕೊನೆಯಲ್ಲಿ ಗಂಡನೊಡನೆ ಕಾರಿನಲ್ಲಿ ಬರುತ್ತಿದ್ದ ರಾಮಕ್ಕ, ಗಂಡ ಅವಳನ್ನು 'ಹೆಬ್ಬೆಟ್ ರಾಮಕ್ಕ' ಎಂದು ಮೊದಲಿನಂತೆಯೆ ಸಂಬೋಧಿಸಿದಾಗ ನೊಂದುಕೊಳ್ಳುತ್ತಾಳೆ. ಕೂಡಲೇ ತಾನು ಮಾಡಿದ ತಪ್ಪನ್ನು ಅರಿತ ಕಲ್ಲೇಶಿ, ಅವಳಿಗೆ ತಕ್ಕ ಮರ್ಯಾದೆಯನ್ನು ಕೊಟ್ಟು 'ಮೇಡಮ್ ರಾಮಕ್ಕ' ಎಂದು ಕರೆದಾಗ ಅವಳ ಮುಖದ ಮೇಲೆ ಮೂಡುವ ನಗು ರಾಮಕ್ಕ ಮತ್ತು ಕಲ್ಲೇಶಿ – ಇಬ್ಬರೂ ಹೆಣ್ಣಿನ ರಾಜಕೀಯ ಪ್ರವೇಶದ ಪ್ರಕ್ರಿಯೆಯಲ್ಲಿ ಮಾಗಿದ ಆರೋಗ್ಯಪೂರ್ಣ ಪಾತ್ರಗಳಾಗಿ ಕಾಣಿಸುತ್ತಾರೆ.

ಮಲಿನವಾಗಿ ನಾರುತ್ತಿರುವ ಈ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಶುಚಿಗೊಳಿಸಲು ಸ್ವತಃ ರಾಮಕ್ಕನೇ ಪೊರಕೆಯಾಗಬೇಕೆಂಬ ಸಂದೇಶವನ್ನು ನೀಡಲು ಸೂಫಿ ಪೀರನ ಪಾತ್ರವನ್ನು ತಂದಿರುವುದು ಧ್ವನಿಪೂರ್ಣವಾಗಿದೆ. ಕಲ್ಲೇಶಿ, ಆಪ್ತಕಾರ್ಯದರ್ಶಿ ಮತ್ತು ಬಾಬಾ ಪೀರ – ಈ ಮೂರೂ ಪುರುಷ ಪಾತ್ರಗಳು ರಾಮಕ್ಕನ ಪಯಣ ಮತ್ತು ರೂಪಾಂತರಕ್ಕೆ ಸೂಕ್ತ ಬೆಂಬಲ ನೀಡುವಂತಹ ವ್ಯಕ್ತಿಗಳು. ಇಂತಹ ಬೆಂಬಲ ಸಾರ್ವಜನಿಕ ಬದುಕಿಗೆ ಕಾಲಿಡುವ ಪ್ರತಿಯೊಬ್ಬ ಹೆಣ್ಣು ಮಗಳಿಗೂ ದೊರಕಿದರೆ ಆಕೆ ಸಮರ್ಪಕವಾಗಿ ಕೆಲಸ ಮಾಡಲು, ದಕ್ಷವಾಗಿ ಆಡಳಿತ ನಡೆಸಲು ಸಹಾಯಕಾರಿ ಎಂಬ ಸಂದೇಶವನ್ನು ನಿರ್ದೇಶಕರು ಕೊಟ್ಟಿದ್ದಾರೆ.

ರಾಮಕ್ಕ ಅನಕ್ಷರಸ್ಥೆಯಾದರೂ ಸಹೃದಯಿ ಹೆಣ್ಣು. ಸುತ್ತಲಿನ ಜನ ಕಷ್ಟಕ್ಕೆ ಸ್ಪಂದಿಸುವಂತಹವಳು. ಗರ್ಭಿಣಿ ಹೆಂಗಸಿಗೆ ಆಸ್ಪತ್ರೆಗೆ ಹೋಗಲು ವಾಹನ ಸೌಕರ್ಯವಿಲ್ಲದಾಗ ತಾನು ಸಭೆಗೆ ಹೋಗಬೇಕಾದ ತುರ್ತು ಇದ್ದರೂ ಲೆಕ್ಕಿಸದೆ ತನ್ನ ಗಾಡಿಯಲ್ಲಿ ಆ ಹೆಂಗಸನ್ನು ಆಸ್ಪತ್ರೆಗೆ ಸೇರಿಸುತ್ತಾಳೆ. ಅವಳಿಗೆ ಓದಲು ಬರೆಯಲು ಬರುವುದಿಲ್ಲವೆಂದು ಕುಹುಕನೊಬ್ಬ ಕುಹುಕವಾಡಿದಾಗ ಛಲದಿಂದ ಅಕ್ಷರಾಭ್ಯಾಸವನ್ನು ಮಾಡಿ, ಪಂಚಾಯತ್‌ನ ಆಡಳಿತ ಮತ್ತು ವ್ಯವಹಾರಗಳ ಬಗ್ಗೆ ಜ್ಞಾನವನ್ನು ಸಂಪಾದಿಸುತ್ತಾಳೆ. ಅವಳ ಈ ಹೊಸ ರೂಪ ಮತ್ತು ಕಾರ್ಯವೈಖರಿ ಎಲ್ಲರಲ್ಲೂ ಅಚ್ಚರಿ ಮೂಡಿಸುತ್ತದೆ. ರಾಮಕ್ಕನ ಜ್ಞಾನ ವಿಸ್ತಾರವಾದಂತೆಲ್ಲ ಅವಳ ಉದ್ದೇಶಗಳೂ ಸದೃಢವಾಗುತ್ತಾ ಹೋಗುತ್ತವೆ. ತಾನು ಹಳ್ಳಿಗಾಡಿನ ಜನರ ಪ್ರತಿನಿಧಿ. ಮಹಿಳೆಯರ, ಮಕ್ಕಳ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ಬಗೆಹರಿಸುವುದು ತನ್ನ ಜವಾಬ್ದಾರಿ ಎಂಬುದನ್ನು ಅರಿತು ಆ ದೆಸೆಯಲ್ಲಿ ಕಾರ್ಯಪ್ರವೃತ್ತಳಾಗುತ್ತಾಳೆ. ತನ್ನ ಗಂಡನ ಮೇಲೇ ಆರೋಪವೊಂದು ಬಂದಾಗ ತನಿಖೆಗೆ ಆದೇಶಿಸಿ ಯಾವುದೇ ಮುಲಾಜಿಲ್ಲದೆ ನಿರ್ಭೀತಿಯಿಂದ ಆ ಸಂದರ್ಭವನ್ನು ಎದುರಿಸುತ್ತಾಳೆ. ತನ್ನೆದುರಿಗೆ ಬರುವ ಸವಾಲುಗಳನ್ನೆಲ್ಲ ಎದುರಿಸುತ್ತ ಯಶಸ್ಸಿನ ಏಣಿಯನ್ನು ಏರುತ್ತಾಳೆ. ಚಿತ್ರದ ಕೊನೆಯಲ್ಲಿ ಬರುವ ಸಂದೇಶ: ರಾಮಕ್ಕ ಮುಂದಿನ ಶಾಸನಸಭೆಯ ಚುನಾವಣೆಯಲ್ಲಿ ಎಂ.ಎಲ್.ಎ. ಭರಮಪ್ಪನನ್ನು ಸೋಲಿಸಿ ಎಂ.ಎಲ್.ಎ. ಆಗಿ ಚುನಾಯಿತಳಾಗುತ್ತಾಳೆ. ಆ ಮೂಲಕ ಮುಂದೆ ಬರುವ ರಾಮಕ್ಕಂದಿರಿಗೆ ದಿಟ್ಟ ಮಾದರಿಯಾಗುತ್ತಾಳೆ.

ರಾಜಕೀಯದಲ್ಲಿ ಮಹಿಳೆಯರಿಗೆ ಮೀಸಲಾತಿ ಕೊಡುವುದಷ್ಟೇ ಅಲ್ಲದೆ ಅವರು ಒಳ್ಳೆಯ ಆಡಳಿತಗಾರ್ತಿಯರು ಮತ್ತು ನಾಯಕಿಯರಾಗಲು ಸೂಕ್ತವಾದ ವಾತಾವರಣವನ್ನು ಸಮಾಜ ಕಲ್ಪಿಸಿಕೊಡುವುದು ಅತ್ಯವಶ್ಯಕ ಎಂಬ ಸತ್ಯವನ್ನು ಈ ಚಿತ್ರ ನಮಗೆ ಮನನ ಮಾಡಿಕೊಡುತ್ತದೆ. ಹಾಗಿದ್ದಾಗ ಮಾತ್ರ ಹೆಚ್ಚಿನ ಸಂಖ್ಯೆಗಳಲ್ಲಿ ಮಹಿಳೆಯರು ರಾಜಕೀಯ ರಂಗವನ್ನು ಪ್ರವೇಶಿಸಲು ಸಾಧ್ಯ.

ರಾಮಕ್ಕ ಮತ್ತು ಕಲ್ಲೇಶಿ ಪಾತ್ರಗಳಲ್ಲಿ ನಟರಾದ ತಾರಾ ಮತ್ತು ದೇವರಾಜ್ ಅವರ ಸಂಯಮದ ಅಭಿನಯ ಚಿತ್ರಕ್ಕೆ ಮೆರಗು ನೀಡುತ್ತದೆ. ಶಾಸಕರಾಗಿ ಹನುಮಂತೇ ಗೌಡ ಮತ್ತು ಉಸ್ತುವಾರಿ ಸಚಿವರಾಗಿ ನಾಗರಾಜ್ ಮೂರ್ತಿಯವರ ನಟನೆಯೂ ಮೆಚ್ಚುವಂತಹದ್ದೇ. ಹಾಗೆಯೇ ಶ್ರೀ ಎಸ್. ಜಿ. ಸಿದ್ದರಾಮಯ್ಯ ಅವರ ಚುರುಕಾದ ಮತ್ತು ಧ್ವನಿಪೂರ್ಣವಾದ ಸಂಭಾಷಣೆ ಮತ್ತು ಚಿತ್ರಕತೆ ಗಮನ ಸೆಳೆಯುತ್ತದೆ.

**ಮೈತ್ರಿ ಬೆಂಗಳೂರು**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

## ಗಿರಡ್ಡಿ ಗೋವಿಂದರಾಜ ಇನ್ನಿಲ್ಲ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಖ್ಯಾತ ವಿಮರ್ಶಕರೆಂದು ಹೆಸರು ಗಳಿಸಿದ್ದ ಗಿರಡ್ಡಿ ಗೋವಿಂದರಾಜ ಅವರು ೧೧–೫–೨೦೧೮ರಂದು ನಮ್ಮನ್ನಗಲಿದ್ದಾರೆ. ಗಿರಡ್ಡಿಯವರು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದರು. ದಿವಂಗತರಿಗೆ 'ನವಕರ್ನಾಟಕ ಪ್ರಕಾಶನ' ಮತ್ತು 'ಹೊಸತು' ಬಳಗದ ನಮನಗಳು.




# ಮಹರ್ಷಿ ಕರ್ವೆ ಅವರ ನೆನಪಿನ ಜಾಡು ಹಿಡಿದು

ಮಹರ್ಷಿ ದೋಂಡೋಪಂತ ಕರ್ವೆಯವರು ಸ್ಥಾಪಿಸಿದ ಎಸ್. ಎನ್. ಡಿ. ಟಿ. ವಿಶ್ವವಿದ್ಯಾಲಯ ಭಾರತದಲ್ಲಿಯಷ್ಟೇ ಅಲ್ಲ, ಈಶಾನ್ಯ ಏಷ್ಯಾದಲ್ಲಿಯೇ ಮೊಟ್ಟ ಮೊದಲ ಮಹಿಳಾ ವಿಶ್ವವಿದ್ಯಾಲಯ ಎಂಬ ಖ್ಯಾತಿಗೆ ಪಾತ್ರವಾಗಿದೆ. ಆಧುನಿಕ ಭಾರತದ ಸಮಾಜ ನಿರ್ಮಾಣದಲ್ಲಿ ಮಹರ್ಷಿ ಕರ್ವೆಯವರಿಗೆ ವಿಶಿಷ್ಟ ಸ್ಥಾನ. ಮಹಿಳಾ ಶಿಕ್ಷಣದ ಕ್ಷೇತ್ರಕ್ಕೆ ಅವರದು ಅನುಪಮ ಸೇವೆ. ಹತ್ತೊಂಭತ್ತನೆಯ ಶತಮಾನದ ಅರುಣೋದಯದಲ್ಲಿ ಹಿಂದೂ ಸಮಾಜದ ಶೋಷಿತ ಮಹಿಳೆಯರಾದ ವಿಧವೆಯರ ಬದುಕಿಗೆ ಶಿಕ್ಷಣದ ಮೂಲಕ ಬೆಳಕು ಬೀರಿದ ಕರ್ವೆಯವರ ಕರ್ಮಕ್ಷೇತ್ರವಾದ ಪುಣೆಯಲ್ಲಿ ಅವರು ಕಟ್ಟಿದ ವಿದ್ಯಾಸಂಸ್ಥೆ ಮತ್ತು ಅವರ ನೆನಪಿನ ಸ್ಮಾರಕವನ್ನು ಕಂಡು ಡಾ॥ ಎನ್. ಗಾಯತ್ರಿಯವರು ಬರೆದ ಲೇಖನ ಇಲ್ಲಿದೆ.

**ಡಾ॥ ಎನ್. ಗಾಯತ್ರಿ**

ಫುಲೆ, ಕರ್ವೆ, ರಮಾಬಾಯಿ – ಈ ಎಲ್ಲರ ಕರ್ಮ ಕ್ಷೇತ್ರವಾದ ಪುಣೆಗೆ ಹಲವಾರು ಬಾರಿ ಭೇಟಿ ನೀಡಿದ್ದೆನಾದರೂ ಈ ಬಾರಿ ಮಗಳೊಂದಿಗೆ ಮತ್ತೊಮ್ಮೆ ಪುಣೆ ದರ್ಶನಕ್ಕೆ ಹೊರಟೆ. ಪುಣೆಯ ರೈಲ್ವೇ ಸ್ಟೇಷನ್‌ನಿಂದ ಪಶ್ಚಿಮ ಭಾಗಕ್ಕೆ ಸುಮಾರು ಹತ್ತು ಕಿಲೋ ಮೀಟರ್‌ಗಳ ಪ್ರಯಾಣ ಬೆಳೆಸಿದರೆ ಸಿಕ್ಕುವುದು ಕರ್ವೆ ನಗರ. ಅಲ್ಲಿದೆ ಕರ್ವೆಯವರು ಸ್ಥಾಪಿಸಿದ ಮಹರ್ಷಿ ಕರ್ವೆ ಸ್ತ್ರೀ ಶಿಕ್ಷಣ ಸಂಸ್ಥೆ. ೧೨೨ ವರ್ಷಗಳ ಹಿಂದೆ ಕಟ್ಟಲಾದ ಈ ಶಾಲೆ ಈಗ ಪುಣೆಯ ಹಲವಾರು ಭಾಗಗಳಿಂದ ಬರುವ ಸುಮಾರು ೨೫,೦೦೦ ಹೆಣ್ಣುಮಕ್ಕಳು ಓದುತ್ತಿರುವ ಶಾಲೆಯಾಗಿದೆ. ಸಂಸ್ಥೆಯನ್ನು ಪ್ರವೇಶಿಸಿದೊಡನೆ ಎಡಭಾಗದಲ್ಲಿ ಒಂದು ವಿಶಾಲವಾದ ಆಟದ ಮೈದಾನ ಮತ್ತು ವಿಶಾಲವಾದ ಕ್ಯಾಂಪಸ್ ಕಣ್ಣು ಸೆಳೆಯುತ್ತದೆ. ಆ ಮೈದಾನಕ್ಕೆ ಅಂಟಿಕೊಂಡಂತೆ ಕ್ರಿಶ್ಚಿಯನ್ ಚಾಪೆಲ್‌ನಂತೆ ಕಾಣುವ ಕಟ್ಟಡ ಕಣ್ಣಿಗೆ ಬೀಳುತ್ತದೆ. ಅದೇ ಕರ್ವೆಯವರ ಸಮಾಧಿ. ತಾಮ್ರದ ಕರ್ವೆಯವರ ಪುತ್ಥಳಿ ಕಣ್ಣಿಗೆ ಕಾಣುತ್ತದೆ. ಅದರ ಪಕ್ಕದಲ್ಲಿ ಅವರ ಮಡದಿ ರಾಧಾಬಾಯಿ ಮತ್ತು ಅವರ ಸೋದರಿ ಪಾರ್ವತಿಬಾಯಿ ಅಠಾವಳೆಯವರ ಸಮಾಧಿಗಳೂ ಇವೆ.

ಈ ಸಮಾಧಿಯನ್ನು ನೋಡಿ ಬಲಕ್ಕೆ ಮುಂದುವರೆದರೆ ಹಳೆಯ ಜೋಪಡಿಗಳಂತೆ ಕಾಣುವ ಮೂರು ನಾಲ್ಕು ಕೊಠಡಿಗಳ ಸಾಲು ಕಾಣಬರುತ್ತದೆ. ಇದು ಮಹಿಳಾ ವಿದ್ಯಾಲಯ ಆರಂಭವಾದಾಗ ಕಟ್ಟಿರುವ ಕೊಠಡಿಗಳು. ಈ ಕೊಠಡಿಯ ಮುಂದೆ ನಿಂತಾಗ ಒಮ್ಮೆ ಮೈಝುಮ್ಮೆನ್ನುತ್ತದೆ. ನಮ್ಮ ಮುತ್ತಜ್ಜಿಯ ವಯಸ್ಸಿನ, ವಿಧವಾ ಮಹಿಳೆಯರು ಅಕ್ಷರಾಭ್ಯಾಸವನ್ನು ಆರಂಭಿಸಿದ ಈ ತಾಣ ನಮಗೆ ಜ್ಞಾನ ದೀಕ್ಷೆಯನ್ನು ಕೊಡುವ ಅರ್ಥಪೂರ್ಣ ಸ್ಥಳದಂತೆ ಭಾಸವಾಗುತ್ತದೆ! ಅಲ್ಲಿಯೇ ಪಕ್ಕದಲ್ಲಿ ಕರ್ವೆಯವರಿಗೆ ಸಂಬಂಧಪಟ್ಟ ವಸ್ತುಗಳು ಮತ್ತು ಆ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ಬಿಂಬಿಸುವ ಮಾಹಿತಿಗಳುಳ್ಳ ವಸ್ತುಸಂಗ್ರಹಾಲಯವಿದೆ. ಕರ್ವೆಯವರಿಗೆ ನೀಡಲಾದ ಪ್ರಶಸ್ತಿ, ಫಲಕಗಳು – ಇವೆಲ್ಲವನ್ನು ಈ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ೧೨೨ ವರ್ಷಗಳ ಹಿಂದೆ ಒಬ್ಬ ಧೀಮಂತ ಮನುಷ್ಯನ ಸಮಾಜಮುಖಿ ಚಟುವಟಿಕೆಗಳ ಕಿರು ಪರಿಚಯವನ್ನು ಮಾಡಿಕೊಡುವ ಈ ವಿದ್ಯಾಸಂಸ್ಥೆ ಮತ್ತು ಮ್ಯೂಸಿಯಂಗಳು ಭಾರತದ ಇತಿಹಾಸದ ಪ್ರಮುಖ ಪುಟವೊಂದರ ದರ್ಶನವನ್ನು ನಮಗೆ ಮಾಡಿಸುತ್ತವೆ.

ಮಹಾರಾಷ್ಟ್ರದ ಪುಣೆ, ಹಲವಾರು ಸಾಮಾಜಿಕ ಕ್ರಾಂತಿಕಾರಿಗಳು ಬಾಳಿ, ಬದುಕಿದ್ದ ತವರೂರು. ಮಹಿಳಾ ಶಿಕ್ಷಣದ ಇತಿಹಾಸಕ್ಕೆ ನಾಂದಿ ಹಾಡಿದ ಫುಲೆ ದಂಪತಿಗಳ ಜಾಡಿನಲ್ಲಿ ಹೆಜ್ಜೆ ಹಾಕಿದ ಹಲವಾರು ಮಹನೀಯರಲ್ಲಿ ಮಹರ್ಷಿ ಕರ್ವೆಯವರು ಪ್ರಮುಖರು. ಮಹಾರಾಷ್ಟ್ರದ ರತ್ನಗಿರಿಯ ಶೇರಪಾಲಿಯಲ್ಲಿ ೧೮೫೮ರಲ್ಲಿ ಕರ್ವೆಯವರು ಜನಿಸುವ ವೇಳೆಗಾಗಲೇ ಫುಲೆಯವರು ಪುಣೆಯಲ್ಲಿ ಹೆಣ್ಣು ಮಕ್ಕಳ ಶಾಲೆ ತೆರೆದು ಹತ್ತು ವರ್ಷವಾಗಿತ್ತು. ಫುಲೆಯವರ ಮಹಿಳಾ ಕಲ್ಯಾಣ ಕಾರ್ಯಕ್ರಮಗಳಿಂದ ಪಂಡಿತ ರಮಾಬಾಯಿಯಂತಹ ಸಮಾಜ ಸುಧಾರಕಿಯರು ಆಕರ್ಷಿತರಾಗಿ ಈ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾಗಿದ್ದರು. ಪಂಡಿತ ರಮಾಬಾಯಿ, ಈಶ್ವರ ಚಂದ್ರ ವಿದ್ಯಾಸಾಗರ ಅವರ ವಿಚಾರ ಮತ್ತು ಕಾರ್ಯಗಳಿಂದ ಕರ್ವೆಯವರು ಪ್ರೇರೇಪಿತರಾಗಿ ಮಹಿಳಾ ಶಿಕ್ಷಣಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟರು.



ಕರ್ವೆ ಅವರ ಸಮಾಧಿ

ಕರ್ವೆಯವರಿಗೆ ಮದುವೆಯಾದಾಗ ಕೇವಲ ಹದಿನೈದು ವರ್ಷ. ಅವರ ಹೆಂಡತಿ ರಾಧಾಬಾಯಿಗೆ ಒಂಭತ್ತು ವರ್ಷಗಳು ಮಾತ್ರ. ಮದುವೆಯಾದ ನಂತರ ಅವರು ಮಾಡಿದ ಮೊದಲ ಕೆಲಸವೆಂದರೆ ತಮ್ಮ ಹೆಂಡತಿ ರಾಧಾಬಾಯಿಗೂ, ತಂಗಿ ಅಂಬಾಬಾಯಿಗೂ ಅಕ್ಷರಾಭ್ಯಾಸ ಮಾಡಿಸುತ್ತಾರೆ. ಗಂಡನ ಎಲ್ಲ ಸತ್ಕಾರ್ಯಗಳಿಗೂ ಹೆಗಲಿಗೆ ಹೆಗಲು ಕೊಟ್ಟು ಸಹಕರಿಸಿದ ರಾಧಾಬಾಯಿ ಒಂದು ಗಂಡು ಮಗುವಿನ ತಾಯಿಯಾಗಿ ಕೆಲಕಾಲ ಜೀವಿಸಿದ ನಂತರ ಅನಾರೋಗ್ಯದಿಂದ ತೀರಿಹೋಗುತ್ತಾರೆ. ಕರ್ವೆಯವರು ಅವರಿಗೆ ೩೫ ವರ್ಷ ವಯಸ್ಸಾಗಿದ್ದಾಗ ಮರು ಮದುವೆ ಮಾಡಿಕೊಳ್ಳಲು ನಿರ್ಧರಿಸಿ ಗೋದುಬಾಯಿ ಎಂಬ ವಿಧವೆಯನ್ನು ಮದುವೆಯಾಗಲು ನಿರ್ಧರಿಸುತ್ತಾರೆ. ಈ ಗೋದುಬಾಯಿ ಪಂಡಿತ ರಮಾಬಾಯಿ ಸ್ಥಾಪಿಸಿದ ಶಾರದಾ ಸದನದ ಮೊದಲ ವಿದ್ಯಾರ್ಥಿನಿ.

೧೮೯೩ರಲ್ಲಿ ಅವರು 'ವಿಧವಾ ವಿವಾಹ ಉತ್ತೇಜಕ ಮಂಡಲಿ'ಯನ್ನು ಸ್ಥಾಪಿಸಿ ವಿಧವಾ ಹೆಣ್ಣುಮಕ್ಕಳಿಗೆ ಮರುಮದುವೆಯ ಬಗ್ಗೆ ಉತ್ತೇಜಿಸುವುದಷ್ಟೇ ಅಲ್ಲದೆ ಅವರ ಮಕ್ಕಳ ಅಗತ್ಯಗಳನ್ನು ಪೂರೈಸುವ ವ್ಯವಸ್ಥೆಯನ್ನೂ ಮಾಡುತ್ತಾರೆ. ೧೮೯೫ರಲ್ಲಿ ಈ ಸಂಸ್ಥೆಗೆ 'ವಿಧವಾ ವಿವಾಹ ಪ್ರತಿಬಂಧ ನಿವಾರಕ ಮಂಡಲಿ' ಎಂದು ಮರುನಾಮಕರಣ ಮಾಡುತ್ತಾರೆ. ೧೮೯೬ರಲ್ಲಿ ಕರ್ವೆಯವರು ಪುಣೆಯ ಹೊರವಲಯದಲ್ಲಿ 'ಹಿಂದೂ ವಿಧವೆಯರ ಗೃಹ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ವಿಧವೆಯರಿಗೆ ವಸತಿ ಮತ್ತು ಶಾಲೆಯನ್ನು ಆರಂಭಿಸುತ್ತಾರೆ. ೧೯೦೭ರಲ್ಲಿ ಮಹಿಳಾ ವಿದ್ಯಾಲಯವನ್ನು ಆರಂಭಿಸುವುದಲ್ಲದೆ, ಅದರ ಮುಂದಿನ ವರ್ಷ ನಿಷ್ಕಾಮ ಕರ್ಮ ಮಠ ಎಂಬ ಸಂಸ್ಥೆಯನ್ನು ಆರಂಭಿಸಿ ಮಹಿಳಾ ವಿದ್ಯಾಲಯದ ಹೆಣ್ಣುಮಕ್ಕಳಿಗೆ ನೆರವಾಗಲು ತರಬೇತಿಯನ್ನು ನೀಡುತ್ತಾರೆ. ಜಪಾನಿನಲ್ಲಿ ಮಹಿಳೆಯರಿಗೆಂದೇ ವಿಶೇಷ ವಿಶ್ವವಿದ್ಯಾಲಯವಿದೆ ಎಂಬ ಸುದ್ದಿಯನ್ನು ಓದಿದ್ದೇ ತಡ ೧೯೧೬ರಲ್ಲಿ ಕೇವಲ ಐದು ವಿದ್ಯಾರ್ಥಿನಿಯರೊಂದಿಗೆ ಪುಣೆಯಲ್ಲಿ ವಿಶ್ವವಿದ್ಯಾಲಯವನ್ನು ಆರಂಭಿಸಿದರು. ೧೯೧೭–೧೮ರಲ್ಲಿ ಮಹಿಳೆಯರಿಗೆಂದೇ ಪ್ರಾಥಮಿಕ ಶಿಕ್ಷಣದ ತರಬೇತಿ ಕಾಲೇಜನ್ನು ಸ್ಥಾಪಿಸಿದರು. ಹೆಣ್ಣು ಮಕ್ಕಳಿಗಾಗಿ 'ಕನ್ಯಾ ಶಾಲೆ'ಯನ್ನು ಆರಂಭಿಸಿದರು. ಮುಂದೆ, ಸರ್ ವಿಠಲದಾಸ ಥ್ಯಾಕರ್ಸೆಯವರ ಧನ ಸಹಾಯದಿಂದ ಮುಂಬೈನಲ್ಲಿ ಎಸ್.ಎನ್.ಡಿ.ಟಿ. ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ಹಿರಿಮೆ ಕರ್ವೆಯವರದು. ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಯನ್ನು ಆರಂಭಿಸಬೇಕೆಂಬ ಉದ್ದೇಶದಿಂದ ೧೯೩೬ರಲ್ಲಿ ಮಹಾರಾಷ್ಟ್ರ ಗ್ರಾಮೀಣ ಪ್ರಾಥಮಿಕ ವಿದ್ಯಾಸಂಸ್ಥೆಯನ್ನು ಆರಂಭಿಸಿದರು. ಇವರ ಈ ಎಲ್ಲಾ ಸಮಾಜಮುಖಿ ಕಾರ್ಯಗಳನ್ನು ಮೆಚ್ಚಿದ ಸರ್ಕಾರ ೧೯೫೮ರಲ್ಲಿ ಅವರ ನೂರನೆಯ ಹುಟ್ಟುಹಬ್ಬದಂದು ಅವರಿಗೆ 'ಭಾರತರತ್ನ' ಪ್ರಶಸ್ತಿಯನ್ನು ನೀಡಿ ಗೌರವಿಸಿತು.



೧೮೯೬ರಲ್ಲಿ ಕರ್ವೆ ಅವರು ಆರಂಭಿಸಿದ ಹಿಂದೂ ವಿಧವಾ ಗೃಹದ ಮೂಲ ಕಟ್ಟಡದ ಮುಂದೆ ಲೇಖಕಿ

**ಡಾ॥ ಎನ್. ಗಾಯತ್ರಿ**
#೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೧೯













# ಜೀವಪರ ಕಾಳಜಿಯ ಕಲಾವಿದ ರಾಘವೇಂದ್ರ ನಾಯಕ

ಕೆಲವು ಚಿತ್ರಗಳು ನೋಡಿದಾಕ್ಷಣ ಅರ್ಥವಾಗುವುದಿಲ್ಲ ಆದರೆ ಮತ್ತೆ ಮತ್ತೆ ನೋಡಬೇಕೆನ್ನುವಷ್ಟು ಸೆಳೆದುಕೊಂಡು ನಮ್ಮೊಳಗೆ ಕಾಡುತ್ತವೆ ಕಥೆ ಕವಿತೆಗಳಂತೆ. ಕೆಲವು ಚಿತ್ರಗಳಂತೂ ಆಗಸದ ಚಂದಿರನಂತೆ, ಮಗುವಿನ ನಗೆಯಂತೆ, ಸಾಗರದ ಅಲೆಯಂತೆ, ಜುಳುಜುಳು ಝರಿಯಂತೆ ಹರಿದಾಡಿ ನೋಡುಗರನು ಹುರಿಗೊಳಿಸುತ, ನವಿರಾದ ಭಾವಗಳ ಬಿತ್ತಿ ನಿರಾಳಗೊಳಿಸುತ್ತವೆ. ಚಿತ್ರಗಳ ಭಾಷೆ, ಭಾವ, ಲಯ ಅರ್ಥವಾದರೆ ಸಾಕು ನಮ್ಮ ಬೊಗಸೆಯ ತುಂಬ ಒಂದಿಷ್ಟು ಪ್ರೀತಿ, ನೆಮ್ಮದಿ, ಸಂತಸ ಸಮ್ಮಿಲನಗೊಳ್ಳುವುದು. ಕಲೆ, ಸಾಹಿತ್ಯ, ಸಂಗೀತದ ಒಲವುಳ್ಳವರು ಈ ಲೋಕವನ್ನು ಗ್ರಹಿಸುವ ಕ್ರಮವೇ ಬೇರೆ.

ಜಾತಿ, ಧರ್ಮ, ವರ್ಗ, ವರ್ಣ, ಪಕ್ಷ–ಪಂಗಡಗಳನ್ನು ದಾಟಿಕೊಂಡು ಬಣ್ಣ ಕುಂಚಗಳೊಂದಿಗೆ ಧ್ಯಾನಿಕ್ಕಿಳಿದಿರುವ ರಾಘವೇಂದ್ರ ನಾಯಕ ಒಳನೋಟದ ಜಾಡು ಹಿಡಿದು–ಕೊಂಡು ಹೊಸದಾರಿಯಲಿ ಪಯಣಿಸುತ್ತಿದ್ದಾರೆ. ಸದಾ ಸೌಹಾರ್ದತೆ ಮತ್ತು ಸಹಿಷ್ಣುತೆಗಾಗಿ ಕನವರಿಸುವ ಅಪರೂಪದ ಜೀವಪರ ಕಾಳಜಿಯುಳ್ಳ ಸೃಜನಶೀಲ ಕಲಾವಿದರಿವರು. ವಾಲ್‌ಪೇಟಿಂಗ್, ಪುಸ್ತಕಗಳ ಮುಖಪುಟ, ಕವಿತೆಗಳಿಗೆ ಚಿತ್ರ ಹೀಗೆ ಹಲವು ರೀತಿಯಲ್ಲಿ ಚಿತ್ರ ರಚಿಸುವ ಹಿಡಿತಹೊಂದಿದ್ದಾರೆ. ಎಲೆ ಹೂ ಬಳ್ಳಿ ಪಕ್ಷಿ ಮರ ಮುಂತಾದವುಗಳನ್ನೆ ಮುಖ್ಯವಾಗಿಟ್ಟುಕೊಂಡು ಭಿನ್ನ ಬಗೆಯಲಿ ಕಟ್ಟಿಕೊಡುವ ಕ್ರಮ ನಿಜಕ್ಕೂ ಶ್ಲಾಘನೀಯ.

ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಪ್ರಸ್ತುತ ದಾವಣಗೆರೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುವುದರ ಜೊತೆ ಜೊತೆಗೆ 'ಚಲಿಸುವ ರೇಖೆಗಳು' 'ಕಲಿಯುಗದ ರೇಖೆಗಳು' ಶೀರ್ಷಿಕೆಯಡಿಯಲ್ಲಿ ಹಲವೆಡೆ ತಮ್ಮ ಕಲಾಕೃತಿಗಳನ್ನು ಪ್ರದರ್ಶನ ಮಾಡಿ ಕಲಾರಸಿಕರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಇವರ ಕಲಾಸೇವೆಯನ್ನು ಗುರುತಿಸಿ ಹಲವು ಪ್ರಶಸ್ತಿ ಪುರಸ್ಕಾರಗಳು ಅರಸಿಕೊಂಡು ಬಂದಿವೆ.

**– ಕೆ. ಬಿ. ವೀರಲಿಂಗನಗೌಡ್ರ**

**ಎಸ್.ಆರ್.ಜಿ.ಹೆಚ್.ಎಂ. ಪ್ರೌಢಶಾಲೆ, ಸಿದ್ದಾಪುರ–581355.**

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

